# ಕರ್ನಾಟಕದ ವಿಶ್ವ ಪಾರಂಪರಿಕ ತಾಣಗಳು

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
**ಪೂಜಾ ಎಸ್.ಪಿ**

ಮಾರ್ಗದರ್ಶಕರು
**ಡಾ. ರಮೇಶ ನಾಯಕ**
ಪ್ರಾಧ್ಯಾಪಕರು




ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೨೧

# ಕರ್ನಾಟಕದ ವಿಶ್ವ ಪಾರಂಪರಿಕ ತಾಣಗಳು

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

**ಪೂಜಾ ಎಸ್.ಪಿ**

ಮಾರ್ಗದರ್ಶಕರು

**ಡಾ. ರಮೇಶ ನಾಯಕ**

**ಪ್ರಾಧ್ಯಾಪಕರು**





**ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ**

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೨೧

# ಸಂಶೋಧಕರ ಪ್ರಮಾಣಪತ್ರ

**ಕರ್ನಾಟಕದ ವಿಶ್ವ ಪಾರಂಪರಿಕ ತಾಣಗಳು** ಎಂಬ ಮಹಾಪ್ರಬಂಧವನ್ನು **ಡಾ. ರಮೇಶ ನಾಯಕ,** ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಕನ್ನಡ ವಿಶ್ವವಿದ್ಯಾಲಯದ ಸಮಾಜವಿಜ್ಞಾನಗಳ ನಿಕಾಯದ **ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ** ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: 11-01-2021
ಸ್ಥಳ: ವಿದ್ಯಾರಣ್ಯ

Pooja S.P

**(ಪೂಜಾ ಎಸ್.ಪಿ)**
ಸಂಶೋಧನ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

# <u>ಮಾರ್ಗದರ್ಶಕರ ದೃಢೀಕರಣ ಪತ್ರ</u>

**ಪೂಜಾ ಎಸ್.ಪಿ** ಅವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಕರ್ನಾಟಕದ ವಿಶ್ವ ಪಾರಂಪರಿಕ ತಾಣಗಳು** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಸಮಾಜವಿಜ್ಞಾನಗಳ ನಿಕಾಯದ **ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ** ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ: 11/01/2021
ಸ್ಥಳ: ವಿದ್ಯಾರಣ್ಯ

Rnaik

**(ಡಾ. ರಮೇಶ ನಾಯಕ)**
ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

## ಸಂಕ್ಷೇಪಗಳು

| | | |
|---|---|---|
| ಅ.ಅ.ಸಂ. | : | ಅಭಿವೃದ್ಧಿ ಅಧ್ಯಯನ ಸಂಪುಟ |
| ಎ.ಕ. | : | ಎಪಿಗ್ರಾಫಿಯಾ ಕರ್ನಾಟಕ |
| ಎ.ಇಂ. | : | ಎಪಿಗ್ರಾಫಿಯಾ ಇಂಡಿಕಾ |
| ಸೌ.ಇ.ಇ. | : | ಸೌಥ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ |
| ಕ.ವಿ.ಶಾ.ಸಂ. | : | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ |
| ಕ.ಇ.ಅ. | : | ಕರ್ನಾಟಕ ಇತಿಹಾಸ ಅಕಾಡೆಮಿ |
| ವಿ.ಅ.ಸಂ. | : | ವಿಜಯನಗರ ಅಧ್ಯಯನ ಸಂಪುಟ |

| | | |
|---|---|---|
| **A.R.I.E.** | : | Annual Reports on Indian Epigraphy |
| **A.S.I.** | : | Archaeological Survey of India |
| **B.K.I.** | : | Bombay Karnataka Inscriptional |
| **U.N.E.S.C.O.** | : | United Nations Educational Scientific and Cultural Organization |
| **W.H.S.** | : | World Heritage Sites |

# ಪರಿವಿಡಿ

# ಅಧ್ಯಾಯ – ಒಂದು

## ಪ್ರಸ್ತಾವನೆ

ಅಧ್ಯಯನದ ಉದ್ದೇಶ

ವ್ಯಾಪ್ತಿ, ವಿಧಾನ

ಮತ್ತು ಆಕರ ಸಾಮಾಗ್ರಿಗಳ

ಸಮೀಕ್ಷೆ ಮತ್ತು ಸ್ವರೂಪ

## ಅಧ್ಯಾಯ - ಒಂದು

### ಪ್ರಸ್ತಾವನೆ :

ನಾವು ನಮ್ಮ ಹಿಂದಿನವರಿಂದ ಅಮೂಲ್ಯವಾದ ಏನನ್ನು ಪಡೆದುಕೊಂಡಿದ್ದೆವೆಯೋ ಅವನ್ನು ಮುಂದಿನ ಪೀಳಿಗೆಯವರಿಗೆ ಅದೇ ಸ್ಥಿತಿಯಲ್ಲಿ ಉಳಿಸಿಡುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ. ಆದರೂ ಭೌತಿಕ ಸಂಪತ್ತಗಳು ಹಲವಾರು ಕಾರಣಗಳಿಂದಾಗಿ ಎಲ್ಲಾ ಕಾಲದಲ್ಲಿಯೂ ರೂಪಾಂತರಗೊಳ್ಳತ್ತಾ ಬದಲಾವಣೆಗೊಂಡಿರುವುದನ್ನು ಗಮನಿಸಬಹುದು. ಅಂಥ ವಿಷಯ ವಸ್ತುಗಳೇ ನಮ್ಮ ಪರಂಪರೆಯ ದ್ಯೋತಕವಾಗಿ ನಮ್ಮ ಕಣ್ಮುಂದೆ ಇವೆ. ಅವುಗಳನ್ನು ಉಳಿಸಿಕೊಳ್ಳುವುದು ನಮ್ಮ ಜವಾಬ್ದಾರಿ. ಅವು ನಮ್ಮ ಪೂರ್ವಜರ ಅಮೂಲ್ಯವಾದ ಕೊಡುಗೆಗಳಾಗಿವೆ ಅಥವಾ ಪರಂಪರೆ ಸಾಕ್ಷಿಭೂತಗಳಾಗಿ ಚರಿತ್ರೆ ರಚನೆಯ ಮೂಲ ಆಕರಗಳಾಗಿವೆ. ನಮ್ಮ ಸಾಂಸ್ಕೃತಿಕ ಮತ್ತು ನೈಸರ್ಗಿಕ ಸುಂದರ ಪರಂಪರೆಯ ತಾಣಗಳಾಗಿರುವ ತಾಜಮಹಲ್, ತಂಜಾವೂರಿನ ಬೃಹದೇಶ್ವರ ದೇಗುಲ, ಈಜಿಪ್ಟಿನ ಪಿರಮಿಡ್‌ಗಳು ಮತ್ತು ಆಸ್ಟ್ರೇಲಿಯಾದ ಗ್ರೇಟ್ ಬ್ಯಾರಿಯರ್ ರೀಫ್ ಮುಂತಾದ ವಿಶೇಷ ಮತ್ತು ವಿಭಿನ್ನವಾದ ಸ್ಥಳಗಳು ನಮ್ಮ ವಿಶ್ವಪರಂಪರೆಯ ಪ್ರಮುಖ ತಾಣಗಳಾಗಿವೆ. ವಿಶ್ವಪರಂಪರೆಯ ಧ್ಯೋತಕವಾಗಿರುವ ಶ್ರೇಷ್ಠ ಮೌಲ್ಯವುಳ್ಳ ಸಾಂಸ್ಕೃತಿಕ ನೆಲೆಗಳು ಜಗತ್ತಿನ ಯಾವುದೇ ಭಾಗದಲ್ಲಿರಬಹುದು ಅವೆಲ್ಲವುಗಳು ಜಗತ್ತಿನಲ್ಲಿರುವ ಜನರೆಲ್ಲರಿಗೂ ಸೇರಿದವುಗಳೆಂದು ಪರಿಭಾವಿಸಲಾಗಿದೆ.

ಸಾಮಾನ್ಯವಾಗಿ ಮೊದಲನೆಯ ಜಾಗತಿಕ ಸಮರದ ನಂತರ ಪ್ರಾಚೀನ ಪರಂಪರೆಯ ತಾಣಗಳನ್ನು ಉಳಿಸುವ ಆಂದೋಲನಗಳು ಪ್ರಾರಂಭವಾದವು. ಇಂಥ ಸಂಗತಿಗಳು ಜಗತ್ತಿನ ಜನರ ಗಮನವನ್ನು ಸೆಳೆಯತೊಡಗಿದ್ದು ೧೯೫೯ರ ನಂತರ. ಕಾಕತಾಳಿಯಂತೆ ಅದೇ ವರ್ಷ ಈಜಿಪ್ಟಿನಲ್ಲಿ ಆಸ್ವಾನ್ ಅಣೆಕಟ್ಟೆಯ ನಿರ್ಮಾಣ ಕಾರ್ಯ ಆರಂಭವಾಯಿತು. ಆಕಸ್ಮಿಕವಾಗಿ ಆ ಸಂದರ್ಭದಲ್ಲಿ ತಲೆತೋರಿದ ಪರಿಣಾಮಗಳಿಂದ ಅಬುಸಿಂಬೆಲ್ ದೇವಾಲಯಗಳು ಶಾಶ್ವತವಾಗಿ ಮುಳುಗಿ ಹೋಗುವ ಸಂಭವ ಹೆಚ್ಚಾಗಿತ್ತು. ಹಾಗಾಗಿ ಅವುಗಳನ್ನು ಸಂರಕ್ಷಿಸುವುದು ಈಜಿಪ್ಟಿನಂತಹ ದೇಶಕ್ಕೆ ಅಥವಾ ಇನ್ನಾವುದೇ ತೃತೀಯ ಜಗತ್ತಿನ ರಾಷ್ಟ್ರಕ್ಕೂ ಇಂಥ ಕಠಿಣ ಸವಾಲನ್ನು ಎದುರಿಸಿ ಪರಿಹರಿಸಿಕೊಳ್ಳುವುದು ತುಂಬಾ ಕಷ್ಟವಾಗಿತ್ತು. ಆದ್ದರಿಂದ ಈಜಿಪ್ಟ್ ಮತ್ತು ಸುಡಾನ್ ಸರ್ಕಾರಗಳು ವಿಶ್ವಸಂಸ್ಥೆಯ ಮೂಲಕ ತನ್ನ ಪ್ರದೇಶದಲ್ಲಿದ್ದ ಅಬುಸಿಂಬೆಲ್ ದೇವಾಲಯಗಳನ್ನು ಉಳಿಸುವ ಮಹತ್ವದ ಕಾರ್ಯಕ್ಕೆ ಉದಾರ

ದೇಣಿಗೆಯನ್ನು ನೀಡುವಂತೆ ಜಗತ್ತಿನ ಇತರೆ ದೇಶಗಳನ್ನು ವಿನಂತಿಸಿಕೊಂಡವು. ಅಂಥ ವಿನಂತಿಗೆ ಹಲವಾರು ದೇಶಗಳು ಸ್ಪಂದಿಸಿ ಮನುಕುಲವು ನಿರ್ಮಿಸಿದ ಪ್ರಾಚೀನ ಸಾಂಸ್ಕೃತಿಕ ಪರಂಪರೆಯ ಕುರುಹುಗಳನ್ನು ಉಳಿಸಿಕೊಳ್ಳುವ ಮಹತ್ವದ ಕಾರ್ಯದಲ್ಲಿ ನೆರವಾದವೆಂಬುದನ್ನು ತಿಳಿಯಬಹುದು.

ಯುನೆಸ್ಕೋ ಸಂಸ್ಥೆ ಈಜಿಪ್ಟ್‌ನ ಪ್ರಾಚೀನ ಪರಂಪರೆಯ ಭೌತಿಕ ಸಾಕ್ಷಿಗಳನ್ನು ಉಳಿಸಲು ಸು. ೮೦ ಮಿಲಿಯನ್ ಡಾಲರುಗಳಷ್ಟು ಹಣ ವೆಚ್ಚ ಮಾಡಿತು. ಇದರಲ್ಲಿ ಅರ್ಧದಷ್ಟು ಹಣವನ್ನು ಐವತ್ತು ದೇಶಗಳು ನೀಡಿದ್ದವು. ಈಜಿಪ್ಟ್‌ನ ಈ ಯಶಸ್ವಿನಿಂದ ಪರಂಪರೆಯ ತಾಣಗಳನ್ನು ಉಳಿಸುವ ಆಂದೋಲನಗಳು ಆರಂಭವಾದವು. ಇದರ ಪರಿಣಾಮವಾಗಿ ಯುನೆಸ್ಕೋ ಸಂಸ್ಥೆಯು ಜಗತ್ತಿನಾದ್ಯಂತ ಅಸ್ತಿತ್ವದಲ್ಲಿರುವ ಸಾಂಸ್ಕೃತಿಕ ಮತ್ತು ನೈಸರ್ಗಿಕ ತಾಣಗಳನ್ನು ಗುರುತಿಸಿ ಅವುಗಳನ್ನು ಉಳಿಸಿ ರಕ್ಷಿಸುವ ಕಠಿಣ ಕಾರ್ಯನೀತಿಯನ್ನು ಜಾರಿಗೆ ತಂದಿತು.

ಯುನೆಸ್ಕೋ ಪ್ರಪಂಚದ ಹಲವಾರು ದೇಶಗಳಲ್ಲಿರುವ ವಿಶ್ವಪರಂಪರೆಯ ತಾಣಗಳನ್ನು ಗುರುತಿಸಿತು. ೧೯೯೮ರಲ್ಲಿ ಅವುಗಳ ಸಂಖ್ಯೆ ೫೦೬ ಎಂಬುದು ದಾಖಲಾಗಿದೆ. ನಂತರ ಇತ್ತೀಚಿನ ದಿನಗಳಲ್ಲಿ ಜಗತ್ತಿನ ಹಲವು ಪ್ರದೇಶಗಳಲ್ಲಿರುವ ಮಹತ್ವದ ಸಾಂಸ್ಕೃತಿಕ ಪ್ರತೀಕಗಳಾದ ಮುಖ್ಯ ಸ್ಮಾರಕಗಳು ಹಾಗೂ ತಾಣಗಳನ್ನು ಗುರುತಿಸಿ ಪರಂಪರೆ ಪಟ್ಟಿಯಲ್ಲಿ ಸೇರಿಸುವ ನಿರಂತರ ಕಾರ್ಯವನ್ನು ಯುನೆಸ್ಕೋ ಮಾಡುತ್ತಿದೆ. ಬಿಡುಗಡೆಗೊಂಡಿರುವ ಸದ್ಯದ ಅಂಕಿ–ಸಂಖ್ಯೆಯ ದಾಖಲೆಗಳ ಪ್ರಕಾರ ವಿಶ್ವದಲ್ಲಿರುವ ಪ್ರಸ್ತುತ ೧೧೨೧ ವಿಶ್ವಪರಂಪರೆ ತಾಣಗಳಲ್ಲಿ ನಮ್ಮ ಭಾರತದ ೩೭ ತಾಣಗಳು ಸೇರಿವೆ. ಈ ತಾಣಗಳು ಭಾರತದ ಉದ್ದಗಲಕ್ಕೂ ಹರಡಿಕೊಂಡಿರುವುದನ್ನು ಗಮನಿಸಬಹುದು. ಹಾಗೆಯೇ ಕರ್ನಾಟಕದಲ್ಲಿರುವ ಹಲವಾರು ಸ್ಮಾರಕ ಸಂಕೀರ್ಣಗಳಲ್ಲಿ ಮುಖ್ಯವಾಗಿ ಎರಡು ಸ್ಥಳಗಳು ಅಂದರೆ ಹಂಪಿಯ ಸ್ಮಾರಕಗಳು ಮತ್ತು ಪಟ್ಟದಕಲ್ಲು ಸ್ಥಳದಲ್ಲಿರುವ ದೇವಾಲಯಗಳು ವಿಶ್ವಪರಂಪರೆಯ ಪಟ್ಟಿಯಲ್ಲಿರುವುದನ್ನು ಕಾಣುತ್ತೇವೆ.

ಕರ್ನಾಟಕವು ಅತ್ಯಂತ ಶ್ರೀಮಂತವಾದ ಪರಂಪರೆ, ಕಲೆ, ಸಂಸ್ಕೃತಿಯನ್ನು ಹೊಂದಿದ್ದು ರಾಜ್ಯಾದ್ಯಾಂತ ಅಸಂಖ್ಯಾತ ಸಂಖ್ಯೆಯಲ್ಲಿ ಕಂಡುಬರುವ ಅಸಂರಕ್ಷಿತ ಹಾಗೂ ಬೆಳಕು ಕಾಣದ ಸ್ಮಾರಕಗಳು, ಪುರಾತತ್ವ ನಿವೇಶನಗಳು ನಮ್ಮ ಗತಕಾಲದ ಸಾಂಸ್ಕೃತಿಕ ಪರಂಪರೆಗೆ ಸಾಕ್ಷಿಯಾಗಿ ನಿಂತಿವೆ. ಈ ಸ್ಮಾರಕಗಳನ್ನು ಮತ್ತು ಪಾರಂಪರಿಕ ನಿವೇಶನಗಳನ್ನು

ಸಂರಕ್ಷಿಸುವುದು ನಮ್ಮ ಕರ್ತವ್ಯವಾಗಿದೆ. ಅಲ್ಲದೇ ಮುಂದಿನ ಪೀಳಿಗೆಗಾಗಿ ನಾವು ನಿರ್ವಹಿಸಬೇಕಾದ ಮುಖ್ಯ ಗುರಿಯು ಆಗಿದೆ. ಇತಿಹಾಸ ಪ್ರಸಿದ್ಧವಾದ ಪ್ರಾಚೀನ ನಗರಗಳಲ್ಲಿ ಅವಶೇಷಗಳ ರೂಪದಲ್ಲಿರುವ ಹಂಪಿಯು ಹೆಚ್ಚಿನ ಪ್ರಾಮುಖ್ಯತೆ ಪಡೆದಿದೆಯೆಂದರೆ ಉತ್ಪ್ರೇಕ್ಷೆಯಾಗಲಾರದು. ಪ್ರಾಚೀನ ಮತ್ತು ಮಧ್ಯಕಾಲೀನ ಮಹಾನಗರವಾಗಿದ್ದ ಹಂಪಿಯು ಪ್ರಸ್ತುತ ಜಗತ್ತಿನ ಪ್ರವಾಸಿಗರ ಗಮನಸೆಳೆಯುವಲ್ಲಿ ಯಶ್ವಸಿಯಾಗಿದೆಯೆಂದು ತಿಳಿಯಬಹುದು. ಕೇವಲ ಸ್ಮಾರಕಗಳು ಮಾತ್ರ ನಮ್ಮ ಪರಂಪರೆಯ ಪ್ರಮುಖ ಸಾಕ್ಷಿಗಳಲ್ಲ. ನಮ್ಮ ಪರಿಸರದಲ್ಲಿರುವ ನೈಸರ್ಗಿಕ ತಾಣಗಳು ಪ್ರಸಿದ್ಧವಾಗಿದ್ದ ಪ್ರಾಚೀನ ನಗರಗಳು ಹಾಗೂ ಅಲ್ಲಿರುವ ಅವಶೇಷಗಳು ವಿಶ್ವಸಂಸ್ಕೃತಿಗೆ ಸೇರಿದ ಅವಿಚ್ಛಿನ್ನ ಭಾಗಗಳೆಂದು ಸಂಯುಕ್ತ ರಾಷ್ಟ್ರದ ಸಾಂಸ್ಕೃತಿಕ ಅಂಗವಾದ ಯುನೆಸ್ಕೋ ಅವುಗಳ ಮಹತ್ವ ಅರಿತು ಜಾಗತಿಕ ಮಾನ್ಯತೆ ನೀಡಿದೆ. ಇಂಥ ಪರಿಣಾಮಕಾರಿ ಕಾರ್ಯಗಳಿಂದಾಗಿಯೇ ಸುಮಾರು ೧೦-೧೨ ವರ್ಷಗಳಿಂದ ಭಾರತದಲ್ಲಿರುವ ಇತರ ರಾಜ್ಯಗಳು ಮತ್ತು ಕರ್ನಾಟಕ ರಾಜ್ಯದ ಪ್ರಾಚ್ಯಸಂಶೋಧನಾ ಇಲಾಖೆಗಳು ನಡೆಸಿರುವ ಭೂ ಸಂಶೋಧನೆಯಿಂದ ಇದುವರೆಗೂ ಕಣ್ಮರೆಯಾಗಿದ್ದ ಹಲವಾರು ಕಟ್ಟಡಗಳು ಮತ್ತು ಇತರ ಅವಶೇಷ ವೈಶಿಷ್ಟ್ಯಗಳು ಬೆಳಕಿಗೆ ಬಂದಿವೆ. ಪ್ರಾಚೀನ ಕಾಲದ ಇಂಥ ಮಹತ್ವದ ಸಾಕ್ಷಿ ಪ್ರಮಾಣೀಕರಣಗಳು ನಮ್ಮ ದೇಶದ ಐತಿಹಾಸಿಕ ಪರಂಪರೆಯನ್ನು ಜಾಗತಿಕ ಮಟ್ಟದಲ್ಲಿ ಇನ್ನು ಎತ್ತರಕ್ಕೇರಿಸಲು ಸಹಕಾರಿಯಾಗಿವೆಯೆಂದರೆ ತಪ್ಪಾಗಲಾರದು.

ಯುನೆಸ್ಕೋ ಸಂಸ್ಥೆಯು ೧೯೮೬ರಲ್ಲಿ ಹಂಪಿಯನ್ನು ವಿಶ್ವಪಾರಂಪರಿಕ ತಾಣಗಳ ಪಟ್ಟಿಗೆ ಸೇರ್ಪಡೆ ಮಾಡಿಕೊಂಡಿತು. ಹಾಗೆಯೇ ಬಾದಾಮಿಗೆ ೧೦ ಮೈಲಿ ದೂರದಲ್ಲಿರುವ ಪಟ್ಟದಕಲ್ಲು ಕೂಡಾ ನಮ್ಮ ನಾಡಿನ ಮಹತ್ವ ಸ್ಮಾರಕ ಸಂಕೀರ್ಣಗಳಲ್ಲಿ ಒಂದು. ಬಾದಾಮಿ ಚಾಲುಕ್ಯರ ವಾಸ್ತುಶಿಲ್ಪದ ಪ್ರಾತಿನಿಧಿಕ ಕುರುಹುಗಳಾಗಿರುವ ಪಟ್ಟದಕಲ್ಲಿನಲ್ಲಿರುವ ಸ್ಮಾರಕಗಳು ಜಗತ್ತಿನ ಗಮನಸೆಳೆಯುವಲ್ಲಿ ಯಶಸ್ವಿಯಾಗಿವೆ. ಈ ಸ್ಥಳದಲ್ಲಿ ನಿರ್ಮಾಣವಾಗಿರುವ ಸ್ಮಾರಕಗಳಲ್ಲಿ ಬಾದಾಮಿ ಚಾಲುಕ್ಯರ ಕಾಲದ ವಾಸ್ತುಶಿಲ್ಪಗಳ ಪರಾಕಾಷ್ಠತೆಯನ್ನು ಕಾಣಬಹುದು. ಅಧಿಕಾರದ ಗದ್ದುಗೆಯನ್ನೇರುವ ಬಾದಾಮಿ ಚಾಲುಕ್ಯರ ರಾಜರಿಗೆ ಇಲ್ಲಿ ಪಟ್ಟಾಭೀಷೇಕವಾಗುತ್ತಿದ್ದುದರಿಂದ ಇದಕ್ಕೆ ಪಟ್ಟದಕಲ್ಲು ಎಂಬ ಹೆಸರಾಯಿತು, ಬಹುತೇಕ ದೇವಾಲಯುಗಳೆಲ್ಲವು ಒಂದೇ ಸ್ಥಳದಲ್ಲಿ ಅಂದರೆ ಪಟ್ಟದಕಲ್ಲಿನಲ್ಲಿ ಕೇಂದ್ರಿಕೃತವಾಗಿವೆ ಹಾಗಾಗಿ ಇದರ ಮಹತ್ವ ಅರಿತ ವಿಶ್ವಸಂಸ್ಥೆಯು ೧೯೮೭ರಲ್ಲಿ ಪಟ್ಟದಕಲ್ಲನ್ನು ವಿಶ್ವಪರಂಪರೆಯ

ತಾಣವಾಗಿ ಅಂಗೀಕರಿಸಿ ಜಾಗತಿಕ ಭೂಪಟದಲ್ಲಿ ತನ್ನ ಮಹತ್ವ ಹೆಚ್ಚಿಸಿಕೊಳ್ಳುವಂತೆ ಸಹಾಯಕವಾಗಿದೆ.

ಕರ್ನಾಟಕವನ್ನಾಳಿದ ಹಲವು ರಾಜ ಸಂತತಿಗಳ ರಾಜಧಾನಿ ಉಪ ರಾಜಧಾನಿಗಳು ಐತಿಹಾಸಿಕ ಸ್ಥಳಗಳಾಗಿ ಖ್ಯಾತಿಯನ್ನು ಗಳಿಸಿವೆ. ಅಲ್ಲದೇ ಪ್ರಾಚೀನ ವಾಸ್ತು ವೈಭವಗಳ ಕೇಂದ್ರಗಳಾಗಿ ಬೆಳೆದು ಬಂದಿವೆ. ಇವೆಲ್ಲವೂ ಸಹ ಅಂದಿನ ಸಮಾಜೋ-ಧಾರ್ಮಿಕ ಹಾಗೂ ಸಾಂಸ್ಕೃತಿಕ ಪರಂಪರೆ ಶ್ರೇಷ್ಠತೆಯನ್ನು ಪ್ರತಿಪಾದಿಸುತ್ತವೆಂದರೆ ತಪ್ಪಾಗಲಾರದು. ಅವುಗಳ ಪ್ರಾಚೀನ ಹಾಗೂ ಪ್ರಸ್ತುತ ಕಾಲದ ಮಹತ್ವ ಹಾಗೂ ಅವಶ್ಯಕತೆ ಅರಿತು ಅಂಥ ಮಹತ್ವದ ಸ್ಮಾರಕಗಳ ಸಂರಕ್ಷಣೆ ಹಾಗೂ ಐತಿಹಾಸಿಕ ಮಹತ್ವ ವಿಸ್ತರಿಸುವ ಬಗೆಗೆಗಳ ಕುರಿತು ಸಂಶೋಧನಾತ್ಮಕ ನೆಲೆಯಲ್ಲಿ ಅಧ್ಯಯನ ಮಾಡುವ ಮುಖ್ಯ ಉದ್ದೇಶವನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಅಣಿಗೊಳಿಸುವ ಪ್ರಯತ್ನ ಮಾಡಲಾಗಿದೆ. ಈ ನಿಟ್ಟಿನಲ್ಲಿ **'ಕರ್ನಾಟಕದ ವಿಶ್ವಪಾರಂಪರಿಕ ತಾಣಗಳು'** ಎಂಬ ಶೀರ್ಷಿಕೆಯ ಅಡಿಯಲ್ಲಿ ಕರ್ನಾಟಕದ ವಿಶ್ವಪಾರಂಪರಿಕ ತಾಣಗಳ ಕುರಿತು ವಿಶ್ಲೇಷಣಾತ್ಮಕ ಅಧ್ಯಯನ ಕೈಗೊಳ್ಳಲಾಗಿದೆ. ಕರ್ನಾಟಕದಲ್ಲಿರುವ ಪಾರಂಪರಿಕ ಅಥವಾ ಸಂರಕ್ಷಿತ ತಾಣಗಳೆಂದರೆ ಕೇವಲ ಹಂಪಿ ಹಾಗೂ ಪಟ್ಟದಕಲ್ಲು ಸ್ಥಳಗಳಾಗಿವೆ. ಆದರೆ ಅವುಗಳಷ್ಟೇ ಮಹತ್ವ ಹಾಗೂ ಉಪಯುಕ್ತತೆಯನ್ನು ಹೊಂದಿರುವ ಹಲವಾರು ಸ್ಮಾರಕಗಳ ಅಥವಾ ವಿವಿಧ ತಾಣಗಳ ಬಹುದೊಡ್ಡ ಪಟ್ಟಿಯೇ ನಮ್ಮ ಕಣ್ಮುಂದೆ ಬರುತ್ತದೆ. ಈ ಹಿನ್ನೆಲೆಯಲ್ಲಿ ವಿಶ್ವಪರಂಪರೆಯ ತಾಣಗಳಾಗಿ ಪರಿಗಣಿಸಲ್ಪಡುವ ಕೆಲವಾರು ಸ್ಥಳಗಳಾದ ನಮ್ಮ ನಾಡಿನ ಸಾಂಸ್ಕೃತಿಕ ಪರಿಪೇಕ್ಷೆಯಲ್ಲಿವೆ. ಆದರೆ ಹಲವಾರು ತಾಂತ್ರಿಕ ಕಾರಣಗಳಿಂದಾಗಿ ಜಾಗತಿಕ ಮಹತ್ವವನ್ನು ಪಡೆಯುವಲ್ಲಿ ಸರತಿ ಸಾಲಿನಲ್ಲಿ ನಿಂತಂತಾಗಿವೆ. ಅಂಥ ಪ್ರಮುಖ ತಾಣಗಳನ್ನು ನಮ್ಮ ನಾಡಿನ ಭೌಗೋಳಿಕ ಹಿನ್ನೆಲೆಯಲ್ಲಿ ಉತ್ತರ ಹಾಗೂ ದಕ್ಷಿಣ ಭಾಗದಲ್ಲಿರುವ ಸಂಭಾವ್ಯ ತಾಣಗಳೆಂದು ಗುರುತಿಸಿ ಅವುಗಳ ಬಗೆಗೂ ವಿವೇಚಿಸುವ ಪ್ರಯತ್ನವನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಮಾಡಲಾಗಿದೆ. 'ಹಂಪಿ' ಮತ್ತು 'ಪಟ್ಟದಕಲ್ಲು' ತಾಣಗಳು ಹಾಗೂ ಸಂಭಾವ್ಯ ತಾಣಗಳಾದ ಉತ್ತರ ಕರ್ನಾಟಕದ ಬಾದಾಮಿ, ಐಹೊಳೆ, ಬಿಜಾಪುರ ಹಾಗೂ ದಕ್ಷಿಣ ಕರ್ನಾಟಕದ ಬೇಲೂರು, ಹಳೇಬೀಡು, ಸೋಮನಾಥಪುರ, ಶ್ರವಣಬೆಳಗೊಳ ಈ ತಾಣಗಳನ್ನು ಕುರಿತು ಸಮಗ್ರ ಹಾಗೂ ವಿವರಣಾತ್ಮಕ ನೆಲೆಯಲ್ಲಿ ವಿವರಗಳನ್ನು ದಾಖಲಿಸುವ ಹಾಗೂ ವಿಶ್ಲೇಷಣೆ ಮಾಡುವ ಉದ್ದೇಶವು ಕೂಡ ಪ್ರಸ್ತುತ ಮಹಾಪ್ರಬಂಧದ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ.

**ಅಧ್ಯಯನದ ಉದ್ದೇಶ**

ವಿಶ್ವಪರಂಪರೆಯ ತಾಣಗಳ ಅಧ್ಯಯನವು ಪ್ರವಾಸೋದ್ಯಮ ಪ್ರವೃತ್ತಿಯ ಹೊಸ ಆಯಾಮವಾಗಿದೆ. ಚಾರಿತ್ರಿಕ ಹಿನ್ನೆಲೆಯೊಳಗೆ ಸಂಶೋಧನೆ ಕೈಗೊಳ್ಳುವ ಪ್ರಾಮುಖ್ಯತೆಯನ್ನು ಒಳಗೊಂಡಿದೆ. ವಾಸ್ತುಶಿಲ್ಪ ಎಂದರೆ 'ಕಟ್ಟಡಗಳ ನಿರ್ಮಾಣ ಕಲೆ' ಎಂಬ ಅರ್ಥವನ್ನು ಒಳಗೊಂಡಿರುವುದು. ಅಂದಿನ ಆಡಳಿತಗಾರನ ಹಾಗೂ ಜನ ಸಾಮಾನ್ಯರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಭಕ್ತಿ ಭಾವಗಳ ಪರಾಕಾಷ್ಠತೆಯನ್ನು ಬಿಂಬಿಸುವಂತೆ ಕಟ್ಟಡಗಳನ್ನು ನಿರ್ಮಿಸುತ್ತಿದ್ದರು ಸಾಮ್ರಾಜ್ಯದ ರಾಷ್ಟ್ರೀಯತೆಯ ಅಂಶ ಮತ್ತು ಸಾಂಸ್ಕೃತಿಕ ಪ್ರತೀಕವಾಗಿ ಸ್ಮಾರಕಗಳನ್ನು ನಿರ್ಮಿಸಿ ಮುಂದಿನ ಪೀಳಿಗೆಗೆ ಕೊಡುಗೆಯನ್ನಾಗಿ ನೀಡಿದ್ದಾರೆ. ಇಂಥ ವಿವರಗಳನ್ನು ಗುರುತಿಸಿ ಅಧ್ಯಯನ ಮಾಡುವ ಮಹತ್ವದ ಉದ್ದೇಶವನ್ನು ಈ ಪ್ರಬಂಧವು ಒಳಗೊಂಡಿರುವುದು. ವಾಸ್ತುಶಿಲ್ಪ ಬಗೆಗಳು ಅಥವಾ ವಾಸ್ತುಶಿಲ್ಪ ಶೈಲಿಗಳು ದೇವಾಲಯಗಳ ನಡುವಿನ ಭಿನ್ನತೆ ದೇವಾಲಯಗಳ ಅಥವಾ ಕಟ್ಟಡಗಳ ನಿರ್ಮಾಣದ ಹಿಂದಿನ ಉದ್ದೇಶ ಮುಂತಾದ ಅಂಶಗಳನ್ನು ಗುರುತಿಸಿ ಯುನೆಸ್ಕೋ ಹಂಪಿ ಮತ್ತು ಪಟ್ಟದಕಲ್ಲು ಕೇಂದ್ರಗಳನ್ನು ವಿಶ್ವಪರಂಪರೆಯ ತಾಣಗಳ ಪಟ್ಟಿಗೆ ಸೇರ್ಪಡೆ ಮಾಡಿದೆ. ಅಂಥ ವಿವರಗಳನ್ನೇ ಮಾನದಂಡವಾಗಿಟ್ಟಿಕೊಂಡು ಪ್ರಸ್ತುತ ಅಧ್ಯಯನವನ್ನು ರೂಪಿಸಲಾಗಿದೆ. ಈ ಅಧ್ಯಯನವು ತನ್ನದೇ ಆದ ಕೆಲವು ಮುಖ್ಯ ಉದ್ದೇಶಗಳನ್ನು ಹೊಂದಿದೆ.

೧. ಕರ್ನಾಟಕದಲ್ಲಿರುವ ಎರಡು ಪ್ರಮುಖ ತಾಣಗಳಾದ ಹಂಪಿ ಮತ್ತು ಪಟ್ಟದಕಲ್ಲು ವಿಶ್ವಪಾರಂಪರಿಕ ತಾಣಗಳ ನಡುವಿನ ಭಿನ್ನತೆಗಳನ್ನು ಕಂಡುಕೊಳ್ಳುವುದು. ಅಂದರೆ ಅವುಗಳು ಪರಂಪರೆಯ ಪಟ್ಟಿಯಲ್ಲಿ ಸ್ಥಾನ ಪಡೆಯುವ ಕಾರಣವಾದ ಅಂಶಗಳ ಕುರಿತು ವಿಶ್ಲೇಷಣಾತ್ಮಕವಾಗಿ ಚರ್ಚಿಸಿ ದಾಖಲಿಸುವುದು. ಅಲ್ಲದೇ ಪ್ರಸ್ತುತ ಸಂರಕ್ಷಣೆಗೆ ಕೈಗೊಂಡಿರುವ ಕ್ರಮಗಳ ಕುರಿತು ಅಧ್ಯಯನ ಮಾಡುವ ಉದ್ದೇಶ ಹೊಂದಿದೆ.

೨. ವಿಶ್ವಪಾರಂಪರಿಕ ಸಂರಕ್ಷಣಾ ನೆಲೆಗಳಲ್ಲಿ ಇರುವಂತಹ ಸ್ಮಾರಕಗಳು ಸಂರಕ್ಷಣಯಲ್ಲಿವೆಯೇ ಅಥವಾ ಇಲ್ಲವೇ ಎಂಬುದನ್ನು ಕ್ಷೇತ್ರಾಧ್ಯಯನದ ಮೂಲಕ ಭೇಟಿ ನೀಡಿ ವಾಸ್ತವತೆಯನ್ನು ತಿಳಿಸುವ ಉದ್ದೇಶವಾಗಿದೆ.

೩. ಭಾರತೀಯ ಪುರಾತತ್ವ ಇಲಾಖೆಯು ತಯಾರಿಸಿರುವ ಕರ್ನಾಟಕದ ಸಂಭಾವ್ಯ ತಾಣಗಳ ಪಟ್ಟಿಗಳ ಸ್ಮಾರಕಗಳ ರಕ್ಷಣಾ ಕಾಯ್ದೆಗೆ ಒಳಪಡಬಹುದಾದ ಸ್ಮಾರಕಗಳನ್ನು ಗುರುತಿಸಿ ಅವುಗಳ ಸಾಂಸ್ಕೃತಿಕ ಕಲಾ ವೈಭವವನ್ನು ಯುನೆಸ್ಕೋ ಪಟ್ಟಿಯಲಿ

ಸೇರಿಸಲು ಪ್ರಯತ್ನ ಪಡುತ್ತಿರುವ ಕೆಲಸ–ಕಾರ್ಯಗಳು ಹಾಗೂ ವರದಿಗಳಿಗೆ ಪೂರಕ ಅಂಶಗಳಾಗಿ ಮಹಾಪ್ರಬಂಧದ ಫಲಿತಗಳು ಕೂಡಾ ಸಹಾಯವಾಗಲಿ ಎಂಬ ಅಂಶಗಳನ್ನು ಪರಿಗಣಿಸಿ ಫಲಿತಗಳನ್ನು ನೀಡುವ ಪ್ರಯತ್ನ ಮಾಡಲಾಗಿದೆ. ಈ ರೀತಿಯ ವರದಿಗಳನ್ನು ತಯಾರಿಸುವ ಹಾಗೂ ಸ್ಥಳೀಯ ಪ್ರವಾಸೋದ್ಯಮದ ಅಭಿವೃದ್ಧಿಯ ಸಾಧ್ಯತೆಯ ಒಳಗೊಳ್ಳುವಿಕೆಯ ಸಂದರ್ಭದಲ್ಲಿ ಈ ಕುರಿತು ಅಧ್ಯಯನಗಳು ಅವುಗಳಿಗೆ ಸಮರ್ಥದಾಯಕ ಅಂಶಗಳಾಗಿ ಸಹಾಯಕವಾಗಲಿ ಎಂಬ ಉದ್ದೇಶಗಳನ್ನು ಪ್ರಸ್ತುತ ಅಧ್ಯಯನವು ಯಶಸ್ವಿಗೊಳಿಸುವ ಪ್ರಯತ್ನ ಮಾಡಲಾಗಿದೆ.

೪. ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿರುವ ಪ್ರಸಿದ್ಧ ಐತಿಹಾಸಿಕ ತಾಣಗಳನ್ನು ಯುನೆಸ್ಕೋ ಪಟ್ಟಿಗೆ ಸೇರ್ಪಡೆ ಮಾಡುವಲ್ಲಿ ಸರ್ಕಾರದ ಗಮನಸೆಳೆಯುವಂತೆ ಮಾಡುವ ಉದ್ದೇಶವು ತಕ್ಕಮಟ್ಟಿಗೆ ಈ ಪ್ರಬಂಧದ್ದಾಗಿದೆ.

೫. ವಿಶ್ವಪಾರಂಪರಿಕ ತಾಣಗಳಿಂದ ಸ್ಥಳೀಯ ಪ್ರವಾಸೋದ್ಯಮದ ಅಭಿವೃದ್ಧಿಯ ಕುರಿತು ಅಧ್ಯಯನ ಉದ್ದೇಶಗಳು ಸಫಲಗೊಳ್ಳಲ್ಲಿವೆ ಎಂಬುದರ ನಿಟ್ಟಿಯಲ್ಲಿ ಪ್ರಯತ್ನಿಸಲಾಗಿದೆ.

೬. ವಿಶ್ವಪಾರಂಪರಿಕ ತಾಣಗಳಲ್ಲಿ ಪ್ರವಾಸಿಗರ ಸೌಲಭ್ಯಗಳು ಹಾಗೂ ಸಮಸ್ಯೆಗಳ ಕುರಿತು ಅಧ್ಯಯನದ ವಿವರಗಳಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಅಧ್ಯಯನ ಅಥವಾ ಸಂಶೋಧನೆಯು ಯಶಸ್ವಿಯಾಗಬೇಕೆಂದರೆ ಅದಕ್ಕೊಂದು ನಿರ್ದಿಷ್ಟ ಚೌಕಟ್ಟು ಅವಶ್ಯಕವಾಗಿರುತ್ತದೆ. ವ್ಯಾಪ್ತಿ ಇಲ್ಲದ ಅಧ್ಯಯನಗಳು ಗೊಂದಲಮಯವಾಗಿ ಯೋಚಿಸಿಕೊಂಡಿರುವ ಸಂಶೋಧನಾ ಕುತೂಹಲಗಳನ್ನು ತೀವ್ರಗೊಳಿಸುವಲ್ಲಿ ವಿಫಲವಾಗಿ ಹಾಕಿಕೊಂಡಿರುವ ಹಾದಿಯನ್ನೇ ತಪ್ಪಿಸುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಐತಿಹಾಸಿಕ ವ್ಯಾಪ್ತಿಗೆ ಒಳಪಡಿಸಿ ಅದಕ್ಕೊಂದು ನಿರ್ದಿಷ್ಟ ವ್ಯಾಪ್ತಿಯನ್ನು ಖಚಿತಪಡಿಸಿಕೊಳ್ಳಲಾಗಿದೆ. ಕರ್ನಾಟಕವನ್ನು ಆಳ್ವಿಕೆ ಮಾಡಿದ ಹಲವು ಅರಸು ಮನೆತನಗಳ ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ನೆಲೆಗಳನ್ನು ಸೃಷ್ಟಿಸಿದವು. ಅಂಥ ಸಾಂಸ್ಕೃತಿಕ ಬಹುಮುಖ್ಯ ನೆಲೆಗಳು ವೈಭವ ಪೂರಿತ ಕರ್ನಾಟಕದ ಪ್ರಸಿದ್ಧ ಪರಂಪರೆಯ ತಾಣಗಳಾಗಿ ಮಾರ್ಪಟ್ಟಿವೆ. ಅಂಥ ಸಾಂಸ್ಕೃತಿಕ ಚಾರಿತ್ರಿಕ ಗುರುತುಗಳನ್ನು ಮುಂದಿನ ಪೀಳಿಗೆಗೂ ಉಳಿಸಿಕೊಂಡು ನಮ್ಮ ಪರಂಪರೆಯ ಜೀವಂತಿಕೆಯನ್ನು ಕಾಪಿಟ್ಟುಕೊಳ್ಳುವ ಪ್ರಯತ್ನಗಳನ್ನು ಎಲ್ಲ ದೇಶಗಳು ಬೆಂಬಲಿಸಿವೆ. ಈ

ಹಿನ್ನೆಲೆಯಿಂದಾಗಿ ಯುನೆಸ್ಕೋ ಗುರುತಿಸಿರುವ **ಹಂಪಿ** ಮತ್ತು **ಪಟ್ಟದಕಲ್ಲುಗಳು** ಸಂಶೋಧನ ವ್ಯಾಪ್ತಿಗೆ ಒಳಪಟ್ಟಿವೆ ಈ ಎರಡು ವಿಶ್ವಪರಂಪರೆಯ ತಾಣಗಳು ಪ್ರಮುಖವಾಗಿ ಆಯಾ ಕಾಲಮಾನದಲ್ಲಿ ನಿರ್ಮಿಸಿರುವ ಸಾಂಸ್ಕೃತಿಕ ವೈಭವವನ್ನು ಚಾರಿತ್ರಿಕ ಚೌಕಟ್ಟಿನಲ್ಲಿ ವಿವರಿಸುವ ಹಾಗೂ ವಿಶ್ಲೇಷಿಸುವ ಸಂಬಂಧವಾಗಿ ಪ್ರಮುಖವಾಗಿ ಈ ಎರಡು ತಾಣಗಳನ್ನೇ ಅಧ್ಯಯನ ವ್ಯಾಪ್ತಿಗೆ ಒಳಪಡಿಸಲಾಗಿದೆ. ದೇವಾಲಯಗಳ ವಾಸ್ತುಶಿಲ್ಪಗಳ ರಚನೆ, ಶೈಲಿ ಹಾಗೂ ಧಾರ್ಮಿಕತೆಗಳ ಪ್ರಾಮುಖ್ಯತೆ ಮುಂತಾದ ಅಂಶಗಳು ಅಧ್ಯಯನದ ವ್ಯಾಪ್ತಿಗೊಳಪಟ್ಟಿರುತ್ತವೆ.

**ಅಧ್ಯಯನದ ವಿಧಾನ**

'ಕರ್ನಾಟಕದ ವಿಶ್ವಪಾರಂಪರಿಕ ತಾಣಗಳು' ಎಂಬ ಸಂಶೋಧನ ಅಧ್ಯಯನದ ವಿಷಯಕ್ಕೆ ಪೂರಕವಾಗಿ ಇಂಪಿರಿಕಲ್ (ಆಕರಗಳ ಭೌತಿಕ ಹಾಗೂ ಮೌಖಿಕ ವಿವರಗಳು) ಅಂಶಗಳ ಹಿನ್ನೆಲೆಯಲ್ಲಿ ಪ್ರಸುತ್ತ ಪ್ರಬಂಧದ ವಿಧಾನವನ್ನು ರೂಪಿಸಲಾಗಿದೆ. ಅಲ್ಲದೇ ವೈಧಾನಿಕತೆ (Methodology) ಹಿನ್ನೆಲೆಯಲ್ಲಿ ಮುಖ್ಯವಾಗಿ ಪ್ರವಾಸೋದ್ಯಮ ತಾಣಗಳಿಗೆ ಸಂಬಂಧಿಸಿದಂತೆ ಹಲವಾರು ಸಂಶೋಧಕರ, ಇತಿಹಾಸಕರಾರ ಕೃತಿಗಳು ಮತ್ತು ಸಂಶೋಧನ ಗ್ರಂಥಗಳನ್ನು ಮತ್ತು ಪತ್ರಿಕೆಗಳಲ್ಲಿನ ಬಿಡಿ ಲೇಖನಗಳನ್ನು ಪರಾಮರ್ಶಿಸಿ ಟಿಪ್ಪಣಿಗಳನ್ನು ಮಾಡಿಕೊಳ್ಳಲಾಗಿದೆ. ಕ್ಷೇತ್ರಕಾರ್ಯ ಮಾಡುವುದರ ಮೂಲಕ ಈ ತಾಣಗಳಲ್ಲಿರುವ ಪ್ರಮುಖ ಕಟ್ಟಡಗಳು ಹಾಗೂ ದೇವಾಲಯಗಳ ಬಗೆಗೆ ಮಹತ್ವದ ಅಧ್ಯಯನ ನಡೆಸಿ ಟಿಪ್ಪಣಿ ಮಾಡಿಕೊಳ್ಳುವುದು ಮತ್ತು ಅಧ್ಯಯನಕ್ಕೆ ಪೂರಕವಾದ ಛಾಯಾಚಿತ್ರಗಳನ್ನು ಸಂಗ್ರಹಿಸಲಾಗಿದೆ. ಇಲ್ಲಿ ಕರ್ನಾಟಕದ ವಿಶ್ವಪಾರಂಪರಿಕ ಐತಿಹಾಸಿಕ ತಾಣಗಳ ಹಿನ್ನೆಲೆ ಮತ್ತು ಮಹತ್ವವನ್ನು ತಿಳಿಯಲು ಕ್ಷೇತ್ರಕಾರ್ಯವನ್ನು ಕೈಗೊಳ್ಳುವುದರ ಜೊತೆಗೆ ಸಂಶೋಧಕರ ಸಂದರ್ಶನ ಹಾಗೂ ಸ್ಥಳೀಯ ಹಿರಿಯರನ್ನು ಭೇಟಿ ಮಾಡುವುದರ ಮೂಲಕ ಹೊಸದಾಗಿ ಕಂಡುಬರುವ ಅಂಶಗಳನ್ನು ಸಂಗ್ರಹಿಸಿ ಅಧ್ಯಯನ ಪೂರೈಸಲಾಗಿದೆ.

**ಅಧ್ಯಯನದ ಸಮೀಕ್ಷೆ**

'ಕರ್ನಾಟಕದಲ್ಲಿರುವ ವಿಶ್ವಪಾರಂಪರಿಕ ತಾಣಗಳು' ಎಂಬ ವಿಷಯಗಳ ಕುರಿತು ಈವರೆಗೆ ಬೆರಳಣಿಕೆಯ ಅಧ್ಯಯನಗಳು ಮಾತ್ರ ಕೆಲವು ವಿದ್ವಾಂಸರುಗಳಿಂದ ರಚನೆಗೊಂಡಿವೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಈವರೆಗೆ ಕೆಲ ಅಧ್ಯಯನಗಳು ಸಂಪಾದಿತ ಕೃತಿಗಳ ರೂಪದಲ್ಲಿ ಹೊರಬಂದಿವೆ. ಜೊತೆಗೆ ಈವರೆಗೆ ವಿಶ್ವ ಹಾಗೂ ಭಾರತದಲ್ಲಿರುವ

ವಿಶ್ವಪಾರಂಪರಿಕ ತಾಣಗಳಿಗೆ ಸಂಬಂಧಿಸಿದಂತೆ ನಡೆದಿರುವ ಅಧ್ಯಯಗಳು ಸಹ ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಮೂಡಿಬಂದಿವೆ. ಅಂಬಳಿಕೆ ಹಿರಿಯಣ್ಣ ಅವರ ಸಂಪಾದನೆಯ ಕೃತಿಯಾದ 'ಕನ್ನಡ ವಿಷಯ ವಿಶ್ವಕೋಶ', ಇತಿಹಾಸ ಮತ್ತು ಪುರಾತತ್ವ, ಈ ಸಂಪಾದನ ಕೃತಿಯಲ್ಲಿ ವಿಶ್ವಪಾರಂಪರಿಕ ಸ್ಮಾರಕಗಳ ಕುರಿತು ಮಹತ್ವದ ವಿಚಾರಗಳನ್ನು ತಿಳಿಸಲಾಗಿದೆ. ೧೯೭೨ ರಲ್ಲಿ ನಡೆದ ಪ್ರಪಂಚದ ಸಾಂಸ್ಕೃತಿಕ ಪ್ರಾಕೃತಿಕ ಮತ್ತು ಐತಿಹಾಸಿಕ ಸ್ಮಾರಕಗಳ ರಕ್ಷಣಾ ಕಾರ್ಯಗಳ ವಿಧಿ ವಿಧಾನಗಳ ಬಗ್ಗೆ ಹಾಗೂ ವಿಶ್ವಪರಂಪರೆಯ ಸ್ಮಾರಕಗಳು ಎಂದು ಘೋಷಿಸಲು ೧೦ ಸ್ಪಷ್ಟವಾದ ನಿಬಂಧನೆಗಳ ಕುರಿತ ವಿವರಗಳು ದಾಖಲಾಗಿವೆ. ೨೦೦೪ ರವರೆಗೂ ಸಾಂಸ್ಕೃತಿಕ ಐತಿಹಾಸಿಕ ಸ್ಮಾರಕಗಳಿಗೆ ಸಂಬಂಧಿಸಿದಂತೆ ಆರು, ನಿಸರ್ಗ ನಿರ್ಮಿತ ಅದ್ಭುತಗಳಿಗೆ ನಾಲ್ಕು ನಿಬಂಧನೆಗಳಿದ್ದವು, ೨೦೦೫ರಲ್ಲಿ ಮತ್ತೆ ಪರಿಶೀಲಿಸಿ ಇದೇ ನಿಬಂಧನೆಗಳನ್ನು ಮುಂದುವರೆಸಲಾಯಿತು. ಅವುಗಳ ಕುರಿತು ವಿವರಗಳನ್ನು ಪರಿಶೀಲಿಸಿ ಅಧ್ಯಯನದ ರಚನೆಯಲ್ಲಿ ಬಳಸಿಕೊಳ್ಳಲಾಗಿದೆ. ನಾಗಪತಿ ಕೆ.ಎಸ್., ಅವರ 'ಪ್ರವಾಸೋದ್ಯಮ ಅಭಿವೃದ್ಧಿ ಒಂದು ಹೊಸ ಆಯಾಮ' ಕೃತಿಯಲ್ಲಿ ಪರಂಪರೆ ಎಂದರೇನು ಅದರ ಅರ್ಥ ಮತ್ತು ವ್ಯಾಖ್ಯೆಗಳ ಪ್ರಾಮುಖ್ಯತೆಗಳನ್ನು ತಿಳಿಸುವುದರ ಜೊತೆಗೆ ಯಾವುದೇ ತಾಣ ವಿಶ್ವಪರಂಪರೆ ಪಟ್ಟಿಗೆ ಸೇರಿದರೆ ಅದರ ರಕ್ಷಣೆ ಹಾಗೂ ಸಂರಕ್ಷಣೆಗೆ ಅವಶ್ಯವಿರುವ ಕ್ರಮಗಳನ್ನು ಅನುಸರಿಸುವ ವಿಧಾನಗಳ ಬಗ್ಗೆ ವಿಸ್ತಾರವಾಗಿ ಚರ್ಚೆ ಮಾಡಿದ್ದಾರೆ. ವಿಜಯ್ ಎಸ್. ಅವರ 'ಭಾರತದ ವಿಶ್ವಪಾರಂಪರಿಕ ತಾಣಗಳು' ಕೃತಿಯಲ್ಲಿ ಯುನೆಸ್ಕೋದ ಮೂಲ ಉದ್ದೇಶ ಮತ್ತು ಅದರ ಪ್ರಮುಖ ಯೋಜನೆಗಳ ಬಗ್ಗೆ ತಿಳಿಸಿದ್ದು, ಭಾರತದ ಮೊದಲ ಎರಡು ತಾಣಗಳು ೧೯೮೩ ರಲ್ಲಿ ನಡೆದ ವಿಶ್ವಪರಂಪರೆಯ ಅಧಿವೇಶನದಲ್ಲಿ ಗುರುತಿಸಲ್ಪಟ್ಟವು ಆಗ್ರಾಕೋಟೆ ಮತ್ತು ಅಜಂತಾ ಗುಹೆಗಳ ಬಗ್ಗೆ ವಿವರವನ್ನು ನೀಡಿದ್ದಾರೆ.

ಶಿವರುದ್ರಸ್ವಾಮಿ ಎಸ್.ಎನ್., ಅವರ 'ಭಾರತೀಯ ಪ್ರವಾಸೋದ್ಯಮ' ಕೃತಿಯಲ್ಲಿ ಜಾಗತಿಕ ಪರಂಪರೆ, ಸ್ಥಾಪನೆ, ನೆಲೆಗಳ ವರ್ಗೀಕರಣ ಭಾರತದಲ್ಲಿ, ಕರ್ನಾಟಕದಲ್ಲಿರುವ ವಿಶ್ವಪರಂಪರೆಯ ತಾಣಗಳು ಐತಿಹಾಸಿಕ ತಾಣಗಳ ಬಗೆಗಿನ ವಿವರಗಳನ್ನು ಹಾಗೆಯೇ ಜಾಗತಿಕ ಪರಂಪರೆಯ ನೆಲೆಗಳನ್ನು ಮೂರು ವರ್ಗದ ನೆಲೆಗಳಾಗಿ ಸಾಂಸ್ಕೃತಿಕ ನೆಲೆಗಳು, ನೈಸರ್ಗಿಕ ನೆಲೆಗಳು ಹಾಗೂ ಮಿಶ್ರನೆಲೆಗಳು ಎಂದು ವರ್ಗೀಕರಿಸಿ ಅವುಗಳ ಕುರಿತು ವಿವರಗಳನ್ನು ನೀಡಿರುತ್ತಾರೆ. ಸೂರ್ಯನಾಥ ಯು. ಕಾಮತ್‌ರವರು 'ಕರ್ನಾಟಕ ರಾಜ್ಯ ಗ್ಯಾಜೆಟಿಯರ್ ಭಾಗ-೩' ಕೃತಿಯಲ್ಲಿ ಕರ್ನಾಟಕದ ಸಮಾಜ, ಸಂಸ್ಕೃತಿ, ವಾಸ್ತುಶಿಲ್ಪ, ಶಿಲ್ಪಕಲೆ,

ಚಿತ್ರಕಲೆ ಹಾಗೂ ಪ್ರೇಕ್ಷಣೀಯ ಸ್ಥಳಗಳ ಐತಿಹಾಸಿಕ ಮಾಹಿತಿಗಳಿಗೆ ಸಂಬಂಧಿಸಿದ್ದಾಗಿದ್ದು ಪ್ರಸ್ತುತ ಸಂಶೋಧನೆಗೆ ಸಂಬಂಧಿಸಿದ ವಿಶ್ವಪಾರಂಪರಿಕ ಪಟ್ಟಿಯಲ್ಲಿನ ತಾಣಗಳು ಹಾಗೂ ಸಂಭಾವ್ಯ ಪಟ್ಟಿಯಲ್ಲಿರುವ ತಾಣಗಳ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ತಿಳಿಸಿದ್ದಾರೆ. ಪುಟ ಸಂಖ್ಯೆ ೫೩೩ರಲ್ಲಿ ಪಟ್ಟದಕಲ್ಲು, ಪುಟ ಸಂಖ್ಯೆ ೬೧೯ರಲ್ಲಿ ಹಂಪಿಯ ಐತಿಹಾಸಿಕ ಸ್ಮಾರಕಗಳ ಕುರಿತಂತೆ ವಿವರಗಳನ್ನು ಜೊತೆಗೆ ಸಂಭಾವ್ಯ ತಾಣಗಳಾದ ಐಹೊಳೆ, ಬಾದಾಮಿ, ಬೇಲೂರು, ಹಳೇಬಿಡು, ಸೋಮನಾಥಪುರ, ಶ್ರವಣಬೆಳಗೊಳ ಹಾಗೂ ಬಿಜಾಪುರಗಳ ಐತಿಹಾಸಿಕ ಸ್ಮಾರಕಗಳ ಕುರಿತಂತೆ ಪೂರಕ ಮಾಹಿತಿಗಳನ್ನು ನೀಡಲಾಗಿರುವುದನ್ನು ಗಮನಿಸಬಹುದು. ಇದರಲ್ಲಿ ಬಿಜಾಪುರವನ್ನು ವಿಜಯಪುರವೆಂದು ಉಲ್ಲೇಖಿಸಿದ್ದಾರೆ. ರಾಮಕೃಷ್ಣ ಕೆ.ಆರ್., ಮತ್ತು ಸಿದ್ದನಗೌಡರ ಎಸ್.ಎಂ., 'ಕರ್ನಾಟಕದ ಸಂರಕ್ಷಿತ ಸ್ಮಾರಕಗಳ ಹಾಗೂ ಪುರಾತತ್ವ ನೆಲೆಗಳ ನಿರ್ದೇಶಿಕೆ' ಕೃತಿಯಲ್ಲಿ ಕರ್ನಾಟಕದ ಪ್ರತಿ ಜಿಲ್ಲೆಯ ಸಂರಕ್ಷಿತ ಸ್ಮಾರಕಗಳನ್ನು ನೀಡಿ ಅವುಗಳ ಕಾಲಮಾನವನ್ನು ನೀಡಲಾಗಿದೆ, ಸೋಮಶೇಖರ್ ಎಸ್. ವೈ., ಅವರ 'ಕರ್ನಾಟಕ ದರ್ಶನ' ಕೃತಿಯಲ್ಲಿ ಕರ್ನಾಟಕದ ೩೦ ಜಿಲ್ಲೆಗಳ ಭೌಗೋಳಿಕ ಲಕ್ಷಣ ಪ್ರೇಕ್ಷಣೀಯ ಸ್ಥಳಗಳ ಬಗ್ಗೆ ತಿಳಿಸಿದ್ದಾರೆ. ಅಧ್ಯಯನಕ್ಕೆ ಪೂರಕವಾಗಿ ಬಳ್ಳಾರಿ ಜಿಲ್ಲೆ, ಬಾಗಲಕೋಟೆ ಜಿಲ್ಲೆ, ವಿಜಯಪುರ ಜಿಲ್ಲೆ, ಮೈಸೂರು ಜಿಲ್ಲೆ ಹಾಗೂ ಹಾಸನ ಜಿಲ್ಲೆಯ ಸ್ಥಳಗಳಲ್ಲಿರುವ ಪ್ರೇಕ್ಷಣೀಯ ತಾಣಗಳ ಮಾಹಿತಿಗಳನ್ನು ಮಹಾಪ್ರಬಂಧದಲ್ಲಿ ಬಳಸಿಕೊಳ್ಳಲಾಗಿದೆ. ಜಯದೇವಪ್ಪ ಜೈನಕೇರಿ ಅವರ 'ಪ್ರವಾಸ ಸಂಪದ' ಕೃತಿಯಲ್ಲಿ ಕರ್ನಾಟಕದ ಸಂಸ್ಕೃತಿ, ವಾಸ್ತುಶಿಲ್ಪ, ಚರಿತ್ರೆ ಮತ್ತು ಪ್ರವಾಸಿ ಸ್ಥಳಗಳ ಮಾಹಿತಿ ಜೊತೆಗೆ ಪ್ರಸ್ತುತ ಸಂಶೋಧನೆಗೆ ಪೂರಕವಾದ ಕರ್ನಾಟಕದ ವಿಶ್ವಪಾರಂಪರಿಕ ತಾಣಗಳಿಗೆ ಸಂಬಂಧಿಸಿದಂತೆ ಬಾಗಲಕೋಟೆ ಜಿಲ್ಲೆಯಲ್ಲಿರುವ ಪಟ್ಟದಕಲ್ಲು ಮತ್ತು ಸಂಭಾವ್ಯ ತಾಣ ಬಾದಾಮಿಯ ಐತಿಹಾಸಿಕ ಹಿನ್ನೆಲೆಯನ್ನು ವಿವರಿಸಿದ್ದಾರೆ ರಂಗಸ್ವಾಮಿ ಡಿ.ಟಿ.,ರವರು 'ಭಾರತ ಯಾತ್ರೆ' ಕೃತಿಯಲ್ಲಿ ಭಾರತದ ಹಲವು ಐತಿಹಾಸಿಕ ಸ್ಥಳಗಳ ಬಗ್ಗೆ ಮಾಹಿತಿ ನೀಡಿರುತ್ತಾರೆ. ಶ್ರೀಧರ ಅಡಿಗ ಅವರು 'ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳು' ಕೃತಿಯಲ್ಲಿ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಸ್ಥಳಗಳನ್ನು ಹಾಗೂ ಪ್ರಸ್ತುತ ಅಧ್ಯಯನದ ಶೀರ್ಷಿಕೆಯಡಿಯಲ್ಲಿ ಬರುವಂತಹ ಪಾರಂಪರಿಕ ತಾಣಗಳ ಕುರಿತು ತಿಳಿಸಿದ್ದಾರೆ. ಸೇತುನಾಥ್.ಪಿ. ರವರು 'ಕರ್ನಾಟಕದ ಪ್ರವಾಸಿ ತಾಣಗಳು ಭಾಗ–೧' ಎಂಬ ಕೃತಿಯಲ್ಲಿ ರಾಜ್ಯದ ಪ್ರತಿ ಜಿಲ್ಲೆಯ ಐತಿಹಾಸಿಕ ತಾಣಗಳನ್ನು

ವಿವರಿಸುತ್ತಾರೆ. ಸಂಬಂಧಿಸಿದ ಗ್ರಂಥಗಳಲ್ಲಿ ಉಲ್ಲೇಖಗೊಂಡ ವಿವರಗಳನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಬಳಸಿಕೊಳ್ಳಲಾಗಿದೆ.

ಉಲ್ಲೇಖಿತ ಅಧ್ಯಯನಗಳಲ್ಲದೆ ಪ್ರಸ್ತುತ ಅಧ್ಯಯನ ವ್ಯಾಪಿಯನ್ನಾಗಿಟ್ಟುಕೊಂಡು ವಿವಿಧ ನೆಲೆಗಳಲ್ಲಿ ಅಧ್ಯಯನಗಳು ನಡೆದಿವೆ. ಜೊತೆಗೆ ಸಂಪಾದಿತ ಕೃತಿಗಳಲ್ಲಿ ಬಿಡಿ ಲೇಖನಗಳ ರೂಪದಲ್ಲಿ ಹೊರಬಂದಿವೆ. ಅವುಗಳನ್ನು ಈ ಕೆಳಕಂಡಂತೆ ಸಮೀಕ್ಷಿಸಲಾಗಿದೆ.

ನಾಗರಾಜ ಎಂ.ಜಿ., ಕೃಷ್ಣಮೂರ್ತಿ ಪಿ.ವಿ., ಅವರ ಸಂಪಾದನಾ ಕೃತಿ 'ಇತಿಹಾಸ ದರ್ಶನ ಸಂಪುಟ–೧೬' ರಲ್ಲಿ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ 'ಕರ್ನಾಟಕದಲ್ಲಿ ವಿಶ್ವಪರಂಪರೆಯ ಸ್ಮಾರಕಗಳು' ಎಂಬ ಲೇಖನದಲ್ಲಿ ಪ್ರಾದೇಶಿಕ ಸ್ಮಾರಕಗಳು, ರಾಷ್ಟ್ರೀಯ ಸ್ಮಾರಕಗಳು ಹಾಗೂ ವಿಶ್ವಪರಂಪರೆಯ ಸ್ಮಾರಕಗಳು ಎಂದು ವಿಭಾಗಿಸಲಾಗಿದೆ. ಕರ್ನಾಟಕದ ಪ್ರಾಚೀನ ಪರಂಪರೆಯ ಬಗ್ಗೆ ವಿವರಗಳನ್ನು ನೀಡಲಾಗಿದ್ದು, ಕರ್ನಾಟಕದ ವಿಶ್ವಪರಂಪರೆಯ ಎರಡು ತಾಣಗಳಾದ ಹಂಪಿ ಮತ್ತು ಪಟ್ಟದಕಲ್ಲು ತಾಣಗಳ ದೇವಾಲಯಗಳು ವಾಸ್ತುಶಿಲ್ಪಗಳ ವಿಶಿಷ್ಟತೆ, ಹಾಗೂ ಅಲ್ಲಿರುವ ಸಮಸ್ಯೆ ಪರಿಹಾರಗಳು ಇವುಗಳ ಅಭಿವೃದ್ಧಿಗೆ ಕೈಗೊಂಡ ಕ್ರಮಗಳ ಕುರಿತು ವಿವರಣಾತ್ಮಕವಾಗಿ ವಿವರಿಸಿದ್ದಾರೆ. ಮಹದೇವ ಸಿ., ಚೆನ್ನಸ್ವಾಮಿ ಸೋಸಲೆ ಎನ್., ಅವರ 'ಹಂಪಿ ಅಂದು–ಇಂದು', ಎಂಬ ಈ ಸಂಪಾದನ ಕೃತಿಯು ಹಂಪಿ ಪರಿಸರದ ಪ್ರಾಚೀನ ಇತಿಹಾಸವನ್ನು ಹಾಗೂ ಸ್ಮಾರಕಗಳ ಸಂರಕ್ಷಣೆಯನ್ನು ಮಾಡುವ ಪೂರಕ ವಿಷಯಗಳನ್ನೊಳಗೊಂಡಿದೆ. ಈ ಕೃತಿಯಲ್ಲಿ ವಿಶ್ವಪರಂಪರೆ ಪಟ್ಟಿಯಲ್ಲಿ ಹಂಪಿ, ಹಂಪಿ ಸ್ಮಾರಕಗಳ ಸಂರಕ್ಷಣೆ: ಅಭಿವೃದ್ದಿ ಮತ್ತು ವೈರುದ್ಯಗಳು ಹಾಗೂ ಕರ್ನಾಟಕ ಪ್ರವಾಸೋದ್ಯಮದಲ್ಲಿ ಹಂಪಿ ಎಂಬ ಮೂರು ಲೇಖನಗಳು ನನ್ನ ಅಧ್ಯಯನದ ವಿಷಯಕ್ಕೆ ಪೂರಕವಾಗಿವೆ.

ಮೊದಲನೆಯದಾಗಿ ಬಾಲಸುಬ್ರಮಣ್ಯ ಅವರ 'ವಿಶ್ವಪರಂಪರೆ ಪಟ್ಟಿಯಲ್ಲಿ ಹಂಪಿ' ಎಂಬ ಲೇಖನದಲ್ಲಿ ವಿಶ್ವಪರಂಪರೆ ಎಂದರೇನು ಅ ವಿಶ್ವಪರಂಪರೆಯ ಪಟ್ಟಿಯಲ್ಲಿ ಸೇರಿದ ಸ್ಮಾರಕಗಳನ್ನು ಯಾವ ರೀತಿಯಾಗಿ ಸಂರಕ್ಷಣೆ ಮಾಡಬೇಕು ಎಂಬ ಮಾದರಿಗಳು, ಪ್ರಾಚೀನ ಸಂದರ್ಭದಲ್ಲಿ ಒದಗಿ ಬಂದ ರಾಜಕೀಯ ಸನ್ನಿವೇಶಗಳು ಈ ತಾಣದಲ್ಲಿರುವ ಕೆಲವು ಸಮಸ್ಯೆಗಳು ಮತ್ತು ಅವುಗಳಿಗೆ ಪರಿಹಾರಗಳು, ಅಲ್ಲಿನ ಅಭಿವೃದ್ದಿಗೆ ಕೈಗೊಂಡ ಕ್ರಮಗಳ ಕುರಿತ ವಿವರಣಾತ್ಮಕವಾಗಿ ವಿವರಿಸಿದ್ದಾರೆ.

ಎರಡನೆಯದಾಗಿ ಎನ್.. ಚಿನ್ನಸ್ವಾಮಿ ಸೋಸಲೆ ಅವರು 'ಹಂಪಿ ಸ್ಮಾರಕಗಳ ಸಂರಕ್ಷಣೆ: ಅಭಿವೃದ್ಧಿ ಮತ್ತು ವೈರುಧ್ಯಗಳು' ಎಂಬ ಲೇಖನದಲ್ಲಿ ಹಂಪಿ ಸ್ಮಾರಕಗಳ ವಿವರ ಮತ್ತು ಅವುಗಳ ನೆಲೆ, ರಾಜ್ಯದ ಸ್ಮಾರಕಗಳು ಮತ್ತು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಗೆ ಒಳಪಡುವ ಸ್ಮಾರಕಗಳ ಪಟ್ಟಿಯನ್ನು ನೀಡಿದ್ದಾರೆ. ಈ ವಿವರಗಳನ್ನು ಮಹಾಪ್ರಬಂಧದ ವಿಷಯಕ್ಕೆ ಅನುಸಾರವಾಗಿ ಬಳಸಿಕೊಳ್ಳಲಾಗಿದೆ.

ರಮೇಶ ನಾಯಕ ಅವರ ಕರ್ನಾಟಕ ಪ್ರವಾಸೋದ್ಯಮದಲ್ಲಿ ಹಂಪಿ ಎಂಬ ಲೇಖನದಲ್ಲಿ ವಿಶ್ವ, ಭಾರತ ಹಾಗೂ ಕರ್ನಾಟಕದ ಒಟ್ಟು ಪಾರಂಪರಿಕ ಸ್ಥಳಗಳ ಅಂಕಿ ಅಂಶಗಳನ್ನ ನೀಡಿದ್ದಾರೆ. ಈ ಸ್ಥಳಗಳನ್ನ ನೋಡಿಕೊಳ್ಳುವ ಪ್ರಯತ್ನದಲ್ಲಿ ಯುನೆಸ್ಕೋ ಯಶಸ್ವಿಯಾಗುತ್ತಿದೆ. ಎಂದು ತಿಳಿಸುತ್ತಾ ಪ್ರವಾಸಿಗರಿಗೆ ಹಂಪೆಯ ಕುರಿತು ಮಾಹಿತಿ ನೀಡಿದ್ದಾರೆ. ಅಲ್ಲಿನ ಸ್ಮಾರಕಗಳ ಮಾಹಿತಿಗಳನ್ನು ಸಹ ಒದಗಿಸಿದ್ದಾರೆ. ಹಾಗೆಯೇ ಹಂಪಿಯ ಪ್ರವಾಸೋದ್ಯಮ ಅಭಿವೃದ್ದಿಗೆ ಕೈಗೊಳ್ಳಬೇಕಾದ ಅವಶ್ಯಕ ಕ್ರಮಗಳಾದ ಹಂಪಿಯ ಪ್ರವಾಸಿ ತಾಣದ ಬಗೆಗಿನ ಪ್ರಚಾರ, ಸಮರ್ಪಕ ಸಂಪರ್ಕ ಸಾಧನಗಳ ನಿರ್ಮಾಣ, ನದಿ ಪರಿಸರವನ್ನು ಸಂಪರ್ಕವಾಗಿ ಬಳಸಿಕೊಳ್ಳುವುದು, ವಿಶೇಷ ವಸ್ತುಸಂಗ್ರಹಾಲಯ ನಿರ್ಮಾಣ ಮುಂತಾದವುಗಳನ್ನು ಹಂಪಿಯ ರಕ್ಷಣೆಯ ಬಗೆಗಿನ ಎಚ್ಚರಿಕೆಯ ಅವಶ್ಯಕ ಕ್ರಮಗಳನ್ನು ಸಹ ದಾಖಲಿಸಿಲಾಗಿದೆ. ಅಂಥ ವಿವರಗಳನ್ನು ಅಧ್ಯಯನಕ್ಕೆ ತಕ್ಕಂತೆ ಬಳಸಿಕೊಳ್ಳಲಾಗಿದೆ. ದೇವರಾಜ್ ಡಿ.ವಿ ಚನ್ನಬಸಪ್ಪ ಎಸ್ ಪಾಟೀಲ ಅವರ ಸಂಪಾದನ ಕೃತಿ ವಿಜಯನಗರ ಅಧ್ಯಯನ ಸಂಪುಟ–೧ ರಲ್ಲಿ 'ವಿಜಯ ನಗರ ಸ್ಮಾರಕಗಳ ಸಂಕ್ಷಣೆ' ಎಂಬ ಲೇಖನದಲ್ಲಿ ಕ್ರಿ.ಶ ೧೫೬೫ ರಲ್ಲಿ ವಿಜಯನಗರ ಪತನ ನಂತರ ನೈಸರ್ಗಿಕ ಕಾರಣಗಳಿಂದ ಮತ್ತು ಮಾನವ ನಿರ್ಮಿತ ಚಟುವಟಿಕೆಗಳಿಂದ ಸ್ಮಾರಕಗಳಿಗೆ ಧಕ್ಕೆಯುಂಟಾದ ವಿವರವನ್ನು ಹಾಗೂ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯವು ವಿಜಯನಗರದಲ್ಲಿ ಕೈಗೊಂಡ ಸಂರಕ್ಷಣಾ ಕಾರ್ಯಗಳನ್ನ ಇಲ್ಲಿ ಸ್ಥೂಲವಾಗಿ ವಿವರಗಳನ್ನ ಅಧ್ಯಯನಕ್ಕೆ ತಕ್ಕಂತೆ ಬಳಸಿಕೊಳ್ಳಲಾಗಿದೆ. ಈ ಮೇಲೆ ತಿಳಿಸಿದ ಅಧ್ಯಯನಕ್ಕೆ ಸಂಬಂಧಿಸಿದ ಲೇಖನಗಳಲ್ಲಿ ಉಲ್ಲೇಖಗೊಂಡ ವಿವರಗಳನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಬಳಸಿಕೊಳ್ಳಲಾಗಿದೆ.

ಶೀಲಾಕಾಂತ ಪತ್ತಾರ ಅವರ 'ಪಟ್ಟದಕಲ್ಲು ದರ್ಶನ' ಕೃತಿಯು ಪಟ್ಟದಕಲ್ಲು ಗ್ರಾಮಕ್ಕೆ ಇದ್ದಂತಹ ಹೆಸರುಗಳನ್ನು ಅವುಗಳ ಆಧಾರಸಹಿತವಾಗಿ ದಾಖಲಿಸಿದ್ದಾರೆ ಬಾದಾಮಿ ಚಾಲುಕ್ಯರ ರಾಜಕೀಯ ಇತಿಹಾಸದ ಜೊತೆಗೆ ಪಟ್ಟದಕಲ್ಲು ಗುಂಪು ಸ್ಮಾರಕಗಳ

ವಾಸ್ತುಲಕ್ಷಣಗಳನ್ನು ವಿವರಿಸಿದ್ದಾರೆ. ಮಲ್ಲಿಕಾ.ಎಸ್.ಘಂಟಿ ಅವರ ಸಂಪಾದಿತ 'ಹಂಪಿ ಇತಿಹಾಸ ಅವಲೋಕನ' ಕೃತಿಯು ಹಂಪಿ ಪರಿಸರದ ಭೌಗೋಳಿಕ ಪ್ರದೇಶದಿಂದ ಹಿಡಿದು ಪ್ರಾಗಿತಿಹಾಸ ಕಾಲದ ಸಂಸ್ಕೃತಿ ವಿಜಯನಗರ ಕಾಲದ ಆಡಳಿತ, ರಾಜಕೀಯ, ದೇವಾಲಯಗಳು, ಕಲೆ ಮತ್ತು ವಾಸ್ತುಶಿಲ್ಪ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಸಂಕ್ಷಿಪ್ತ ವಿವರಗಳನ್ನು ಒಳಗೊಂಡಿರುವುದು. ವಾಸುದೇವನ್ ಸಿ.ಎಸ್., ಅವರ 'ರಿಪೋರ್ಟ್ ಆನ್ ದ ಎಕ್ಸ್‌ಕವೇಷನ್ಸ್ ಅಟ್ ಹಂಪಿ' (1991-2010) ವ್ಯಾಲ್ಯೂಮ್-1, ವ್ಯಾಲ್ಯೂಮ್-2, ಮತ್ತು ಹಂಪಿ ವಿಶ್ವಪರಂಪರೆ ಪ್ರದೇಶ ಎಂಬ ಕೃತಿಗಳು ಹಂಪಿಯ ಚಾರಿತ್ರಿಕ ಹಿನ್ನೆಲೆಯ ಹಾಗೂ ಹಂಪಿಯ ಸ್ಮಾರಕಗಳ ಕುರಿತ ಮಾಹಿತಿಗಳನ್ನು ನೀಡುತ್ತವೆ. ಅರುಣ್ ಮೆನನ್ ಅವರ 'ಹೆರಿಟೇಜ್ ಕನ್ಸರ್ವೇಷನ್ ಇನ್ ಇಂಡಿಯಾ : ಚಾಲೆಂಜಸ್ ಆಂಡ್ ನಿವ್ ಪ್ಯಾರಾಡಿಮ್ಸ್' ಎನ್ನುವ ಲೇಖನದಲ್ಲಿ ಭಾರತದ ಪಾರಂಪರಿಕ ಸಂರಕ್ಷಣೆಯ ಸವಾಲುಗಳ ವಿಶ್ಲೇಷಣೆಯನ್ನು ಕುರಿತು ಉಲ್ಲೇಖಿಸಿದ್ದಾರೆ. ಈ ಲೇಖನದ ಹಲವು ವಿಷಯಗಳನ್ನು ಅಧ್ಯಯನಕ್ಕೆ ತಕ್ಕಂತೆ ಬಳಸಿಕೊಳ್ಳಲಾಗಿದೆ.

ಅಧ್ಯಯನಕ್ಕೆ ಪೂರಕವಾಗಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಅವರು ಪ್ರಕಟಿಸಿರುವ ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಎಂಬ ಹೆಸರಿನ ಸಂಪಾದನ ಕೃತಿಗಳಲ್ಲಿ ಪ್ರಸ್ತುತ ವಿಶ್ವಪರಂಪರೆಯ ತಾಣಗಳು ಹಾಗೂ ಸಂಭಾವ್ಯ ತಾಣಗಳ ಬಗ್ಗೆ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ದಾಖಲಿಸಲಾಗಿದೆ. ಅಂಥ ವಿವರಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

ಸಿದ್ದಪ್ಪ ಕೆ. ಅವರ 'ಪ್ರವಾಸೋದ್ಯಮ ಮತ್ತು ಅಭಿವೃದ್ಧಿ' ನಿಬಂಧದಲ್ಲಿ ಅಸಂಘಟಿತ ಪ್ರವಾಸೋದ್ಯಮ ಮತ್ತು ಸಾಮಾಜಿಕ ಹಾಗೂ ಆರ್ಥಿಕ ಪರಿವರ್ತನೆಯ ಸಂಬಂಧಗಳನ್ನು ಅಧ್ಯಯನ ಮಾಡುವ ಉದ್ದೇಶವನ್ನಿಟ್ಟುಕೊಂಡು ರೂಪಗೊಂಡ ಪ್ರಬಂಧವಾಗಿದೆ. ವಿಶ್ವಪಾರಂಪರಿಕ ತಾಣಗಳ ಪಟ್ಟಿಯಲ್ಲಿ ಸೇರ್ಪಡೆಯಾದ ನಂತರ ಹಂಪಿಯ ಪ್ರವಾಸೋದ್ಯಮ ಹಾಗೂ ಅಭಿವೃದ್ಧಿಯ ಕುರಿತು ನಡೆದ ಅಧ್ಯಯನ ಇದಾದ್ದರಿಂದ ಸಂರಕ್ಷಣೆಯಾದ ಸ್ಮಾರಕಗಳನ್ನು ಯಾವ ರೀತಿಯಾಗಿ ಅಭಿವೃದ್ಧಿಪಡಿಸಬೇಕು ಎಂಬ ಅಂಶಗಳನ್ನು ಅಲ್ಲಲ್ಲಿ ವಿವರಿಸಿದ್ದಾರೆ. ಈ ತಾಣದಲ್ಲಿ ವಿದೇಶಿ ಪ್ರವಾಸಿಗರನ್ನು ಗಮನದಲ್ಲಿಟ್ಟುಕೊಂಡು ಅವರನ್ನು ತೃಪ್ತಿಪಡಿಸುವ ದಿಶೆಯಲ್ಲಿ ಪ್ರವಾಸೋದ್ಯಮ ನೀತಿಗಳು ರೂಪಿತವಾಗಿವೆ. ಪ್ರಬಂಧದಲ್ಲಿ

ಹಂಪೆಯ ಪರಿಚಯ, ಪ್ರವಾಸಿಗರ ಹಿನ್ನೆಲೆ, ಅವರ ಬೇಡಿಕೆಗಳು, ಸ್ಥಳೀಯ ಸಂಪನ್ಮೂಲಗಳು, ಹೀಗೆ ಹಲವಾರು ವಿಷಯಗಳನ್ನು ಸಂಬಂಧಿಸಿದ ಪ್ರಬಂಧವು ಒಳಗೊಂಡಿರುವುದು. ಅಂಥ ವಿವರಗಳನ್ನೆಲ್ಲ ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಪ್ರವಾಸೋದ್ಯಮದ ಹಿನ್ನೆಲೆಯಲ್ಲಿ ರಚಿತವಾದ ಈ ಮಹಾಪ್ರಬಂಧವು ವಿಶ್ವ ಪಾರಂಪರಿಕ ತಾಣ ಹಂಪೆಯ ಕೆಲವು ಜವಾಬ್ದಾರಿ ಅಂಶಗಳನ್ನು ತಿಳಿಸುವಲ್ಲಿ ಸಹಾಯಕಾರಿಯಾದ ವಿಷಯಗಳ ಮಾಹಿತಿಗಳನ್ನು ನೀಡುತ್ತದೆ. ಈ ಪ್ರಬಂಧದಲ್ಲಿ ದಾಖಲಾದ ಮಹತ್ವ ಅಂಶಗಳನ್ನು ಪ್ರಸ್ತುತ ಪ್ರಬಂಧದಲ್ಲಿ ಪೂರಕವಾದ ವಿವರಗಳನ್ನಾಗಿ ಅಳವಡಿಸಿಕೊಳ್ಳಲಾಗಿದೆ. ಜಿಲಾನ್‌ಖಾನ್ ಅವರ 'ದೇಶಿ–ವಿದೇಶಿಯರ ದೃಷ್ಟಿಯಲ್ಲಿ ಹಂಪಿ : ಚಾರಿತ್ರಿಕ ಅಧ್ಯಯನ' ಎಂಬ ನಿಬಂಧವು ಹಂಪಿಯ ಸಾಂಸ್ಕೃತಿಕ ಹಿನ್ನೆಲೆ ಪ್ರಸ್ತುತ ಹಂಪಿಯ ಸಮಸ್ಯೆ ಸವಾಲುಗಳು ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ ಕಾರ್ಯಗಳ ಕುರಿತ ಸಂಕ್ಷಿಪ್ತ ವಿವರಗಳನ್ನು ನೀಡುತ್ತದೆ.

ಶ್ರೀವತ್ಸ ವಟಿ ಅವರ ಹೊಯ್ಸಳ ಸಾಮ್ರಾಜ್ಯದ ಕೆಲವು ಆಯ್ದ ಸ್ಥಳಗಳ ಕುರಿತ ಸಂಶೋಧನಾಧ್ಯಯನ ವರದಿ. ಈ ವರದಿಯು ಬೇಲೂರು ಮತ್ತು ಹಳೇಬೀಡು ಸ್ಥಳಗಳಲ್ಲಿರುವ ಸ್ಮಾರಕಗಳ ವಿವರಗಳನ್ನು ಒಳಗೊಂಡಿರುವುದು. ಅಂಥ ವಿವರಗಳನ್ನೆಲ್ಲ ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

'ಕರ್ನಾಟಕದ ವಿಶ್ವಪಾರಂಪರಿಕ ತಾಣಗಳು' ಕುರಿತ ಪ್ರಸ್ತುತ ಪ್ರಬಂಧದ ವಿಷಯವನ್ನು ವಿವಿಧ ಆಯಾಮಗಳಿಂದ ಸಮಗ್ರವಾಗಿ ರೂಪಿಸಿಕೊಳ್ಳುವ ಅವಶ್ಯಕತೆಯ ಹಿನ್ನೆಲೆಯಲ್ಲಿ ಅಗತ್ಯವಿರುವ ಪ್ರಮುಖ ವರದಿಗಳು, ನಿರ್ಣಯ ಹಾಗೂ ಕ್ರಮಗಳ ಕುರಿತು ಸಂಬಂಧಿಸಿದ ಇಲಾಖೆಗಳು ನೀಡಿರುವ ಮಾಹಿತಿಗಳನ್ನೆಲ್ಲ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ**

ಅಧ್ಯಯನಕ್ಕೆ ಪೂರಕವಾಗಿ ಸಂಗ್ರಹಿಸಿದ ಮಾಹಿತಿಗಳನ್ನು ಆಧರಿಸಿ ಏಳು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಮೊದಲನೆಯ ಅಧ್ಯಾಯವು ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸಮೀಕ್ಷೆ ಮತ್ತು ಸ್ವರೂಪವನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯವು ವಿಶ್ವ, ಭಾರತ ಮತ್ತು ಕರ್ನಾಟಕದಲ್ಲಿರುವ ವಿಶ್ವಪಾರಂಪರಿಕ ತಾಣಗಳ ಐತಿಹಾಸಿಕ ಹಿನ್ನೆಲೆ ಮಹತ್ವಗಳ ಕುರಿತು ವಿಶ್ವಪರಂಪರೆ ಪಟ್ಟಿಗೆ

ಇದುವರೆಗೂ ಸೇರಲ್ಪಡುವ ಕುರಿತ ಮಾಹಿತಿ ಜೊತೆಗೆ ಭಾರತದ, ಕರ್ನಾಟಕದ ವಿಶ್ವಪರಂಪರೆ ತಾಣಗಳನ್ನು ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ವಿಶ್ವಪಾರಂಪರಿಕ ತಾಣವಾಗಿ ಗುರುತಿಸಿರುವ ಐತಿಹಾಸಿಕ ಹಂಪಿಯ ಐತಿಹಾಸಿಕ ಹಿನ್ನೆಲೆ ಹಾಗೂ ಅಲ್ಲಿರುವ ಪ್ರಮುಖ ದೇವಾಲಯಗಳು ಮತ್ತು ಇತರೆ ಕಟ್ಟಡಗಳ ಕುರಿತು ಅಧ್ಯಯನದ ಆಶಯಗಳಿಗೆ ಪೂರಕವಾಗಿ ಹಾಗೂ ಸಂಕ್ಷಿಪ್ತವಾಗಿ ವಿವರಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ವಿಶ್ವಪಾರಂಪರಿಕ ತಾಣಗಳ ಪಟ್ಟಿಯಲ್ಲಿ ಸೇರ್ಪಡೆಯಾಗಿರುವ ಪಟ್ಟದಕಲ್ಲು ತಾಣದ ಐತಿಹಾಸಿಕ ಹಿನ್ನೆಲೆ, ಪ್ರಮುಖ ದೇವಾಲಯಗಳು ಮತ್ತು ಇತರೆ ಸ್ಮಾರಕಗಳನ್ನು ಕುರಿತು ಅವುಗಳಿಗೆ ಸಂಬಂಧಿಸಿದ ವರದಿಗಳು ಹಾಗೂ ವಿವರಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಕರ್ನಾಟಕದ ವಿಶ್ವಪಾರಂಪರಿಕ ಸಂಭಾವ್ಯ ತಾಣಗಳಾದ ಉತ್ತರ ಕರ್ನಾಟಕ ಪ್ರದೇಶಗಳಲ್ಲಿರುವ ಪ್ರಮುಖ ತಾಣಗಳನ್ನು ಅನುಲಕ್ಷಿಸಿ ಐಹೊಳೆ, ಬಾದಾಮಿ, ಬಿಜಾಪುರ ಮತ್ತು ದಕ್ಷಿಣ ಕರ್ನಾಟಕ ಪ್ರದೇಶಗಳಲ್ಲಿರುವ ಪ್ರಮುಖ ತಾಣಗಳನ್ನು ಅನುಲಕ್ಷಿಸಿ ಬೇಲೂರು, ಹಳೇಬೀಡು, ಸೋಮನಾಥಪುರ, ಶ್ರವಣಬೆಳಗೊಳ ತಾಣಗಳ ಕುರಿತ ವರದಿಗಳು ಹಾಗೂ ವಿವರಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಆರನೆಯ ಅಧ್ಯಾಯದಲ್ಲಿ ವಿಶ್ವಪಾರಂಪರಿಕ ತಾಣಗಳ ನಿರ್ವಹಣೆಯಲ್ಲಿ ತಲೆದೋರಬಹುದಾದ ನೀತಿ–ನಿಯಮಗಳು ಹಾಗೂ ಅನುಷ್ಠಾನ ಮತ್ತು ಸಮಸ್ಯೆಗಳ ಕುರಿತು ಕ್ಷೇತ್ರಾಧಾರಿತ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ದಾಖಲಾಗಿರುವ ವಿವರಗಳನ್ನು ವಿಶ್ಲೇಷಣಾತ್ಮಕವಾಗಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು ಅಧ್ಯಯನದ ಸಂಕ್ಷಿಪ್ತ ರೂಪವನ್ನು ನೀಡಲಾಗಿದೆ, ಒಟ್ಟಾರೆ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಸಮಗ್ರವಾಗಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಅನುಬಂಧದಲ್ಲಿ ಅಧ್ಯಯನ ಪೂರಕ ಮಾಹಿತಿಗಳಾದ ಗ್ರಂಥಋಣ, ವಕ್ತೃ ವಿವರ, ವಿಶ್ವ ಪಾರಂಪರಿಕ ತಾಣಗಳ ಪಟ್ಟಿ, ನಕಾಶೆಗಳು ಹಾಗೂ ಛಾಯಾಚಿತ್ರಗಳನ್ನು ಅಳವಡಿಸಿಕೊಳ್ಳುವುದರ ಮೂಲಕ ಅಧ್ಯಯನ ಪೂರ್ಣಗೊಳಿಸುವ ಪ್ರಯತ್ನ ಮಾಡಲಾಗಿದೆ.

# ಅಧ್ಯಾಯ – ಎರಡು

## ವಿಶ್ವಪಾರಂಪರಿಕ ತಾಣಗಳ ಐತಿಹಾಸಿಕ ಹಿನ್ನಲೆ ಮತ್ತು ಮಹತ್ವ

ವಿಶ್ವ

ಭಾರತ

ಕರ್ನಾಟಕ

## ಅಧ್ಯಾಯ – ಎರಡು

## ವಿಶ್ವಪಾರಂಪರಿಕ ತಾಣಗಳ ಐತಿಹಾಸಿಕ ಹಿನ್ನಲೆ ಮತ್ತು ಮಹತ್ವ

ನಾವು ನಮ್ಮ ಪೂರ್ವಜರಿಂದ ಅಮೂಲ್ಯವಾದ ಹಲವು ಕೊಡುಗೆಗಳನ್ನು ಪಡೆದುಕೊಂಡು ಬಂದಿದ್ದೇವೆ. ಅಂಥ ಸಾಂಸ್ಕೃತಿಕ ಹೆಗ್ಗುರುತುಗಳನ್ನು ಮುಂದಿನ ಪೀಳಿಗೆಯವರಿಗೆ ಉಳಿಸಿ ಕಾಪಾಡುವುದು ವರ್ತಮಾನದಲ್ಲಿ ಬದುಕುತ್ತಿರುವವರ ಆದ್ಯ ಜವಾಬ್ದಾರಿಗಳಾಗಿವೆ. ಹಿಂದಿನವರ ಅಮೂಲ್ಯವಾದ ಕೊಡುಗೆಗಳೇ ನಮ್ಮ ಪರಂಪರೆಯ ಧ್ಯೋತಕಗಳಾಗಿವೆ. ಅವು ನಮ್ಮ ಪರಂಪರೆಗಳನ್ನು ಕಟ್ಟಿಕೊಡುವ ಸಾಂಸ್ಕೃತಿಕ ಚರಿತ್ರೆಯ ಆಕರಗಳಾಗಿವೆ. ಅದೇ ರೀತಿ ನಿಸರ್ಗ ನಿರ್ಮಿತಿ ಆಕಾರಗಳು ಕೂಡಾ ನಮ್ಮ ನಾಗರೀಕತೆಯ ಬೆಳವಣಿಗೆ ಪ್ರಮುಖ ಸಾಕ್ಷಿಗಳಾಗಿವೆ. ಹಿಮಾಲಯದ ನಿಸರ್ಗ ಸುಂದರ ತಾಣಗಳು ತಾಜ್‌ಮಹಲ್, ತಂಜಾವೂರಿನ ಬೃಹದೇಶ್ವರ ದೇಗುಲ, ಈಜಿಪ್ಟಿನ ಪಿರಮಿಡ್‌ಗಳು, ಆಸ್ಟ್ರೇಲಿಯಾದ ಗ್ರೇಟ್ ಬ್ಯಾರಿಯರ್ ರೀಫ್ ಮುಂತಾದ ವಿಶೇಷ ಮತ್ತು ವಿಭಿನ್ನವಾದ ಸ್ಥಳಗಳನ್ನು ವಿಶ್ವಪಾರಂಪರಿಕ ನೆಲೆಗಳೆಂದು ಗುರುತಿಸಲಾಗಿದೆ. ವಿಶ್ವಪರಂಪರೆಯ ಬಗ್ಗೆ ರೂಪಿಸಿದ ಪರಿಕಲ್ಪನೆ "ಶ್ರೇಷ್ಠವಾದ ಜಾಗತಿಕ ಮೌಲ್ಯವುಳ್ಳ ನೆಲೆಗಳೇ ವಿಶ್ವ ಪರಂಪರೆಯ ನೆಲೆಗಳು ಅಥವಾ ಪ್ರದೇಶಗಳು".[೧] ವಿಶ್ವ ಪಾರಂಪರಿಕ ಸ್ಥಳಗಳು ಯಾವುದೇ ದೇಶದಲ್ಲಿರಬಹುದು ಅಥವಾ ಜಗತ್ತಿನ ಯಾವುದೇ ಭಾಗದಲ್ಲಿರಬಹುದು ಅವೆಲ್ಲವೂ ಜಗತ್ತಿನ ಜನರೆಲ್ಲರಿಗೂ ಸೇರಿರುತ್ತವೆ.

**ವಿಶ್ವಪರಂಪರೆ :**

ಮೊದಲನೆಯ ಜಾಗತಿಕ ಯುದ್ಧದ ನಂತರ ಪರಂಪರೆಯನ್ನು ಉಳಿಸುವ ಆಂದೋಲನ ಆರಂಭವಾಯಿತು. ಆದರೆ ಇದು ಜಗತ್ತಿನ ಜನತೆಯ ಗಮನವನ್ನು ಸೆಳೆಯತೊಡಗಿದ್ದು ೧೯೫೯ರ ನಂತರ. ಅದೇ ವರ್ಷ ಈಜಿಪ್ಟಿನಲ್ಲಿ ಆಸ್ವಾನ್ ಅಣೆಕಟ್ಟೆಯ ನಿರ್ಮಾಣಕಾರ್ಯ ಆರಂಭವಾಯಿತು. ಇದರ ಪರಿಣಾಮಗಳಿಂದ ನೀರಿನಲ್ಲಿ ಪ್ರಾಚೀನ ಈಜಿಪ್ಟಿನ ನಾಗರೀಕತೆಯ ಅಮೂಲ್ಯವಾದ ಅಬುಸಿಂಬೆಲ್ ದೇವಾಲಯಗಳು ಶಾಶ್ವತವಾಗಿ ಮುಳುಗಿ ಹೋಗುತ್ತಿದ್ದವು ಇವುಗಳನ್ನು ಸಂರಕ್ಷಿಸುವುದು ಈಜಿಪ್ಟಿನಂತಹ ಒಂದು ದೇಶಕ್ಕೆ ಅಥವಾ ಇನ್ನಾವುದೇ ತೃತೀಯ ಜಗತ್ತಿನ ರಾಷ್ಟ್ರಕ್ಕೂ ಇಂಥ ಸವಾಲುಗಳನ್ನು ಎದುರಿಸುವುದು ಕಷ್ಟವಾಗಿತ್ತು.[೨] ಆದ್ದರಿಂದ ಈಜಿಪ್ಟ್ ಮತ್ತು ಸುಡಾನ್ ಸರ್ಕಾರಗಳು ವಿಶ್ವಸಂಸ್ಥೆಯ ನೆರವನ್ನು ಕೇಳಿದವು. ವಿಶ್ವಸಂಸ್ಥೆಯ ಯುನೆಸ್ಕೋ ಸಂಸ್ಥೆಯು ಅಬುಸಿಂಬೆಲ್ ದೇವಾಲಯಗಳನ್ನು

ಉಳಿಸುವ ಮಹತ್ಕಾರ್ಯಕ್ಕೆ ಉದಾರವಾಗಿ ದೇಣಿಗೆಯನ್ನು ಕೊಡುವಂತೆ ಜಗತ್ತಿನ ದೇಶಗಳನ್ನು ಕೇಳಿಕೊಂಡಾಗ ಹಲವಾರು ದೇಶಗಳು ನೆರವಾದವು.[೩] ಹಾಗಾಗಿ ಆ ಪ್ರದೇಶಗಳಿಗೆ ಸಂಬಂಧಿಸಿದ ಪುರಾತತ್ವ ಶೋಧನೆ ಮತ್ತು ಸಂಶೋಧನೆಯ ಕಾರ್ಯಗಳು ತ್ವರಿತಗತಿಯಲ್ಲಿ ನಡೆದವು. ಪರಿಣಾಮವಾಗಿ ಅಬುಸಿಂಬೆಲ್ ಮತ್ತು ಪೈಲೆ ದೇವಾಲಯಗಳನ್ನು ಅಲ್ಲಿಂದ ಸ್ಥಳಾಂತರಿಸಿ ಸುರಕ್ಷಿತ ತಾಣಕ್ಕೆ ತೆಗೆದುಕೊಂಡು ಹೋಗಿ ಪುನಃ ಜೋಡಿಸಲಾಯಿತು. ಇಂಥ ಮಹತ್ವದ ಕಾರ್ಯಗಳಿಂದ ಅಲ್ಲಿಯ ದೇವಾಲಯಗಳು ಜಗತ್ತಿನ ಅದ್ಭುತವಾದ ವಾಸ್ತುಶಿಲ್ಪದ ಬಹುಮುಖ್ಯ ಕೊಡುಗೆಗಳು ಎಂಬ ಸಂಗತಿಗಳು ಬೆಳಕಿಗೆ ಬಂದವು.

ಯುನೆಸ್ಕೋ ಸಂಸ್ಥೆ ಈಜಿಪ್ಟಿನ ಪರಂಪರೆಯನ್ನು ಉಳಿಸಲು ಸುಮಾರು ೮೦ ಮಿಲಿಯನ್ ಅಮೇರಿಕನ್ ಡಾಲರ್‌ಗಳನ್ನು ವೆಚ್ಚ ಮಾಡಿತು.[೪] ಇದರಲ್ಲಿ ಅರ್ಧದಷ್ಟು ಹಣವನ್ನು ೫೦ ದೇಶಗಳು ನೀಡಿದ್ದವು. ಜಗತ್ತಿನ ಇಂತಹ ಮಹತ್ವ ಐತಿಹಾಸಿಕ ಮತ್ತು ಸಾಂಸ್ಕೃತಿಕ ನೆಲೆಗಳನ್ನು ಉಳಿಸಲು ಜಗತ್ತಿನ ದೇಶಗಳು ತೋರಿದ ಅಪೂರ್ವವಾದ ಏಕತೆ ಮತ್ತು ಜವಾಬ್ದಾರಿಯನ್ನು ವಹಿಸಿಕೊಳ್ಳಲು ಅವು ಮುಂದಾದ ಪರಿಯು ನಿಜಕ್ಕೂ ಶ್ಲಾಘನೀಯವಾದುದು. ಈಜಿಪ್ಟಿನ ಈ ಯಶಸ್ಸಿನ ಕಾರ್ಯಚರಣೆಯಿಂದ ಪಾರಂಪರಿಕ ಸಾಂಸ್ಕೃತಿಕ ನೆಲೆಗಳನ್ನು ಉಳಿಸುವ ಆಂದೋಲನವೇ ಆರಂಭವಾಯಿತು. ಇದರ ಅಂಗವಾಗಿ ವೆನೀಸ್, ಲಗೂನ್ ಹಾಗೂ ಮೆಹೆಂಜೋದಾರೋ ನೆಲೆಗಳಲ್ಲಿರುವ ಪುರಾತತ್ವಕ್ಕೆ ಸಂಬಂಧಿಸಿದ ಮಹತ್ವದ ಅವಶೇಷಗಳನ್ನು ಹಾಗೂ ಇಂಡೋನೇಷ್ಯಾದ ಬೊರೊಬೊದುರ್‌ನ ದೇವಾಲಯಗಳ ರಕ್ಷಣಾ ಕಾರ್ಯಗಳು ನಡೆದವು. ಇದರ ಪರಿಣಾಮವಾಗಿ ಯುನೆಸ್ಕೋ ಸಂಸ್ಥೆಯು ಸಾಂಸ್ಕೃತಿಕ ಪರಂಪರೆಯನ್ನು ರಕ್ಷಿಸುವ ಬಗ್ಗೆ ಕರುಡು ಸಿದ್ದಪಡಿಸಲು ಸ್ಮಾರಕಗಳು ಮತ್ತು ನೆಲೆಗಳ ಅಂತರಾಷ್ಟ್ರೀಯ ಸಮಿತಿ[೫] [ICOMAS INTERNATIONAL COUNCIL ON MONUMENTS AND SITES] ಯೊಂದಿಗೆ ಹಲವಾರು ಸಮಾವೇಶಗಳ ಮೂಲಕ ಮಹತ್ವದ ಪ್ರಯತ್ನಗಳನ್ನು ಕೈಗೊಂಡಿತು.

ಸಾಂಸ್ಕೃತಿಕ ಪರಂಪರೆಯನ್ನು ಉಳಿಸುವುದರ ಜೊತೆಗೆ ನೈಸರ್ಗಿಕ ಸ್ಥಳಗಳನ್ನು ಕಾಪಾಡಬೇಕೆಂಬ ಆಸಕ್ತಿ ಮೂಡಿದ್ದು ಅಮೇರಿಕಾ ಸಂಯುಕ್ತ ಸಂಸ್ಥಾನಗಳಿಂದ ವಾಷಿಂಗ್‌ಟನ್ ಡಿ.ಸಿ.ಯ ಶ್ವೇತಭವನದಲ್ಲಿ ೧೯೬೫ರಲ್ಲಿ ಸಮಾವೇಶವೊಂದನ್ನು ಏರ್ಪಡಿಸಿ "ಜಾಗತಿಕ ಪರಂಪರೆಯ ಟ್ರಸ್ಟನ್ನು"[೬] ಸ್ಥಾಪಿಸಲು ಸೂಚಿಸಿತು. ಜಗತ್ತಿನಲ್ಲಿರುವ ಸುಂದರ ನೈಸರ್ಗಿಕ ತಾಣಗಳನ್ನು ಮತ್ತು ಐತಿಹಾಸಿಕ ಸ್ಥಳಗಳನ್ನು ಭವಿಷ್ಯದ ನಾಗರೀಕರಿಗಾಗಿ ಕಾಪಾಡಲು ಈ

ಟ್ರಸ್ಟ್ ಶ್ರಮಿಸುವ ಉದ್ದೇಶಗಳನ್ನು ಹೊಂದಿತ್ತು. ಇವುಗಳನ್ನು ಮತ್ತಷ್ಟು ಉತ್ತಮ ಪಡಿಸಲು ೧೯೬೮ರಲ್ಲಿ "ನಿಸರ್ಗ ಸಂರಕ್ಷಣೆಯ ಅಂತಾರಾಷ್ಟ್ರೀಯ ಒಕ್ಕೂಟವು"[೭] [IUCN-International union for conservation of Nature] ತನ್ನ ಸದಸ್ಯರ ಮುಂದೆ ಪ್ರಸ್ತಾಪವನ್ನು ಇಟ್ಟಿತು.

ಮಾನವೀಯತೆಗೆ ಶ್ರೇಷ್ಠವಾದ ಜಾಗತಿಕ ಮೌಲ್ಯವುಳ್ಳ ನೆಲೆಗಳನ್ನು ಗುರುತಿಸುವುದು, ರಕ್ಷಿಸುವುದು ಮತ್ತು ಮುಂದಿನ ಪೀಳಿಗೆಗಾಗಿ ಕಾಯ್ದಿಡುವುದು ಇಂತಹ ಮಹತ್ಕಾರ್ಯವನ್ನು ವಿಶ್ವಸಂಸ್ಥೆಯ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಸಂಸ್ಥೆ ಯುನೆಸ್ಕೋ ಕೈಗೊಂಡಿದೆ. ಇದರಲ್ಲಿ ಸಾಂಸ್ಕೃತಿಕ ಮತ್ತು ನೈಸರ್ಗಿಕ ನೆಲೆಗಳೆರಡೂ ಸೇರ್ಪಡೆಯಾಗಿವೆ. ಯುನೆಸ್ಕೋ ಸಂಸ್ಥೆಯು ಮನುಕುಲದ ಸಾಂಸ್ಕೃತಿಕ, ಐತಿಹಾಸಿಕ, ತಾಂತ್ರಿಕ ಮತ್ತು ಇತರ ಸಾಧನೆಗಳನ್ನು ಪ್ರತಿಬಿಂಬಿಸುವ ಮಹೋನ್ನತ ಕಲಾಕೃತಿ, ಕಟ್ಟಡ ಇಲ್ಲವೇ ಸ್ಮಾರಕ ಮೊದಲಾದವುಗಳನ್ನು ಸಂರಕ್ಷಿಸಬೇಕೆಂಬ ಒಂದು ಔಚಿತ್ಯಪೂರ್ಣ ನಿರ್ಧಾರವನ್ನು ೧೯೭೨ರಲ್ಲಿ ನಡೆದ ರೋಮ್ ಅಧಿವೇಶನದಲ್ಲಿ ಕೈಗೊಂಡಿತು.[೮] ಈ ಸಂದರ್ಭದಲ್ಲಿ ವಿಶ್ವದ ೧೭೫ ಸದಸ್ಯ ರಾಷ್ಟ್ರಗಳು ಯುನೆಸ್ಕೋದ ಸಂರಕ್ಷಣಾ ಪ್ರಣಾಳಿಕೆಗೆ ಸಹಿ ಹಾಕಿ ವಿಶ್ವಪರಂಪರೆಯನ್ನು ಉಳಿಸುವ ಕಾರ್ಯನೀತಿ ಮತ್ತು ಸಂದೇಶಗಳನ್ನು ಜಾರಿಗೊಳಿಸಿತು. ಈ ಒಪ್ಪಂದಕ್ಕೆ ಸಹಿ ಹಾಕಿದ ಪ್ರತಿ ರಾಷ್ಟ್ರವನ್ನು "ರಾಜ್ಯಪಕ್ಷ"[೯] ಎಂದು ಕರೆಯಲಾಗಿದೆ. ಪ್ರತಿ ರಾಜ್ಯ ಪಕ್ಷವು ತನ್ನಲ್ಲಿರುವ ಅತ್ಯಮೂಲ್ಯವಾದ ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಗುರುತಿಸಿ, ಅವುಗಳನ್ನು ಸಂರಕ್ಷಿಸಿ ಮುಂದಿನ ಜನಾಂಗಕ್ಕೆ ಹಸ್ತಾಂತರಿಸುವುದು ಕರ್ತವ್ಯ ಎಂದು ಭಾವಿಸಿ ಕೂಡಲೇ ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಕೇಳಿಕೊಳ್ಳಲಾಯಿತು.

ಒಂದು ಸಾರಿ ವಿಶ್ವಪರಂಪರೆ ಪಟ್ಟಿಯಲ್ಲಿ ಯಾವುದೇ ಸ್ಥಳ ಸೇರಿದರೂ ಸಂಬಂಧಿಸಿದ ಆ ದೇಶವು, ಆ ಸ್ಥಳದ ಸಂಪೂರ್ಣ ಸಂರಕ್ಷಣೆಯ ಜವಾಬ್ದಾರಿಯನ್ನು ನೋಡಿಕೊಳ್ಳಬೇಕು. ಯಾವ ಶ್ರೇಷ್ಠ ಮೌಲ್ಯಕ್ಕೋಸ್ಕರ ಆ ಸ್ಥಳವನ್ನು ವಿಶ್ವಪರಂಪರೆ ಪಟ್ಟಿಗೆ ಸೇರಿಸಲಾಗಿದೆಯೋ ಆ ಮೌಲ್ಯಕ್ಕೆ ಯಾವುದೇ ಸಂಧರ್ಭದಲ್ಲಿಯೂ ಧಕ್ಕೆ ಬರದಂತೆ ಕಾಪಾಡಿಕೊಳ್ಳಬೇಕು. ವಿಶ್ವಪರಂಪರೆ ಒಪ್ಪಂದದ ೫ನೇ ಕಲಂ ಅನ್ವಯ ತನ್ನ ಪ್ರದೇಶದಲ್ಲಿರುವ ಪ್ರಾಕೃತಿಕ ಅಥವಾ ಸಾಂಸ್ಕೃತಿಕ, ಪಾರಂಪರಿಕ ಸ್ಥಳಗಳಿಗೆ ಸೂಕ್ತವಾಗಿ ರಕ್ಷಣೆ ಕೊಟ್ಟು ಸಂರಕ್ಷಿಸಿ ಉಳಿಸಬೇಕಾದ್ದು ಆಯಾ ರಾಜ್ಯ ಪಕ್ಷದ ಜವಾಬ್ದಾರಿಯಾಗಿರುತ್ತದೆ.[೧೦] ಇದಕ್ಕೆ ಬೇಕಾದ ಸೂಕ್ತ ಆಡಳಿತಾತ್ಮಕ ಹಾಗೂ ಕಾನೂನು ಕ್ರಮವನ್ನು ಸೂಕ್ತ ಸಮಯದಲ್ಲಿ ತೆಗೆದುಕೊಳ್ಳುವುದು ಅವುಗಳ

ಕೆಲಸವಾಗಿರುತ್ತದೆ. ಆಯಾ ಸರ್ಕಾರಗಳು ವಿಶ್ವಪರಂಪರೆ ಸ್ಥಳಗಳಲ್ಲಿ ಅಭಿವೃದ್ಧಿ ಕಾರ್ಯ ಯೋಜನೆಯನ್ನು ಹಾಕಿಕೊಳ್ಳುವಾಗ ವಿಶ್ವಪರಂಪರೆ ತಾಣಕ್ಕೆ ಯಾವುದೇ ಧಕ್ಕೆಯಾಗದಂತೆ ವಿಶೇಷ ಕಾಳಜಿ ವಹಿಸಬೇಕು. ಸ್ಥಳೀಯರನ್ನು ಸಂಪೂರ್ಣ ವಿಶ್ವಾಸಕ್ಕೆ ತೆಗೆದುಕೊಂಡು, ಯೋಜನೆಯನ್ನು ರೂಪಿಸಬೇಕು ಎಲ್ಲ ಅಭಿವೃದ್ಧಿ ಯೋಜನೆಗಳೂ ವಿಶ್ವಪರಂಪರೆ ತಾಣದ ಸಂರಕ್ಷಣೆಗೆ ಪೂರಕವಾಗಿರಬೇಕು ಎಲ್ಲ ರಾಜ್ಯ ಪಕ್ಷಗಳೂ ಈ ಕೆಳಕಂಡ ಜವಾಬ್ದಾರಿಯನ್ನು ನಿರ್ವಹಿಸಬೇಕು.

೧. ವಿಶ್ವಪರಂಪರೆ ತಾಣವನ್ನು ಗುರುತಿಸುವುದರಿಂದ ಹಿಡಿದು ಅದರ ಸಂಪೂರ್ಣ ರಕ್ಷಣೆಯಲ್ಲಿ ಸಂಬಂಧಪಟ್ಟ ಎಲ್ಲರನ್ನು ತೊಡಗಿಸಬೇಕು. ಸ್ಥಳೀಯ ಸರ್ಕಾರಗಳು, ಸರ್ಕಾರೇತರ ಸಂಸ್ಥೆಗಳು, ಸಾಮಾಜಿಕ ಕಾರ್ಯಕರ್ತರು, ಸ್ಥಳೀಯ ನಿವಾಸಿಗಳು ಹಾಗೂ ಇದರಲ್ಲಿ ಆಸಕ್ತಿ ಇರುವ ಇತರೇ ವ್ಯಕ್ತಿಗಳನ್ನು ಸೂಕ್ತ ರೀತಿಯಲ್ಲಿ ಜಾಗೃತಗೊಳಿಸಿ ಅವರ ಸಹಕಾರ ಹಾಗೂ ಸಹಾಯವನ್ನು ಪಡೆಯಬೇಕು.

೨. ವಿಶ್ವಪರಂಪರೆ ತಾಣಕ್ಕೆ ಧಕ್ಕೆ ಅಥವಾ ಅಪಾಯ ತರುವ ವಿಷಯಗಳನ್ನು ಅಧ್ಯಯನ ಮಾಡಿ, ಈ ಅಪಾಯ ಕನಿಷ್ಠ ಮಟ್ಟದಲ್ಲಿರುವಂತೆ ನೋಡಿಕೊಳ್ಳಲು ಬೇಕಾದ ವೈಜ್ಞಾನಿಕ ಹಾಗೂ ತಾಂತ್ರಿಕ ಕ್ರಮವನ್ನು ತೆಗೆದುಕೊಳ್ಳುವುದು.

೩. ವಿಶ್ವಪರಂಪರೆ ತಾಣವನ್ನು ಸಂರಕ್ಷಿಸಲು ಬೇಕಾದ ಸೂಕ್ತ ಕಾನೂನು, ವೈಜ್ಞಾನಿಕ, ತಾಂತ್ರಿಕ ಹಾಗೂ ಹಣಕಾಸಿನ ವ್ಯವಸ್ಥೆ ಮಾಡುವುದು.

೪. ಸೂಕ್ತ ರಕ್ಷಣೆ ಹಾಗೂ ಸಂರಕ್ಷಣೆ ಕ್ರಮ ತೆಗೆದುಕೊಳ್ಳಲು ಬೇಕಾದ ವೃತ್ತಿ ತರಬೇತಿಯನ್ನು ಪ್ರಾದೇಶಿಕ ಹಾಗೂ ರಾಷ್ಟ್ರೀಯ ಮಟ್ಟದಲ್ಲಿ ಕೊಡುವುದಕ್ಕೆ ಸೂಕ್ತ ಕ್ರಮವನ್ನು ತೆಗೆದುಕೊಳ್ಳುವುದು.

೫. ತನ್ನ ರಾಷ್ಟ್ರದಲ್ಲಿರುವ ಜಾಗತಿಕ ಮೌಲ್ಯ ಪಡೆಯಬಹುದಾದ ಸ್ಥಳಗಳನ್ನು ಗುರುತಿಸಿ ಅವುಗಳನ್ನು ವಿಶ್ವಪರಂಪರೆಗೆ ಸೇರಿಸುವಂತೆ ವಿಶ್ವಪರಂಪರೆ ಸಮಿತಿಗೆ ಅಹ್ವಾಲನ್ನು ಮಂಡಿಸುವುದು.

೬. ವಿಶ್ವಪರಂಪರೆ ನಿಧಿಗೆ ತನ್ನ ಪಾಲಿನ ವಾರ್ಷಿಕ ಚಂದಾವನ್ನು ತಪ್ಪದೇ ಕೊಡುವುದು.

೭. ತನ್ನ ರಾಷ್ಟ್ರದಲ್ಲಿರುವ ಖಾಸಗಿ ಸಂಸ್ಥೆಗಳಿಗೆ ವಿಶ್ವಪರಂಪರೆ ನಿಧಿಗೆ ವಂತಿಗೆ ಕೊಡುವಂತೆ ಪ್ರೇರೆಪಿಸುವುದು.

೮. ತನ್ನ ದೇಶದ ಪ್ರಜೆಗಳಲ್ಲಿ ವಿಶ್ವಪರಂಪರೆ ಮೌಲ್ಯ ಹಾಗೂ ಪ್ರಾಮುಖ್ಯತೆ ಬಗ್ಗೆ ಜಾಗೃತಿ ಮೂಡಿಸುವ ವೈವಿಧ್ಯಮಯ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು.

೯. ವಿಶ್ವಪರಂಪರೆ ಸಮಿತಿಗೆ, ತನ್ನ ದೇಶದಲ್ಲಿರುವ ಎಲ್ಲ ಪಾರಂಪರಿಕ ಪಟ್ಟಿಯಲ್ಲಿ ಸೇರಿರುವ ತಾಣದ ಸಂರಕ್ಷಣೆ ಬಗ್ಗೆ ತೆಗೆದುಕೊಂಡ ಕ್ರಮ, ಅವುಗಳ ಸದ್ಯದ ಪರಿಸ್ಥಿತಿ ವಿಶ್ವಪರಂಪರೆ ಒಪ್ಪಂದದ ಅನುಪಾಲನೆ ಮುಂತಾದವುಗಳ ಬಗ್ಗೆ ನಿರ್ದಿಷ್ಟ ಅವಧಿಯಲ್ಲಿ ವರದಿಯನ್ನು ಕೊಡುವುದು.

೧೯೭೭ರಿಂದ ಪ್ರತಿವರ್ಷ ಏಪ್ರಿಲ್ ೧೮ ರಂದು ವಿಶ್ವಪರಂಪರೆ ದಿನಾಚರಣೆ ಆಚರಿಸಲಾಗುತ್ತಿದೆ. ಜಾಗತಿಕ ಪರಂಪರೆ ಸಮಾವೇಶವು ರಕ್ಷಿಸಿದ ಆಸ್ತಿಯನ್ನು ಗುರುತಿಸಲು ಒಂದು ಲಾಂಛನವನ್ನು ಬಳಸಲಾಯಿತು. ಸಮಾವೇಶವು ಜಾರಿಗೆ ತರಲು ಶ್ರಮಿಸುತ್ತಿರುವ "ಸಾರ್ವತ್ರಿಕ ಮೌಲ್ಯ"ಗಳನ್ನು ಇದು ಪ್ರತಿನಿಧಿಸುತ್ತದೆ. ಈ ಲಾಂಛನವನ್ನು ಬೆಲ್ಜಿಯಂನ ಕಲೆಗಾರ ಮೈಕಲ್ ಬಲಿಫ್ ವಿನ್ಯಾಸಗೊಳಿಸಿದ್ದಾನೆ. ಇದನ್ನು ೧೯೭೮ರಲ್ಲಿ ನಡೆದ ಜಾಗತಿಕ ಪರಂಪರೆಯ ಸಮಾವೇಶದಲ್ಲಿ ಅಳವಡಿಸಲಾಗಿದೆ.[೧೧] ೧೯೮೦ರಲ್ಲಿ ಸ್ವೀಡನ್ ದೇಶದ ರಾಜಧಾನಿ ಸ್ಟಾಕ್‌ಹೋಮ್ ಮತ್ತು ಫಿಲಿಪೈನ್ಸ್ ಅಧಿವೇಶನಗಳಲ್ಲಿ ಜೈವಿಕ ವೈವಿಧ್ಯತೆಯುಳ್ಳ ತಾಣಗಳನ್ನು [ಮೃಗಧಾಮಗಳು ಮತ್ತು ಪಕ್ಷಿಧಾಮಗಳು] ಸಂರಕ್ಷಿಸಲು ನಿರ್ಣಯಿಸಲಾಯಿತು.[೧೨] ಜೊತೆಗೆ ಧಾರ್ಮಿಕ ಪರಂಪರೆಯ ತಾಣಗಳನ್ನು ಸಹ ಸಂರಕ್ಷಿಸಲು ಗಮನಹರಿಸಲಾಯಿತು.

ವಿವಿಧ ದೇಶಗಳಲ್ಲಿ ಇಂತಹ ಪರಂಪರೆಯ ತಾಣಗಳು ಯಾವು ಎಂಬುದನ್ನು ಗುರುತಿಸುವುದು. ಮುಂದಿನ ಕೆಲಸವಾಗಿ ವಿದ್ವಾಂಸರು, ವಿಜ್ಞಾನಿಗಳು, ತಂತ್ರಜ್ಞರು ಹಾಗೂ ತಜ್ಞರನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಲಾಯಿತು. ಈ ಎಲ್ಲರೂ ಪ್ರತಿ ವರ್ಷ ಜೂನ್ ಅಥವಾ ಜುಲೈ ತಿಂಗಳಲ್ಲಿ ಪ್ಯಾರಿಸ್‌ನಲ್ಲಿ ಸಭೆ ಸೇರುತ್ತಾರೆ.[೧೩] ವಿಶ್ವಪರಂಪರೆಗೆ ಸೇರ ಬಯಸಿದ ಸ್ಮಾರಕಾದಿಗಳ ಕುರಿತು ವಿವಿಧ ದೇಶಗಳಿಂದ ಬಂದ ಅರ್ಜಿಗಳನ್ನು ಪರಿಶೀಲಿಸಿ ಆ ಸ್ಮಾರಕಾದಿಗಳು ಕುರಿತಂತೆ ಮಾಹಿತಿ ಪಡೆಯಲು ಸಂಬಂಧಪಟ್ಟ ದೇಶಗಳ ತಾಣಗಳಿಗೆ ಸಮಿತಿ ಭೇಟಿ ನೀಡಿ ನಂತರ ತೀರ್ಮಾನ ಕೈಗೊಳ್ಳುತ್ತದೆ ಈ ಹಿನ್ನಲೆಯಲ್ಲಿ ಯುನೆಸ್ಕೋದ ಕಾರ್ಯನೀತಿಗಳನ್ನು ಸಮಿತಿ ಅನುಸರಿಸುತ್ತದೆ.

ಯುನೆಸ್ಕೋದ ವಿಶ್ವಪರಂಪರೆಯನ್ನು ಉಳಿಸುವ ಕಾರ್ಯನೀತಿ ಮತ್ತು ಸಂದೇಶಗಳು ಈ ಕೆಳಗಿನಂತಿವೆ.

೧. ವಿಶ್ವಪರಂಪರೆಯ ಸಮಾವೇಶದ ಕಾರ್ಯನೀತಿಗೆ ಒಪ್ಪಿಗೆ ನೀಡಲು ದೇಶಗಳನ್ನು ಪ್ರೋತ್ಸಾಹಿಸುವುದು. ಆ ಮೂಲಕ ದೇಶಗಳಲ್ಲಿರುವ ನೈಸರ್ಗಿಕ ಮತ್ತು ಸಾಂಸ್ಕೃತಿಕ ಪರಂಪರೆಗಳ ರಕ್ಷಣೆಗೆ ಮುಂದಾಗುವಂತೆ ಮಾಡುವುದು.

೨. ದೇಶಗಳ ಸರ್ಕಾರಗಳು ತಮ್ಮ ರಾಷ್ಟ್ರ ವ್ಯಾಪ್ತಿಯಲ್ಲಿ ಬರುವ ಸ್ಥಳಗಳನ್ನು ವಿಶ್ವಪರಂಪರೆಯ ಪಟ್ಟಿಯಲ್ಲಿ ಸೇರ್ಪಡೆ ಮಾಡಲು ಸೂಚಿಸುವಂತೆ ಪ್ರೋತ್ಸಾಹಿಸುವುದು.

೩. ಇದಕ್ಕಾಗಿ ಸರ್ಕಾರಗಳು ವಿಶ್ವಪರಂಪರೆಯ ನೆಲೆಗಳನ್ನು ಸಂರಕ್ಷಿಸುವ ಯೋಜನೆಗಳನ್ನು ರೂಪಿಸುವುದು ಹಾಗೂ ಸಂರಕ್ಷಿಸಿದ ಸ್ಥಿತಿಗಳನ್ನು ಯುನೆಸ್ಕೋಗೆ ವರದಿ ಮಾಡುವುದು.

೪. ವಿಶ್ವಪರಂಪರೆಯ ಆಸ್ತಿಗಳನ್ನು ರಕ್ಷಿಸಲು ತಾಂತ್ರಿಕ ನೆರವು ಮತ್ತು ವೃತ್ತಿಪರ ತರಬೇತಿಯನ್ನು ನೀಡಿ ದೇಶದ ಸರ್ಕಾರಗಳಿಗೆ ಸಹಾಯ ಮಾಡುವುದು.

೫. ವಿಶ್ವಪರಂಪರೆಯ ನೆಲೆಗಳು ತೀವ್ರವಾದ ಹಾಗೂ ತಕ್ಷಣದ ಅಪಾಯಕ್ಕೆ ಒಳಗಾದರೆ ತುರ್ತು ನೆರವನ್ನು ನೀಡುವುದು.

೬. ವಿಶ್ವಪರಂಪರೆಯ ರಕ್ಷಣೆಯ ಬಗ್ಗೆ ಸಾರ್ವಜನಿಕರಲ್ಲಿ ಪ್ರಜ್ಞೆಯನ್ನು ಮೂಡಿಸಲು ಶ್ರಮಿಸುವ ಸರ್ಕಾರಗಳಿಗೆ ನೆರವು ನೀಡುವುದು.

೭. ದೇಶದಲ್ಲಿ ತಮ್ಮ ಸರ್ಕಾರಗಳು ಸಾಂಸ್ಕೃತಿಕ ಮತ್ತು ನೈಸರ್ಗಿಕ ಪರಂಪರೆಯನ್ನು ಉಳಿಸುವ ಕಾರ್ಯದಲ್ಲಿ ಸ್ಥಳೀಯ ಜನಸಮೂಹ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವುದು.

೮. ಜಗತ್ತಿನ ಸಾಂಸ್ಕೃತಿಕ ಮತ್ತು ನೈಸರ್ಗಿಕ ಪರಂಪರೆಯನ್ನು ಸಂರಕ್ಷಿಸಲು ಅಂತಾರಾಷ್ಟ್ರೀಯ ಸಹಕಾರ ದೊರೆಯುವಂತೆ ಮಾಡುವುದು.

ವಿಶ್ವಪರಂಪರೆಯು ಮೂರು ವರ್ಗದ[೧೪] ನೆಲೆಗಳನ್ನು ಗುರುತಿಸಿದೆ.

೧. ಸಾಂಸ್ಕೃತಿಕ ನೆಲೆಗಳು

೨. ನೈಸರ್ಗಿಕ ನೆಲೆಗಳು

೩. ಮಿಶ್ರ ನೆಲೆಗಳು

ಸಾಂಸ್ಕೃತಿಕ ನೆಲೆಗಳು ನೂರಾರು ಐತಿಹಾಸಿಕ ಕಟ್ಟಡಗಳು ಮತ್ತು ಪಟ್ಟಣಗಳು ಪ್ರಮುಖ ಪುರಾತತ್ವ ನೆಲೆಗಳು, ವಾಸ್ತು ಶಿಲ್ಪ ಮತ್ತು ಚಿತ್ರಕಲೆಗಳನ್ನು ಒಳಗೊಂಡಿವೆ. ನೈಸರ್ಗಿಕ

ಪರಂಪರೆಯ ನೆಲೆಗಳು ನಿಸರ್ಗಕ್ಕೆ ಸೀಮಿತವಾಗಿವೆ. ಇವುಗಳನ್ನು ಗುರುತಿಸುವಲ್ಲಿ ೪ ನಿಯಮಗಳನ್ನು ಪಾಲಿಸಲಾಗಿದೆ.

೧. ಜಗತ್ತಿನ ವಿಶಿಷ್ಟವಾದ ವೈವಿಧ್ಯಮಯವಾದ ಜೀವಜಾಲ.

೨. ಪರಿಸರ ಮತ್ತು ಜೈವಿಕ ವಿಕಾಸ ನಡೆಯುತ್ತಿರುವ ಅತ್ಯುತ್ತಮ ಉದಾಹರಣೆಗಳು.

೩. ಅಪರೂಪದ ಹಾಗೂ ವಿಶಿಷ್ಟವಾದ ನೈಸರ್ಗಿಕ ಕ್ರಿಯೆಗಳು ಅಥವಾ ಅನುಪಮವಾದ ಸೌಂದರ್ಯದಿಂದ ಕೂಡಿದ ನಿಸರ್ಗ.

೪. ಅಳಿವಿನ ಅಂಚಿನಲ್ಲಿರುವ ಅಪರೂಪದ ಹಾಗೂ ವಿಶಿಷ್ಟವಾದ ಪ್ರಾಣಿಗಳು, ಸಸ್ಯಗಳು ಹಾಗೂ ನೆಲೆಗಳು.

ಮಿಶ್ರಪರಂಪರೆಯ ನೆಲೆಗಳು ನೈಸರ್ಗಿಕ ಮತ್ತು ಸಾಂಸ್ಕೃತಿಕ ಪ್ರಾಮುಖ್ಯವನ್ನು ಒಳಗೊಂಡಿರುತ್ತವೆ. ವಿಶ್ವಪರಂಪರೆಯ ಪಟ್ಟಿಯಲ್ಲಿ ಸಾಂಸ್ಕೃತಿಕ ಮತ್ತು ನೈಸರ್ಗಿಕ ನೆಲೆಗಳನ್ನು ೩:೧ ಅನುಪಾತದಲ್ಲಿ ಸೇರ್ಪಡೆ ಮಾಡಲಾಗಿದೆ. ಪ್ರತಿ ವರ್ಷ ಡಿಸೆಂಬರ್ ತಿಂಗಳಲ್ಲಿ ಹೊಸ ನೆಲೆಗಳನ್ನು ಪಟ್ಟಿಗೆ ಸೇರಿಸಲಾಗುತ್ತದೆ.

ಯಾವುದೇ ಸ್ಥಳವನ್ನು ವಿಶ್ವಪರಂಪರೆ ಪಟ್ಟಿಯಲ್ಲಿ ಸೇರಿಸಲು ಕೆಲವೊಂದು ಮಾನದಂಡವಿದೆ. ಸ್ಥಳದ ಸರ್ವ ವ್ಯಾಪಿ ಉಪಯೋಗ ದೀರ್ಘಾವಧಿಯದಾಗಿರಬೇಕು. ಸಾಂಸ್ಕೃತಿಕ ಪರಂಪರೆಗೆ ಸೇರಿಸಲು ಅನುಸೂಚಿ ಒಂದರಲ್ಲಿ ಹೇಳಿರುವ ಷರತ್ತೆಂದರೆ ಹಲವು ಕಲಾತ್ಮಕ ಕಟ್ಟಡಗಳ ಸಮೂಹ ಅವುಗಳ ವಿನ್ಯಾಸದಿಂದ ಅಥವಾ ರಚನೆಯಿಂದ ಅವುಗಳು ಅಮೂಲ್ಯವಾಗಿರಬೇಕು. ಚಾರಿತ್ರಿಕ ದೃಷ್ಟಿಯಿಂದ, ಸೌಂದರ್ಯ ದೃಷ್ಟಿಯಿಂದ, ವಿಜ್ಞಾನ ದೃಷ್ಟಿಯಿಂದ ವಿಶ್ವ ಶ್ರೇಷ್ಠವಾಗಿರಬೇಕು. ಹೀಗೆ ಸಾಂಸ್ಕೃತಿಕ ಪಟ್ಟಿಗೆ ಸೇರಿರಬೇಕಾದರೆ ಈ ಕೆಳಕಂಡ ೬ ಷರತ್ತುಗಳು ಅನ್ವಯಿಸುತ್ತವೆ.[೧೫]

೧. ಮನುಷ್ಯನ ಸೃಜನಶೀಲ ಪ್ರತಿಭೆಯ ಮೇರು ಕೃತಿಗಳ ನಿರೂಪಣೆ.

೨. ಒಂದು ಕಾಲಘಟ್ಟದ ಮಾನವೀಯ ಮೌಲ್ಯ ಅಥವಾ ಸಾಂಸ್ಕೃತಿಕ ವಲಯದೊಳಗಿನ ಸ್ಮಾರಕ ಕಲೆ (ಶಾಶ್ವತಕಲೆ) ವಾಸ್ತುಶಿಲ್ಪ, ನಗರ ಯೋಜನೆ, ಭೂದೃಶ್ಯ ವಿನ್ಯಾಸದ ಅಭಿವೃದ್ಧಿಗಳ ಪ್ರದರ್ಶನ.

೩. ಹಿಂದಿನ ಸಮಕಾಲೀನ ಅಥವಾ ನಾಗರೀಕತೆಯ ಅಸಾಧಾರಣ ಅನನ್ಯ ಸಾಂಸ್ಕೃತಿಕ ಮತ್ತು ಪಾರಂಪರಿಕ ಸಾಕ್ಷ್ಯಗಳು.

೪. ಮಾನವ ಇತಿಹಾಸದ ಪ್ರಮುಖ ಹಂತದಲ್ಲಿ ಮಹೋನ್ನತ ಉದಾಹರಣೆಯಾಗಿರುವ ಕಟ್ಟಡ ನಿರ್ಮಾಣ ಅದ್ಭುತ ವಾಸ್ತುಶಿಲ್ಪಗಳು.

೫. ಮಾರ್ಪಾಡಿನ ಪರಿಣಾಮವಾಗಿ ಭಗ್ನತೆಗಾಗಿ ಒಳಗಾಗಬಹುದಾದ ಸಂಸ್ಕೃತಿಯನ್ನು ಬಿಂಬಿಸುವ ಪಾರಂಪರಿಕ ಮಾನವ ನೆಲೆಯ ಉತ್ಕೃಷ್ಟ ಉದಾಹರಣೆಗಳು.

೬. ನೇರವಾದ ಅಥವಾ ನಿರ್ದಿಷ್ಟವಾದ ಘಟನೆಗಳು, ಸಜೀವ ಸಂಪ್ರದಾಯಗಳು, ಆಲೋಚನೆಗಳು ಅಥವಾ ನಂಬಿಕೆಗಳು ಮತ್ತು ಸಾರ್ವತ್ರಿಕ ಮಹತ್ವವುಳ್ಳ ಉತ್ಕೃಷ್ಟವಾದ ಕಲಾತ್ಮಕ ಹಾಗೂ ಲಿಖಿತ ರಚನೆಗಳು.

ಪ್ರಾಕೃತಿಕ ಪರಂಪರೆಯನ್ನು ವಿಶ್ವಪರಂಪರೆ ಪಟ್ಟಿಗೆ[೧೬] ಸೇರಿಸಲು ಈ ಕೆಳಕಂಡ ೪ ಮಾನದಂಡಗಳನ್ನು ವಿಧಿಸಲಾಗುವುದು.

೧. ಭೂಮಿ ರೂಪುಗೊಂಡ ಚಾರಿತ್ರಿಕ ಸಂಗತಿಗಳು ಭೂಗರ್ಭದಲ್ಲಿ, ನೈಸರ್ಗಿಕ ಚಟುವಟಿಕೆ ಬೆಳವಣಿಗೆ ವಿಧಾನಗಳು.

೨. ಪ್ರಾಕೃತಿಕ ಹಾಗೂ ಜೈವಿಕ ಬೆಳವಣಿಗೆಯ ವಿಧಾನ, ಪಶು–ಪಕ್ಷಿಗಳಲ್ಲಿ, ಜೀವಸಂಕುಲಗಳಲ್ಲಿ, ಸಸ್ಯಗಳಲ್ಲಿ ಬೆಳೆದು ಬಂದ ದಾರಿ ವಿಶ್ವಮಾನ್ಯವಾಗಿರಬೇಕು.

೩. ಅದ್ಭುತವಾದ ಪ್ರಾಕೃತಿಕ ಸೌಂದರ್ಯ ಹಾಗೂ ಕಲಾತ್ಮಕ ಪ್ರಾಮುಖ್ಯತೆ ಹೊಂದಿರಬೇಕು.

೪. ವೈವಿಧ್ಯಮಯ ಜೈವಿಕ ವ್ಯವಸ್ಥೆಗೆ ಅಥವಾ ಸಸ್ಯಸಂಕುಲಗಳ ಅಸ್ತಿತ್ವಕ್ಕೆ ಧಕ್ಕೆ ಬರುವಂತಿದ್ದು ಅಂಥ ಅಪಾಯವನ್ನು ಹೋಗಲಾಡಿಸಲು ಅವುಗಳನ್ನು ಪರಂಪರೆ ಪಟ್ಟಿಗೆ ಸೇರಿಸಬೇಕು.

ಸಂಬಂಧಪಟ್ಟ ರಾಷ್ಟ್ರ ತಮ್ಮ ಉತ್ಕೃಷ್ಟ ಸಾಂಸ್ಕೃತಿಕ ಅಥವಾ ಪ್ರಾಕೃತಿಕ ಪರಂಪರೆಯನ್ನು ವಿಶ್ವಪರಂಪರೆ ಪಟ್ಟಿಗೆ ಸೇರಿಸಲು ಅರ್ಜಿ ಹಾಕಬೇಕು. ಅರ್ಜಿಯ ಜೊತೆಗೆ ಯಾವ ರೀತಿಯಲ್ಲಿ ಆ ನಿರ್ದಿಷ್ಟ ಸ್ಥಳ ವಿಶ್ವಮಾನ್ಯವಾಗಿದೆ ಎನ್ನುವುದನ್ನು ಹೇಳಬೇಕು. ಸದ್ಯ ಅದು ಇರುವ ಸ್ಥಿತಿ, ಅದರ ಅಸ್ತಿತ್ವಕ್ಕೆ ಬಂದ ಆಪತ್ತನ್ನು ವಿವರಿಸಬೇಕು. ಈ ಆಸ್ತಿಯು ಮಹತ್ವದ್ದಾಗಿದ್ದು, ಅದನ್ನು ವಿಶ್ವಪರಂಪರೆಗೆ ಸೇರಿಸುವ ಅವಶ್ಯಕತೆಯ ಕಾರಣಗಳು ಹಾಗೂ ಅದರಿಂದಾಗುವ ಅನುಕೂಲ ಅಥವಾ ಸೇರಿಸದಿದ್ದರೆ ಉಂಟಾಗುವ ಅಪಾಯವನ್ನು ವಿವರಿಸಬೇಕು.[೧೭] ಈ ಅರ್ಜಿಯನ್ನು ಹಾಕುವಾಗ ಈ ಕೆಳಕಂಡ ಅಂಶಗಳನ್ನು ತಪ್ಪದೇ ಸೇರಿಸಬೇಕು.

೧. ನಿರ್ದಿಷ್ಟ ಆಸ್ತಿಯನ್ನು ಅದರ ನಾಲ್ಕೂ ಕಡೆಯ ಗಡಿಯೊಂದಿಗೆ ಗುರುತಿಸಬೇಕು

೨. ನಿರ್ದಿಷ್ಟ ಆಸ್ತಿಯ ವಿವರವಾದ ಮಾಹಿತಿ

೩. ವಿಶ್ವಪರಂಪರೆ ಪಟ್ಟಿಗೆ ಸೇರಿರುವ ಅವಶ್ಯಕತೆ

೪. ವರ್ತಮಾನದಲ್ಲಿರುವ ಆಸ್ತಿಯ ಪರಿಸ್ಥಿತಿ

೫. ವಿಶ್ವಪರಂಪರೆಗೆ ಸೇರಿದ ನಂತರ ಹೇಗೆ ಈ ಆಸ್ತಿಯನ್ನು ಸಂರಕ್ಷಿಸಿ ನಿರ್ವಹಿಸಲಾಗುತ್ತದೆ ಎಂಬುದನ್ನು ಹೇಳಬೇಕು

೬. ನಿರ್ವಹಿಸುವ ವಿಧಾನ

೭. ಆಸ್ತಿಯ ಒಡೆತನಕ್ಕೆ ಸಂಬಂಧ ಪಟ್ಟ ಕಾಗದ ಪತ್ರ ಹಾಗೂ ದಸ್ತಾವೇಜುಗಳು

೮. ಹೆಚ್ಚಿನ ಮಾಹಿತಿ ಬೇಕಾದಲ್ಲಿ ಸಂಪರ್ಕಿಸಬೇಕಾದ ವ್ಯಕ್ತಿ ಹಾಗೂ ಅವರ ವಿವರ

೯. ಈ ಎಲ್ಲ ಕಾಗದ ಪತ್ರಗಳನ್ನು ಸರ್ಕಾರದ ಹಿರಿಯ ಅಧಿಕಾರಿ ಮೊಹರಿನೊಂದಿಗೆ ಸಹಿ ಮಾಡಿರಬೇಕು

ಮಂಡಿಸಿದ ಅರ್ಜಿಯ ಸಾಧಕ ಭಾದಕಗಳ ಕುರಿತು ವಿಶ್ವಪರಂಪರೆ ಸಮಿತಿಯು ಸಭೆ ಸೇರಿ ನಿರ್ದಿಷ್ಟ ತಾಣವನ್ನು ವಿಶ್ವಪರಂಪರೆ ಪಟ್ಟಿಗೆ ಸೇರಿಸುವ ಬಗ್ಗೆ ಸಮಾಲೋಚನೆ ಮಾಡುತ್ತದೆ. ಹಾಲಿ ಇರುವ ಪರಿಸ್ಥಿತಿ ಅದರ ಪ್ರಾಮುಖ್ಯತೆ, ವಿಶ್ವಪರಂಪರೆ ಪಟ್ಟಿಗೆ ಸೇರಿಸುವ ಅವಶ್ಯಕತೆ ಮುಂತಾದ ವಿಷಯಗಳ ಬಗ್ಗೆ ಸುದೀರ್ಘವಾಗಿ ಪರಾಮರ್ಶಿಸಲಾಗುತ್ತದೆ. ಅಮೂಲ್ಯ ಸಂಪತ್ತು ಅಳಿವಿನ ಅಂಚಿನಲ್ಲಿದೆ ಎಂದು ಮನವರಿಕೆ ಆದರೆ ಆಗ ಅದನ್ನು ವಿಶ್ವಪರಂಪರೆ ಪಟ್ಟಿಗೆ ಸೇರಿಸುವ ನಿರ್ಧಾರ ಮಾಡುತ್ತದೆ.

ಸಾಂಸ್ಕೃತಿಕ ಮಹತ್ವವುಳ್ಳ ಯಾವುದೇ ನೆಲೆಯನ್ನು ವಿಶ್ವಪರಂಪರೆಗೆ ಸೇರಿಸುವುದರಿಂದ ಅಲ್ಲಿನ ಪ್ರವಾಸೋದ್ಯಮವು ಸಹಜವಾಗಿ ಪ್ರೋತ್ಸಾಹವನ್ನು ಪಡೆಯುತ್ತದೆ. ಇಂಥ ಪರಿಣಾಮಗಳಿಂದ ಸ್ಥಳೀಯ ಅರ್ಥವ್ಯವಸ್ಥೆ ಉತ್ತಮಗೊಳ್ಳುತ್ತದೆ. ಅಲ್ಲಿನ ಜನರಿಗೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಉದ್ಯೋಗಗಳು ದೊರೆಯುತ್ತವೆ. ಅಭಿವೃದ್ಧಿ ಶೀಲ ರಾಷ್ಟ್ರಗಳ ನೆಲೆಗಳನ್ನು ಉಳಿಸುವುದು ಮತ್ತು ಕಾಪಾಡುವುದಕ್ಕಾಗಿ ಯುನೆಸ್ಕೋ ಹಣವನ್ನು ನೀಡುತ್ತಿದೆ. ಅತಿಯಾದ ಮಾಲಿನ್ಯಕ್ಕೆ ಗುರಿಯಾದ ನೆಲೆಗಳು, ನೈಸರ್ಗಿಕ ವಿಕೋಪಕ್ಕೆ ಸಿಲುಕಿದ ನೆಲೆಗಳನ್ನು ಅಪಾಯಕ್ಕೆ ಒಳಗಾದ ನೆಲೆಗಳನ್ನು ಸಹ ವಿಶ್ವಪರಂಪರೆಯ ಪಟ್ಟಿಯಲ್ಲಿ ಸೇರಿಸಲಾಗುತ್ತದೆ. ಇವನ್ನು ಉತ್ತಮ ಪಡಿಸಿ, ವಿಶ್ವಪರಂಪರೆಯ ಪಟ್ಟಿಗೆ ಪುನಃ ಸೇರಿಸಬಹುದು.

**ವಿಶ್ವ :**

೨೦ನೆಯ ಶತಮಾನದಲ್ಲಿ ಉಂಟಾದ ಜನಸಂಖ್ಯಾ ಸ್ಫೋಟ, ಅನಿಯಂತ್ರಿತ ನಗರ ಬೆಳವಣಿಗೆ ಹೆದ್ದಾರಿಗಳ ನಿರ್ಮಾಣ, ಜಾಗತಿಕವಾಗಿ ಸಂಭವಿಸಿದ ಎರಡು ಮಹಾಯುದ್ಧಗಳುಂಟುಮಾಡಿದ ಪರಿಣಾಮಗಳು ಮಾನವನು ಐತಿಹಾಸಿಕವಾಗಿ ನಿರ್ಮಿಸಿದ ಅಭೂತಪೂರ್ವ ಸ್ಮಾರಕಗಳು ನೆಲಕಚ್ಚಲು ಹೆಚ್ಚಿನ ಕಾರಣವಾದ ಅಂಶಗಳಾದವೆಂದು ಅಭಿಪ್ರಾಯಿಸಬಹುದು. ಬಾಂಬ್ ದಾಳಿ, ಜಾಗತಿಕ ತಾಪಮಾನ ಮೊದಲಾದವುಗಳಿಂದಾಗಿ ಭೂಸಂಪತ್ತಿನ ಅಪವ್ಯಯವಾಗತೊಡಗಿತು. ಅಲ್ಲದೇ ಅದೇ ಸಂದರ್ಭದಲ್ಲಿ ತಿಳುವಳಿಕೆಯುಳ್ಳ ಜನಸಮುದಾಯವು ನಮ್ಮ ಪ್ರಾಚೀನ ಗುಡಿಗೋಪುರಗಳು, ಶಿಲ್ಪಕಲಾ ಕೃತಿಗಳು ಹಾಗೂ ನಮ್ಮ ಭವ್ಯ ಪರಂಪರೆಗಳನ್ನು ಪ್ರತಿಂಬಿಸುವ ಆಕರಗಳು ಹಾಗೂ ಸಂಗತಿಗಳು ನಮ್ಮ ಪರಂಪರೆಯ ಅವಿನಾಭಾವ ಭಾಗವೆಂದುಕೊಂಡು ಸಂರಕ್ಷಿಸುವ ಆಲೋಚನೆಯಲ್ಲಿ ತೊಡಗಿದರು. ಈ ಹಿನ್ನೆಲೆಯಲ್ಲಿ ೧೯೭೨ರಲ್ಲಿ ಯುನೆಸ್ಕೋ ಅಂತಾರಾಷ್ಟ್ರೀಯ ನೆರವು ಕೋರಿ ಜಾಗತಿಕ ಮಟ್ಟದಲ್ಲಿ ಚಾರಿತ್ರಿಕ, ನೈಸರ್ಗಿಕ ಸ್ಮಾರಕಗಳನ್ನು ರಕ್ಷಿಸಲು ಪ್ರಯತ್ನ ಮಾಡಿತು. ಎಲ್ಲ ದೇಶಗಳೂ ಯುನೆಸ್ಕೋ ಉದ್ದೇಶವನ್ನು ಮನಗಂಡು ಸಹಕರಿಸಲು ಮುಂದಾದವು. ಇದರ ಫಲವಾಗಿ ಜಗತ್ತಿನಾದ್ಯಂತ ಸ್ಮಾರಕಗಳನ್ನು ರಕ್ಷಿಸಲ್ಪಟ್ಟು ಮನುಕುಲದ ಆಸ್ತಿಯೆಂದು ಘೋಷಿಸಲಾಗಿದೆ.[೧೮]

ಯಾವ ದೇಶ ಬೇಕಾದರೂ ಅದು ಮಾನವ ನಿರ್ಮಿತವಿರಲಿ, ನಿಸರ್ಗದತ್ತವಾದುದಿರಲಿ ರಕ್ಷಣೆಗೆ ಯೋಗ್ಯ ಎಂದು ಸಕಾರಣವಾಗಿ ಪ್ರತಿನಿಧಿಸಬಹುದು. ಮಾನವ ಕಲಾ ನೈಪುಣ್ಯ ಪರಮೋಚ್ಚ ಮಾದರಿ ಆಗಿರಬೇಕು. ಸ್ಮಾರಕಗಳ ಮೌಲ್ಯ ಮಾಪನ ಮಾಡಲು ಎರಡು ಸರಕಾರೇತರ ಸಂಸ್ಥೆಗಳಿವೆ.[೧೯]

1) International Union for Conservative of Nature and Natural Resources.
2) International Council of Monuments and Sites.

ಈ ಸಂಸ್ಥೆಗಳು ನೀಡುವ ಶಿಫಾರಿಸ್ಸಿನ ಮೇಲೆ ಪ್ಯಾರಿಸಿನಲ್ಲಿರುವ ಯುನೆಸ್ಕೋ ವಿಶ್ವಪಾರಂಪರಿಕ ತಾಣಗಳ ಆಯ್ಕೆ ಸಮಿತಿ ತೀರ್ಮಾನ ತೆಗೆದುಕೊಳ್ಳುತ್ತದೆ. ವಿಶ್ವದ ೧೬೭ ದೇಶಗಳಲ್ಲಿರುವ ಸುಮಾರು ೧೧೨೧ ವಿಶ್ವಪರಂಪರೆಯ ತಾಣಗಳನ್ನು ಯುನೆಸ್ಕೋ ಗುರುತಿಸಿದೆ.[೨೦]

| | | |
|---|---|---|
| ಸಾಂಸ್ಕೃತಿಕ ನೆಲೆಗಳು | : | ೮೬೯ |
| ನೈಸರ್ಗಿಕ ನೆಲೆಗಳು | : | ೨೧೩ |
| ಮಿಶ್ರ ನೆಲೆಗಳು | : | ೩೯ |
| ಒಟ್ಟು ನೆಲೆಗಳು | : | ೧೧೨೧[೨೧] |

ಪ್ರಸ್ತುತ ವಿಶ್ವದಾದ್ಯಂತ ಸುಮಾರು ೧೧೨೧ ತಾಣಗಳನ್ನು ವಿಶ್ವಪರಂಪರೆಯ ಪಟ್ಟಿಗೆ ಸೇರಿಸಿಕೊಳ್ಳಲಾಗಿದೆ. ಇಟಲಿ ಜಗತ್ತನಲ್ಲಿಯೇ ಅತ್ಯಾಧಿಕ ೫೪ ತಾಣಗಳನ್ನು ವಿಶ್ವಪರಂಪರೆ ಪಟ್ಟಿಯಲ್ಲಿ ಸೇರಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ.[೨೨] ವಿಶ್ವದಾದ್ಯಂತ ೫೪ ತಾಣಗಳು ಅಪಾಯದ ಅಂಚಿನಲ್ಲಿವೆ ಎಂದು ಕಂಡುಬಂದಿದೆ.[೨೩] ಈ ತಾಣಗಳ ಪಟ್ಟಿಯಲ್ಲಿ ಆಸ್ಟ್ರೀಯಾದ ಐತಿಹಾಸಿಕ ನಗರ ವಿಯೆನ್ನಾ, ಈಜಿಪ್ಟಿನ ಅಬುಮೆನಾ, ಇರಾಕಿನ ಹಾತ್ರ ಹಾಗೂ ಆಶೂರ್, ಆಫಘಾನಿಸ್ತಾನ ದೇಶಗಳಲ್ಲಿರುವ ಕೆಲವು ವಿಶ್ವಪಾರಂಪರಿಕ ತಾಣಗಳು ಅಪಾಯದಂಚಿನಲ್ಲಿವೆ ಎಂಬುದನ್ನು ಸಂಬಂಧಿಸಿದ ಸಂಸ್ಥೆಯು ದೃಢಪಡಿಸಿದೆ. (ವಿಶ್ವಪರಂಪರೆಯ ನೆಲೆಗಳಿಗೆ ಸಂಬಂಧಿಸಿದಂತೆ ಅನುಬಂಧದಲ್ಲಿ ಪಟ್ಟಿ ನೀಡಲಾಗಿದೆ)

**ಭಾರತ :**

ವಿಶ್ವಪರಂಪರೆಯ ಪಟ್ಟಿಯಲ್ಲಿ ಸೇರಿದ ಒಟ್ಟು ೧೧೨೧ ಸ್ಮಾರಕಗಳಲ್ಲಿ ಭಾರತದ ೩೭ ಸ್ಮಾರಕಗಳು ಸೇರಿವೆ.[೨೪] ಭಾರತದಲ್ಲಿ ವಿವಿಧ ಧರ್ಮಗಳ ಸ್ಮಾರಕಗಳು ಭಾವೈಕ್ಯದ ಪ್ರತೀಕಗಳಾಗಿ ಭಾರತದ ರಾಷ್ಟ್ರೀಯ ಗುಣ ಮೌಲ್ಯಗಳಾಗಿ ನಿರ್ಮಾಣಗೊಂಡಿವೆ. ಬೌದ್ಧ, ಜೈನ, ಹಿಂದೂ, ಇಸ್ಲಾಂ, ಕ್ರೈಸ್ತ, ಸಿಖ್ ಧರ್ಮಗಳ ಅನುಕ್ರಮ ಸ್ಮಾರಕಗಳಾಗಿ ಸ್ತೂಪಗಳು, ವಿಹಾರಗಳು, ದೇವಾಲಯಗಳು, ಮಸೀದಿ–ಗುಂಬಜ್‌ಗಳು, ಚರ್ಚುಗಳು, ಗುರುದ್ವಾರಗಳು, ಅರಮನೆಗಳು, ಕೋಟೆ–ಕೊತ್ತಲಗಳು ಭಾರತ ಜನಮಾನಸದ ಸಿರಿಯನ್ನು ಹೊತ್ತಿವೆ. ಪ್ರತಿವರ್ಷ ಏಪ್ರಿಲ್ ೧೮ನ್ನು ವಿಶ್ವಪರಂಪರೆಯ ದಿನ ಎಂದು ಸಂಯುಕ್ತ ರಾಷ್ಟ್ರದ ಎಲ್ಲಾ ಸದಸ್ಯ ರಾಷ್ಟ್ರಗಳು ಆಚರಿಸುತ್ತವೆ. ಭಾರತದಲ್ಲಿ ಪ್ರತಿ ವರ್ಷದ ನವೆಂಬರ್ ೧೯ ರಿಂದ ೨೫ ರವರೆಗಿನ ಕಾಲಾವಧಿಯನ್ನು 'ವಿಶ್ವಪರಂಪರೆಯ ಸಪ್ತಾಹ' ವೆಂದು ವಿಶೇಷವಾಗಿ ಆಚರಿಸಲ್ಪಡುತ್ತದೆ. ಹಾಗೆಯೇ ನಮ್ಮ ಎಲ್ಲಾ ಪ್ರಾಚೀನ ಸ್ಮಾರಕಗಳನ್ನು ಅಂದರೆ ಪ್ರಾಚೀನ ದೇಗುಲ–ಮೂರ್ತಿ, ನಮ್ಮ ಕಲೆಯ ಕೀರ್ತಿ, 'ಶಿಲಾಶಾಸನ' 'ಹಳೆಯ ಗ್ರಂಥಗಳ ರಕ್ಷಣೆ' 'ನಮ್ಮ ಪ್ರಾಚೀನ ಪರಂಪರೆಯ ಘೋಷಣೆ' ಮುಂತಾದ ಘೋಷಣೆಗಳೊಂದಿಗೆ ಸಂರಕ್ಷಿಸುವುದು ನಮ್ಮ ಕರ್ತವ್ಯ.

ವಿಶ್ವದಾದ್ಯಂತ ೫೩ ತಾಣಗಳು ಅಪಾಯದ ಅಂಚಿನಲ್ಲಿವೆ ಎಂದು ಕಂಡುಬಂದಿದೆ. ಈ ತಾಣಗಳ ಪಟ್ಟಿಯಲ್ಲಿ ಈ ಹಿಂದೆ ಭಾರತದ ಕೆಲವು ತಾಣಗಳು ಅಪಾಯದಂಚಿನಲ್ಲಿದ್ದವು. ಆದರೆ ಇತ್ತೀಚಿಗೆ ಭಾರತದ ಯಾವುದೇ ತಾಣಗಳು ಅಪಾಯದಂಚಿನಲಿಲ್ಲ ಎಂದು

ಘೋಷಿಸಲಾಗಿದೆ. ಯುನೆಸ್ಕೋ ವಿಶ್ವಪರಂಪರೆಯ ಪಟ್ಟಿಗೆ ಸೇರಿಸಿರುವ ಭಾರತದ ವಿಶ್ವಪರಂಪರೆಯ ತಾಣಗಳ ವಿವರಣೆಯನ್ನು ಕೊಡಲಾಗಿದೆ. ೧೯೮೩ರಿಂದ ಈ ಪಟ್ಟಿಗೆ ತಾಣಗಳ ಸೇರಿಸುವಿಕೆಯ ಕಾರ್ಯ ಆರಂಭವಾಗಿದೆ.

೧) ಆಗ್ರಾಕೋಟೆ (೧೯೮೩)

೨) ಅಜಂತಾ ಗುಹಾಲಯಗಳು (೧೯೮೩)

೩) ಎಲ್ಲೋರಾ ಗುಹಾಲಯಗಳು (೧೯೮೩)

೪) ತಾಜ್‌ಮಹಲ್ (೧೯೮೩)

೫) ಮಹಾಬಲಿಪುರಂನ ಪ್ರಾಚೀನಾವಶೇಷಗಳು (೧೯೮೪)

೬) ಸೂರ್ಯ ದೇವಾಲಯ, ಕೊನಾರ್ಕ್ (೧೯೮೪)

೭) ಕಾಜಿರಂಗ ರಾಷ್ಟ್ರೀಯ ಉದ್ಯಾನ (೧೯೮೫)

೮) ಕಿಯೋಲದೇವ ರಾಷ್ಟ್ರೀಯ ಉದ್ಯಾನವನ (೧೯೮೫)

೯) ಮಾನಸ ವನ್ಯಜೀವಿಧಾಮ (೧೯೮೫)

೧೦) ಗೋವಾದ ಚರ್ಚುಗಳು (೧೯೮೬)

೧೧) ಫತೇಪುರ್ ಸಿಕ್ರಿ (೧೯೮೬)

೧೨) ಹಂಪಿಯ ಸ್ಮಾರಕಗಳು (೧೯೮೬)

೧೩) ಖಜುರಾಹೋ ದೇವಾಲಯಗಳ ಸಂಕೀರ್ಣ (೧೯೮೬)

೧೪) ಎಲಿಫೆಂಟಾ ಗುಹಾಲಯಗಳು (೧೯೮೭)

೧೫) ಚೋಳ ದೇವಾಲಯಗಳು[೨೫] (೧೯೮೭)

೧೬) ಪಟ್ಟದಕಲ್ಲು ದೇವಾಲಯಗಳು (೧೯೮೭)

೧೭) ಸುಂದರ್‌ಬನ್ ರಾಷ್ಟ್ರೀಯ ಉದ್ಯಾನ (೧೯೮೭)

೧೮) ನಂದಾದೇವಿ ಮತ್ತು ಪುಷ್ಪಕಣಿವೆಯ ರಾಷ್ಟ್ರೀಯ ಉದ್ಯಾನಗಳು (೧೯೮೮)

೧೯) ಸಾಂಚಿಯ ಬೌದ್ಧ ಸ್ಮಾರಕಗಳು (೧೯೮೯)

೨೦) ಹುಯಾಯೂನ್ ಗೋರಿ (೧೯೯೩)

೨೧) ಕುತುಬ್ ಮಿನಾರ್ ಮತ್ತು ಸುತ್ತಲಿನ ಸ್ಮಾರಕಗಳು (೧೯೯೩)

೨೨) ಭಾರತದ ಪರ್ವತ ರೈಲ್ವೆಗಳು[೨೬] (೧೯೯೯)

೨೩) ಮಹಾಬೋಧಿ ದೇಗುಲ ಸಂಕೀರ್ಣ (೨೦೦೨)

೨೪) ಭೀಮ್‌ಬೆಟ್ಕ ಬಂಡೆ ಆಸರೆಗಳು (೨೦೦೩)

೨೫) ಛತ್ರಪತಿ ಶಿವಾಜಿ ಟರ್ಮಿನಸ್ ನಿಲ್ದಾಣ, ಮುಂಬೈ (೨೦೦೪)

೨೬) ಚಂಪಾನೇರ್–ಪಾವಾಗಡ್ ಸ್ಮಾರಕಗಳು (೨೦೦೪)

೨೭) ಕೆಂಪು ಕೋಟೆ (೨೦೦೭)

೨೮) ಜಂತರ್ ಮಂತರ್ (೨೦೧೦)

೨೯) ಪಶ್ಚಿಮ ಘಟ್ಟಗಳು (೨೦೧೨)

೩೦) ರಾಜಸ್ಥಾನದ ಕೋಟೆಗಳು (೨೦೧೩)

೩೧) ಹಿಮಾಲಯನ್ ನ್ಯಾಷನಲ್ ಪಾರ್ಕ್ (೨೦೧೪)

೩೨) ರಾಣಿ ಕಿ–ವಾವ್ (೨೦೧೪)

೩೩) ನಳಂದ ಮಹಾ ವಿಹಾರ ಪುರಾತತ್ವ ತಾಣ (೨೦೧೬)

೩೪) ಕಾಂಚನಾಜುಂಗ ರಾಷ್ಟ್ರೀಯ ಉದ್ಯಾನ (೨೦೧೬)

೩೫) ಐತಿಹಾಸಿಕ ನಗರ ಅಹ್ಮದಾಬಾದ್ (೨೦೧೭)

೩೬) ವಿಕ್ಟೋರಿಯನ್ ಗೋಥಿಕ್ ಮತ್ತು ಮುಂಬೈನ ಆರ್ಟ್ ಡೆಕೊ ಎನ್ಸೆಂಬಲ್ಸ್ (೨೦೧೮)

೩೭) ಜೈಪುರ ನಗರ, ರಾಜಸ್ಥಾನ (೨೦೧೯)

೧. **ಆಗ್ರಾಕೋಟೆ :** ವಿಶ್ವ ಪಾರಂಪರಿಕ ಪಟ್ಟಿಗೆ ಸೇರಿದ ೧೯೮೩ ರಲ್ಲಿ ಭಾರತದ ಮೊದಲ ಸಾಂಸ್ಕೃತಿಕ ತಾಣ ಆಗ್ರಾಕೋಟೆ. ಇದು ಉತ್ತರ ಪ್ರದೇಶದ ಯಮುನಾ ನದಿಯ ಬಲದಂಡೆಯ ಮೇಲಿದೆ.[೨೭] ಈ ಕೋಟೆಯನ್ನು ಕ್ರಿ.ಶ. ೧೫೬೫ರಲ್ಲಿ ಮೊಘಲ್ ವಂಶದ ದೊರೆ ಅಕ್ಬರನು ನಿರ್ಮಿಸಿದ್ದಾನೆ. ತಾಜ್‌ಮಹಲ್ ಸ್ಮಾರಕಕ್ಕೆ ಸ್ವಲ್ಪ ದೂರದಲ್ಲಿ ಈ ಕೋಟೆ ಇದೆ. ಇದನ್ನು ಕೆಂಪು ಮರಳನ್ನು ಬಳಸಿ ನಿರ್ಮಿಸಲಾಗಿದೆ. ಬಲವಾದ ಕೋಟೆ ೨.೫ ಕಿ.ಮೀ ಉದ್ದವಿದ್ದು ಮೊಘಲ್ ಚಕ್ರವರ್ತಿಗಳ ಅರಮನೆಗಳನ್ನು ಸುತ್ತುವರಿದಿದೆ. ಇಲ್ಲಿನ ಅರಮನೆಗಳು ಕನಸಿನ ಲೋಕದ ಕಟ್ಟಡಗಳಂತಿವೆ. ಇಲ್ಲಿರುವ ಜಹಾಂಗೀರ್ ಮಹಲ್ ಮತ್ತು ಬಾಸ್ ಮಹಲ್‌ಗಳನ್ನು ಷಾಹಜಾನ್ ಕಟ್ಟಿಸಿದ. ಇದರ ಒಳಗಿರುವ ದೀವಾನ್–ಇ–ಬಾಸ್ ಮತ್ತು ಮಸೀದಿಗಳು ಇತರೆ ಸುಂದರವಾದ ನಿರ್ಮಾಣಗಳಾಗಿವೆ.

೨. **ಅಜಂತಾ ಗುಹಾಲಯಗಳು** : ಮಹಾರಾಷ್ಟ್ರ ರಾಜ್ಯದ ಔರಂಗಾಬಾದ್ ಜಿಲ್ಲೆಯ ಅಜಂತಾ ಗುಹಾಲಯಗಳನ್ನು ಯುನೆಸ್ಕೋ ೧೯೮೩ ರಲ್ಲಿ ಸಾಂಸ್ಕೃತಿಕ ತಾಣವೆಂದು ಘೋಷಿಸಿದೆ. ಬೌದ್ಧರ ಮೊದಲ ಗುಹಾಲಯಗಳು ಅಜಂತಾದಲ್ಲಿ ನಿರ್ಮಾಣವಾದವು. ಇಲ್ಲಿ ೨೯

ಗುಹಾಲಯಗಳಿವೆ. ಇವು ಕ್ರಿ.ಪೂ. ೨೦೦ ರಿಂದ ಕ್ರಿ.ಶ. ೬೫೦ ರ ಕಾಲಾವಧಿಯಲ್ಲಿ ನಿರ್ಮಾಣವಾಗಿವೆ. ಅಜಂತಾ ಬೆಟ್ಟದಲ್ಲಿ ೫ ಚೈತ್ಯಾಲಯಗಳು, ೨೪ ವಿಹಾರಗಳು ಇವೆ. ಅದರ ವೈಭವದ ದಿನಗಳಲ್ಲಿ ೨೦೦ ಬೌದ್ಧ ಭಿಕ್ಷುಗಳು ವಾಸವಾಗಿದ್ದರು ಈ ಗುಹಾಲಯಗಳನ್ನು ಉಬ್ಬು ಶಿಲ್ಪಗಳು ಮತ್ತು ಚಿತ್ರಗಳಿಂದ ಅಲಂಕೃತಗೊಳಿಸಲಾಗಿದೆ. ೧೮೧೯ ರಲ್ಲಿ ಹಿಂದಿನ ಮದ್ರಾಸ್ ಪ್ರಾಂತ್ಯದ ಬ್ರಿಟಿಷ್ ಅಧಿಕಾರಿ ಜಾನ್‌ಸ್ಮಿತ್[೨೮] ಮೊದಲಿಗೆ ಶೋಧಿಸಿದರು.

೩. **ಎಲ್ಲೋರ ಗುಹಾಲಯಗಳು** : ಮಹಾರಾಷ್ಟ್ರ ರಾಜ್ಯದ ಔರಂಗಾಬಾದ್ ಜಿಲ್ಲೆಯ ಎಲ್ಲೋರ ಗುಹಾಲಯಗಳನ್ನು ಯುನೆಸ್ಕೋ ೧೯೮೩ ರಲ್ಲಿ ಸಾಂಸ್ಕೃತಿಕ ತಾಣವೆಂದು ಘೋಷಿಸಿದೆ. ಎಲ್ಲೋರದಲ್ಲಿ ಹಿಂದೂ, ಬೌದ್ಧ ಮತ್ತು ಜೈನರಿಗೆ ಸಂಬಂಧಿಸಿದ ೩೪ ಗುಹಾಲಯಗಳಿವೆ. ಇವುಗಳು ಕ್ರಿ.ಶ ೫೦೦ ರಿಂದ ಕ್ರಿ.ಶ. ೧೦೦೦ರ ಕಾಲಾವಧಿಯಲ್ಲಿ ನಿರ್ಮಾಣಗೊಂಡವುಗಳಾಗಿವೆ.[೨೯] ಬೆಟ್ಟದ ಬದಿಯಲ್ಲಿ ೨ ಕಿ.ಮೀ ಹಬ್ಬಿವೆ ೧ ರಿಂದ ೧೨ನೇ ಗುಹೆಗಳು ಬೌದ್ಧ ಸಂಸ್ಕೃತಿ ಹಾಗೂ ಅದರ ಬಗ್ಗೆ ಮಾಹಿತಿ ಕೆತ್ತನೆಯನ್ನು ಬಳಗೊಂಡಿದೆ. ೧೩ ರಿಂದ ೨೯ನೇ ಗುಹೆಗಳು ಹಿಂದೂ ಸಂಸ್ಕೃತಿಗೆ ಸಂಬಂಧಿಸಿದ ಮಾಹಿತಿ ಹಾಗೂ ಶಿಲ್ಪಗಳನ್ನು ಒಳಗೊಂಡಿವೆ. ೩೦ ರಿಂದ ೩೪ನೇ ಗುಹಾಲಯಗಳು ಜೈನ ಧರ್ಮಕ್ಕೆ ಸಂಬಂಧಿಸಿದ್ದು ಇವುಗಳನ್ನು ಕ್ರಿ.ಶ. ೯ ಮತ್ತು ೧೦ನೇ ಶತಮಾನದಲ್ಲಿ ನಿರ್ಮಿಸಲಾಗಿದೆ.

೪. **ತಾಜ್‌ಮಹಲ್** : ಉತ್ತರ ಪ್ರದೇಶ ರಾಜ್ಯದ ಆಗ್ರಾ ಜಿಲ್ಲೆಯ ತಾಜ್‌ಮಹಲ್‌ನ್ನು ಯುನೆಸ್ಕೋ ೧೯೮೩ರಲ್ಲಿ ಸಾಂಸ್ಕೃತಿಕ ತಾಣವೆಂದು ಘೋಷಿಸಿದೆ. ಜಗತ್ತಿನ ಏಳು ಅದ್ಭುತಗಳಲ್ಲಿ ಇದು ಒಂದಾಗಿದ್ದು ಯಮುನಾ ನದಿಯ ಬಲ ದಂಡೆಯ ಮೇಲೆ ನಿರ್ಮಿಸಲಾಗಿದೆ. ಈ ಸ್ಮಾರಕ ಪ್ರೇಮಿಗಳಿಗೆ ಪ್ರೇಮದ ದ್ಯೋತಕ, ಮೊಘಲ್ ಚಕ್ರವರ್ತಿ ಷಹಜಹಾನ್‌ನು ತನ್ನ ರಾಣಿ ಮಮ್ತಾಜಳ ನೆನಪಿಗಾಗಿ ೧೬೩೧ ರಿಂದ ೧೬೪೮ರ ಅವಧಿಯಲ್ಲಿ ತಾಜ್‌ಮಹಲನ್ನು ಅಮೃತ ಶಿಲೆಯಿಂದ ಕಟ್ಟಿರುವ ಗೋರಿ.[೩೦] ಭಾರತೀಯ ಮುಸ್ಲಿಂ ವಾಸ್ತುವಿನ ಅಮೋಘ ರತ್ನವೆಂದು ಕರೆಯಲಾಗಿದೆ. ಜಗತ್ತಿನ ವಾಸ್ತು ಪರಂಪರೆಯಲ್ಲೇ ಇದಕ್ಕೆ ವಿಶಿಷ್ಟವಾದ ಸ್ಥಾನವಿದೆ.

೫. **ಮಹಾಬಲಿಪುರಂನ ಸ್ಮಾರಕಗಳ ಸಮೂಹ** : ತಮಿಳುನಾಡು ರಾಜ್ಯದ ಚಂಗಲ್ ಪಟ್ಟು ಜಿಲ್ಲೆಯ ಮಹಾಬಲಿಪುರಂನ ಸ್ಮಾರಕ ಸಮೂಹವನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು (೧೯೮೪) ಘೋಷಿಸಿದೆ. ಕ್ರಿ.ಶ. ೬ನೆ ಶತಮಾನದಿಂದ ಕ್ರಿ.ಶ. ೯ನೇ ಶತಮಾನದ

ಮಹಾಬಲಿಪುರಂ ದಕ್ಷಿಣ ಭಾರತದ ಪ್ರಮುಖ ಐತಿಹಾಸಿಕ ತಾಣಗಳಲ್ಲಿ ಒಂದಾಗಿದ್ದು. ಇದನ್ನು ಮಾಮಲ್ಲಾಪುರಂ ಎಂದೂ ಕರೆಯುವುದುಂಟು. ಜತೆಗೆ ಇದು ಪಲ್ಲವರ ಕೋಟೆನಗರ[೩೧] ಎಂದೇ ಪ್ರಸಿದ್ಧಿಯಾಗಿದೆ. ಈ ನಗರವನ್ನು ಮೊದಲಿಗೆ ಗ್ರೀಕ್ ಅನ್ವೇಷಕನೊಬ್ಬ ಪತ್ತೆ ಹಚ್ಚಿದ. ಭಾರತೀಯ ಸಂಸ್ಕೃತಿ ಸಾರುವ ಹಲವು ಬಗೆಯ ದೇವಾಲಯ, ಸ್ಮಾರಕ, ವಾಸ್ತುಶಿಲ್ಪ ಕೆತ್ತನೆಗಳನ್ನು ಒಳಗೊಂಡಿದೆ. ಬಂಡೆಯನ್ನು ಕೊರೆದು ಮಾಡಿರುವ ಗುಹೆಗಳು, ಏಕಶಿಲೆಯಿಂದ ನಿರ್ಮಿಸಿರುವ ದೇವಾಲಯ, ಉತ್ಖನನದಿಂದ ಪತ್ತೆ ಮಾಡಿರುವ ದೇವಾಲಯ ಹಾಗೂ ಕಟ್ಟಡದ ರೂಪದಲ್ಲಿ ನಿರ್ಮಿಸಿರುವ ದೇವಾಲಯ ಪ್ರಮುಖವಾದವು. ಕೃಷ್ಣನ ಜೀವನದ ಕೆಲವು ಸಂಗತಿಗಳನ್ನು ತಿಳಿಸುವ ಕೆತ್ತನೆಗಳು ಇಲ್ಲಿವೆ. ಗ್ರಾಮ ಜೀವನ ಹಾಗೂ ಪ್ರಾಚೀನ ವ್ಯವಸ್ಥೆಯನ್ನು ಪ್ರತಿನಿಧಿಸುವ ಸಂಗತಿಗಳನ್ನು ಚಿತ್ರಿಸಲಾಗಿದೆ.

೬. **ಸೂರ್ಯ ದೇವಾಲಯ, ಕೋನಾರ್ಕ್** : ಒರಿಸ್ಸಾ ರಾಜ್ಯದ ಪುರಿ ಜಿಲ್ಲೆಯ ಕೋನಾರ್ಕ್‌ನ ಸೂರ್ಯ ದೇವಾಲಯವನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೧೯೮೪ ರಲ್ಲಿ ಘೋಷಿಸಿದೆ. ಇದನ್ನು ಕಳಿಂಗ ಮನೆತನದ ಒಂದನೇ ನರಸಿಂಹದೇವ ಕ್ರಿ.ಶ. ೧೩ನೇ ಶತಮಾನದಲ್ಲಿ ಕಟ್ಟಿಸಿದ್ದನು.[೩೨] ಈ ದೇವಾಲಯವನ್ನು ಸೂರ್ಯ ರಥದ ಮಾದರಿಯಲ್ಲಿ ಕಟ್ಟಲಾಗಿದೆ. ಇದರಲ್ಲಿ ೨೪ ಚಕ್ರಗಳನ್ನು ಅಳವಡಿಸಲಾಗಿದೆ. ಆರು ಕುದುರೆಗಳು ಎಳೆಯುತ್ತಿರುವಂತೆ ಚಿತ್ರಿಸಲಾಗಿದೆ. ಈ ೨೪ ಚಕ್ರಗಳು ದಿನದ ಗಂಟೆಯನ್ನು ಹಾಗೂ ೭ ಕುದುರೆಗಳು ವಾರದ ದಿನಗಳನ್ನು ಸೂಚಿಸುತ್ತವೆ. ರಥದಲ್ಲಿರುವ ೨ ಬದಿಯಲ್ಲಿ ತಲಾ ೧೨ ಚಕ್ರಗಳಿದ್ದು, ತಿಂಗಳುಗಳನ್ನು ಹಾಗೂ ರಾಶಿಗಳನ್ನು ಪ್ರತಿನಿಧಿಸುತ್ತವೆ. ರಥದ ತಳಭಾಗದಲ್ಲಿ ತಾವರೆ ಹೂವಿನ ಕೆತ್ತನೆಯಿದೆ. ಇಲ್ಲಿನ ಸೂರ್ಯ ದೇವಾಲಯ ರಥದ ಚಕ್ರವನ್ನು ರಾಷ್ಟ್ರೀಯ ಸೇವಾದಳ (ಎನ್.ಎಸ್.ಎಸ್) ಧ್ವಜದಲ್ಲಿ ಬಳಸಲಾಗಿದೆ. ಈ ಚಕ್ರವು ನಿರಂತರ ಚಲನೆಯನ್ನು ಸೂಚಿಸುತ್ತದೆ.

೭. **ಕಾಜಿರಂಗ ರಾಷ್ಟ್ರೀಯ ಉದ್ಯಾನ** : ಅಸ್ಸಾಂ ರಾಜ್ಯದ ನಾಗಾವ್ ಜಿಲ್ಲೆಯ ಕಾಜಿರಂಗ ರಾಷ್ಟ್ರೀಯ ಉದ್ಯಾನವನ್ನು ಯುನೆಸ್ಕೋ ನೈಸರ್ಗಿಕ ತಾಣವೆಂದು ೧೯೮೫ ರಲ್ಲಿ ಘೋಷಿಸಿದೆ. ಅಸ್ಸಾಂನ ಮಧ್ಯಭಾಗದಲ್ಲಿರುವ ಈ ಉದ್ಯಾನದಲ್ಲಿ ಇನ್ನೂ ಮಾನವನ ಅತಿಕ್ರಮಣ ನಡೆದಿಲ್ಲ. ಇಲ್ಲಿ ಅಪರೂಪದ ಏಕ ಶೃಂಗಿಯ ರೈನೊಸಾರ್‌ಗಳಿವೆ. ಹುಲಿಗಳು, ಆನೆಗಳು, ಚಿರತೆಗಳು, ಕಾಡೆಮ್ಮೆಗಳು, ಸಾಂಬಾರ್ ಜಿಂಕೆಗಳು, ಕಾಡುಹಂದಿಗಳು, ಕರಡಿಗಳು ಮುಂತಾದ ಸಸ್ತನಿಗಳು ಮತ್ತು ಸಾವಿರ ಬಗೆಯ ಪಕ್ಷಿಗಳು ಈ ಉದ್ಯಾನದಲ್ಲಿ ವಾಸಿಸುತ್ತವೆ. ಇದನ್ನು ರಕ್ಷಿತ

ಅರಣ್ಯವೆಂದು ೧೯೧೬ರಲ್ಲೇ ಘೋಷಿಸಲಾಯಿತು. ೧೯೭೪ರಲ್ಲಿ ರಾಷ್ಟ್ರೀಯ ಉದ್ಯಾನವಾಗಿ ಮಾಡಲಾಯಿತು.[೩೩] ಕಳೆದ ವರ್ಷ ಅಂದರೆ, ೨೦೧೬ರಲ್ಲಿ ಸಂಭವಿಸಿದ ಪ್ರವಾಹದಲ್ಲಿ ಘೇಂಡಾಮೃಗ ಸೇರಿದಂತೆ ಕೆಲವು ಪ್ರಾಣಿಗಳು ಸಾವನ್ನಪ್ಪಿದ್ದವು.[೩೪]

೮. **ಕಿಯೋಲದೇವ ರಾಷ್ಟ್ರೀಯ ಉದ್ಯಾನವನ** : ರಾಜಸ್ಥಾನ ರಾಜ್ಯದ ಭರತ್ಪುರ ಜಿಲ್ಲೆಯ ಕಿಯೋಲದೇವ ರಾಷ್ಟ್ರೀಯ ಉದ್ಯಾನವನವನ್ನು ಯುನೆಸ್ಕೋ ನೈಸರ್ಗಿಕ ತಾಣವೆಂದು ೧೯೮೫ ರಲ್ಲಿ ಘೋಷಿಸಿದೆ. ಇದು ಭರತ್ಪುರ ಮಹಾರಾಜರ ಬಾತುಕೋಳಿಗಳ ಬೇಟೆಯ ತಾಣವಾಗಿತ್ತು. ಇಂದು ಅಫಘಾನಿಸ್ತಾನ, ತುರ್ಕಮೆನ್‌ಸ್ತಾನ, ಸೈಬಿರಿಯಾದಿಂದ ಬರುವ ಜಲಪಕ್ಷಿಗಳ ಆಶ್ರಯ ತಾಣವಾಗಿದೆ. ಇದು ರಾಷ್ಟ್ರೀಯ ಉದ್ಯಾನವನವಾಗಿ ರೂಪಗೊಳ್ಳಲು ಪಕ್ಷಿ ಪ್ರೇಮಿ ಸಲೀಂ ಅಲಿ ಅವರ ಪಾತ್ರ ಮಹತ್ವದ್ದು.[೩೫] ಇಲ್ಲಿ ಕೆನ್ನೀಲಿ, ಬಕ, ಹೆಜ್ಜಾರ್ಲೆ, ಬಣ್ಣದ ಕೊಕ್ಕರೆ, ಬಾಯ್ಕಳಕ, ಹಾವಕ್ಕಿ, ನೀರುಕಾಗೆ, ಹೆಬ್ಬಾತು, ವಿವಿಧ ಬಗೆಯ ಬಾತುಕೋಳಿಗಳು ಇಲ್ಲಿವೆ.

೯. **ಮಾನಸ ವನ್ಯಜೀವಿಧಾಮ** : ಅಸ್ಸಾಂ ರಾಜ್ಯದ ಬಾರ್‌ಪೇಟಾ ಜಿಲ್ಲೆಯ ಮಾನಸ ವನ್ಯಜೀವಿ ಧಾಮವನ್ನು ಯುನೆಸ್ಕೋ ನೈಸರ್ಗಿಕ ತಾಣವೆಂದು ೧೯೮೫ ರಲ್ಲಿ ಘೋಷಿಸಿದೆ. ಇದು ಹುಲಿ ಮತ್ತು ಆನೆ ಸಂರಕ್ಷಿತ ಪ್ರದೇಶ, ಜೀವ ವೈವಿಧ್ಯ ಮೀಸಲು ಪ್ರವೇಶವಾಗಿ ಮಾನ್ಯತೆ ಪಡೆದಿದೆ.[೩೬] ೧೯೦೫ ರಲ್ಲಿ ಈ ಪ್ರದೇಶವನ್ನು ಸಂರಕ್ಷಿತ ಎಂದು ಗುರುತಿಸಲಾಯಿತು. ಭಾರತ ಸ್ವಾತಂತ್ರ್ಯ ಹೊಂದಿದ ನಂತರ ೧೯೫೦ ರಲ್ಲಿ ಇದನ್ನು 'ವನ್ಯಜೀವಿ ಧಾಮ' ಎಂದು ಘೋಷಿಸಲಾಯಿತು. ೮೩೭ ಚ.ಕಿ.ಮೀ ವಿಸ್ತೀರ್ಣದಲ್ಲಿ 'ಟೈಗರ್ ಪ್ರಾಜೆಕ್ಟ್'ನ್ನು ಜಾರಿಗೆ ತರಲಾಗಿದೆ. ೧೯೯೦ರಲ್ಲಿ ೫೦೦ ಚ.ಕಿ.ಮೀ ವಿಸ್ತೀರ್ಣದ ಪ್ರದೇಶವನ್ನು 'ಮಾನಸ ರಾಷ್ಟ್ರೀಯ ಉದ್ಯಾನ' ಎಂದು ನಾಮಕರಣ ಮಾಡಲಾಯಿತು. ಅಳಿವಿನಂಚಿನಲ್ಲಿರುವ ೨೧ ಬಗೆಯ ಪ್ರಾಣಿ ಪಕ್ಷಿ ಪ್ರಭೇಧಗಳ ರಕ್ಷಣೆಗಾಗಿ ರಾಷ್ಟ್ರೀಯ ವನ್ಯಜೀವ ಪ್ರೊಟೆಕ್ಷನ್ ಆ್ಯಕ್ಟ್‌ನ್ನು[೩೭] ಜಾರಿಗೊಳಿಸಲಾಗಿದೆ.

೧೦. **ಗೋವಾದ ಚರ್ಚುಗಳು** : ಗೋವಾ ರಾಜ್ಯದ ಉತ್ತರ ಗೋವಾ ಜಿಲ್ಲೆಯಲ್ಲಿರುವ ಚರ್ಚ್‌ಗಳನ್ನು ಮತ್ತು ಕಾಂಟೋನೊಂಟ್‌ಗಳನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೧೯೮೬ ರಲ್ಲಿ ಘೋಷಿಸಿದೆ. ಇಲ್ಲಿ ಪೋರ್ಚಗೀಸರು. ಕ್ರಿ.ಶ. ೧೬-೧೭ ನೇ ಶತಮಾನದಲ್ಲಿ ಸೆ.ಕ್ಯಾಥೆಡ್ರಲ್, ಚರ್ಚ್ ಅಂಡ್ ಕನವೆಂಟ್ ಆಫ್ ಸೇಂಟ್ ಫ್ರಾನ್ಸಿಸ್ ಆಫ್ ಆಸ್ಸಿಸಿ, ಚಾಆಪೆಲ್ ಆಫ್ ಸೇಂಟ್ ಕ್ಯಾಥರಿನ್, ಬೆಸಿಲಿಕಾ ಆಫ್ ಜೇಮ್ಸ್ ಜೀಸಸ್, ಚರ್ಚ್ ಆಫ್ ಲೇಡಿ ಆಫ್

ರೋಸರಿ, ಚರ್ಚ್ ಆಫ್ ಸೇಂಟ್ ಆಗಸ್ಟಿನ್, ಸಿ ಚರ್ಚ್ ಆಫ್ ಸೇಂಟೆ ಕ್ಯಾಜೆಟನ್[೩೮] ಇದು ರೋಮ್‌ನಲ್ಲಿರುವ ಸೇಂಟ್ ಪೀಟರ್ ಚರ್ಚ್‌ನ ವಿನ್ಯಾಸದಲ್ಲಿಯೇ ನಿರ್ಮಿಸಲಾಗಿದೆ. ಬೆಸಿಲಿಕಾ ಆಫ್ ಬೋಮ್ ಜೀಸಸ್ ಚರ್ಚ್ ಮುಂಭಾಗದಲ್ಲಿ ಸಿಂಹದಂತಹ ಕೆತ್ತನೆಗಳನ್ನು ಕಾಣುಬಹುದು. ಇದರ ನಿರ್ಮಾಣಕ್ಕೆ ಕಪ್ಪು ಗ್ರಾನೈಟ್ ಬಳಸಲಾಗಿದೆ. ಪೋರ್ಚಗೀಸರ ವಾಸ್ತುಶಿಲ್ಪ ಶೈಲಿಯಲ್ಲಿ ಇದೆ. ಸೆ. ಕ್ಯಾಥೆಡ್ರಲ್ ಚರ್ಚ್ ಸುಮಾರು ೧೧೫ ಅಡಿ ಎತ್ತರವಿದೆ. ಅತ್ಯಂತ ಎತ್ತರದ ಚರ್ಚಾಗಿದೆ. ಇದರಲ್ಲಿ ಜೀಸಸ್ ಹಾಗೂ ಮದರ್ ಮೇರಿ ಕುರಿತ ಚಿತ್ರಣಗಳನ್ನು ಕಾಣಬಹುದು.

೧೧. **ಫತೇಪುರ್ ಸಿಕ್ರಿ** : ಉತ್ತರ ಪ್ರದೇಶ ರಾಜ್ಯದ ಆಗ್ರಾ ಜಿಲ್ಲೆಯ ಫತೇಪುರ್ ಸಿಕ್ರಿಯನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೧೯೮೬ ರಲ್ಲಿ ಘೋಷಿಸಿದೆ. ಮೊಘಲ್ ಸಾಮ್ರಾಜ್ಯದ ಅವಧಿಯಲ್ಲಿ ಯೋಜನಾ ಬದ್ಧವಾಗಿ ನಿರ್ಮಿಸಿದ ಮೊದಲ ನಗರವೇ ಇದು. ಇದನ್ನು "ಸಿಟಿ ಆಫ್ ವಿಕ್ಟರಿ" ಎಂದು ಕರೆಯುವರು. ಬಾಬರ್ ಇಲ್ಲಿಗೆ ಭೇಟಿ ನೀಡಿದ್ದನು. ಅದನ್ನು ಸಿಕ್ರಿ ಎಂದು ಕರೆದನು. ಈ ಯುದ್ಧದ ನೆನಪಿಗಾಗಿ ನೀರಿನ ಮಧ್ಯದಲ್ಲಿ ಸುಂದರವಾದ ಜಲ್-ಮಹಲ್ ಹಾಗೂ ಒಂದು ತೋಟವನ್ನು ನಿರ್ಮಿಸಿದನು.[೩೯] ಈ ನಗರ ಸುಮಾರು ೧೪೮ ಎಕರೆ ಪ್ರದೇಶದಲ್ಲಿ ವಿಸ್ತರಿಸಿಕೊಂಡಿದೆ. ಮೂರು ಕಡೆಗಳಲ್ಲಿ ೬ ಕಿ.ಮೀ ದೂರದ ಗೋಡೆ ನಿರ್ಮಿಸಲಾಗಿದೆ. ಒಂಭತ್ತು ಪ್ರವೇಶ ದ್ವಾರಗಳಿದ್ದು, ಅಲ್ಲಿ ಎತ್ತರದ ಗೋಪುರಗಳಿಂದ ಕೂಡಿವೆ. ಜಾಮೀಯಾ ಮಸೀದಿಯು ಫತೇಪುರ್ ಸಿಕ್ರಿಯ ಕೇಂದ್ರ ಭಾಗದಲ್ಲಿದೆ ಹಾಗೂ ಈ ಸ್ಥಳದಲ್ಲಿ ಮೊಟ್ಟ ಮೊದಲು ನಿರ್ಮಾಣವಾದ ಸ್ಮಾರಕವಾಗಿದೆಯೆಂದು ಅಭಿಪ್ರಾಯಿಸಲಾಗಿದೆ. ಇಲ್ಲಿನ ಬೀರ್‌ಬಲ್ ಹೌಸ್, ಹರಮ್ ಸಾರಾ, ಹಿರಾನ್ ಗೋಪುರ ಪರ್ಶಿಯನ್ ಶೈಲಿಯಲ್ಲಿವೆ.

೧೨. **ಹಂಪಿಯ ಸ್ಮಾರಕಗಳು** : ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹಂಪಿ ಸ್ಮಾರಕಗಳನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೧೯೮೬ ರಲ್ಲಿ ಘೋಷಿಸಿದೆ. ತುಂಗಭದ್ರಾ ನದಿಯ ದಡದ ಮೇಲಿದೆ. ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿತ್ತು. ಇದನ್ನು ಸಂಗಮ ವಂಶದ ಹರಿಹರ, ಬುಕ್ಕರು ೧೩೩೬ರಲ್ಲಿ ಸ್ಥಾಪಿಸಿದರು. ಸಂಗಮ, ಸಾಳುವ, ತುಳುವ, ಅರವೀಡು ಎಂಬ ನಾಲ್ಕು ಅರಸರು ಮನೆತನದವರು ಈ ಸಾಮ್ರಾಜ್ಯವನ್ನು ೧೫೬೫ರವರೆಗೆ ಆಳಿದರು. ದಖನ್ ಸುಲ್ತಾನ ಅರಸರ ಒಕ್ಕೂಟವು ೧೫೬೫ರಲ್ಲಿ ರಕ್ಕಸಗಿ-ತಂಗಡಗಿ ಯುದ್ಧದಲ್ಲಿ ವಿಜಯನಗರವನ್ನು ಸೋಲಿಸಿ ಈ ನಗರದ ಅವನತಿಗೆ ಕಾರಣವಾಯಿತು. ಅಂದಿನಿಂದ ಹಂಪೆಯು ಹಾಳು ಹಂಪೆಯಾಗಿ "ಜಗತ್ತಿನ ಬಹು ದೊಡ್ಡ ತೆರೆದ

ಮ್ಯೂಸಿಯಂ" ಆಗಿದೆ. ಇಂತಹ ಸುಂದರವಾದ ನಗರವನ್ನು "ಕಣ್ಣಿಂದ ನೋಡಿಲ್ಲ ಹಾಗೂ ಕಿವಿಯಿಂದ ಕೇಳಿಲ್ಲ" ಎಂದು ಅಂದು ವಿಜಯನಗರಕ್ಕೆ ಭೇಟಿ ನೀಡಿದ ಅಬ್ದುಲ್ ರಜಾಕ್ ಎಂಬ ಪರ್ಶಿಯಾದ ರಾಯಭಾರಿ ಮುಕ್ತ ಕಂಠದಿಂದ ಹೊಗಳಿದ್ದಾನೆ. ಹಂಪಿಯಲ್ಲಿ ಸುಮಾರು ೧೬೦೦ ರಷ್ಟು[೪೦] ದೇಗುಲಗಳೂ, ಅರಮನೆಗಳು, ಕೋಟೆ ಕೊತ್ತಲ ಮುಂತಾದವು ನೋಡಲು ಸಿಗುತ್ತವೆ. ವಿಜಯನಗರ ಸಾಮ್ರಾಜ್ಯದ ಅಧಿದೇವತೆಯಾದ ವಿರೂಪಾಕ್ಷ ದೇಗುಲದಲ್ಲಿ ಇಂದಿಗೂ ಪೂಜೆ ನಡೆಯುತ್ತದೆ. ಹಂಪಿಯ ಸ್ಮಾರಕಗಳು ವಿಶ್ವಪರಂಪರೆಯ ಪಟ್ಟಿಯಲ್ಲಿ ಸೇರಿವೆ.

೧೩. **ಖಜುರಾಹೋ ದೇವಾಲಯಗಳ ಸಂಕೀರ್ಣ** : ಮಧ್ಯಪ್ರದೇಶ ರಾಜ್ಯದ ಛತ್ತರ್‌ಪುರ ಜಿಲ್ಲೆಯ ಖಜುರಾಹೋ ದೇವಾಲಯಗಳ ಸಂಕೀರ್ಣವನ್ನು ಯುನೆಸ್ಕೋ ೧೯೮೬ ರಲ್ಲಿ ಸಾಂಸ್ಕೃತಿಕ ತಾಣವೆಂದು  ಘೋಷಿಸಿದೆ. ಖಜುರಾಹೊ ದೇವಾಲಯಗಳು ಸುಂದರ ಸೂಕ್ಷ್ಮ ಕೆತ್ತನೆಗೆ, ವಾಸ್ತುಶಿಲ್ಪಕ್ಕೆ ಮತ್ತು ಬೃಹದಾಕಾರದ ಎತ್ತರಕ್ಕೆ ಲೋಕ ಪ್ರಸಿದ್ಧಿಯನ್ನು ಪಡೆದಿದೆ. ಈ ದೇಗುಲಗಳನ್ನು ಚಾಂದೇಲ ಅರಸರು ಕ್ರಿ.ಶ.೯೫೦-೧೦೫೦ ರ ಅವಧಿಯಲ್ಲಿ ಕಟ್ಟಿಸಿದರು. ಅವರು ಸುಮಾರು ೮೫ ದೇಗುಲಗಳನ್ನು ಕಟ್ಟಿಸಿದ್ದರೂ ಈಗ ಉಳಿದಿರುವ ಕೇವಲ ೨೫ ದೇಗುಲಗಳು ಮಾತ್ರವೆ. ಚೌಷಸ್ಠ ಯೋಗಿನಿ, ಲಾಲ್‌ಗೌನ ಮಹಾದೇವ, ಬ್ರಹ್ಮ, ಮಾತಂಗೇಶ್ವರ, ವರಾಹ ಹೆಸರಿನ ಸ್ಮಾರಕಗಳು ಆರಂಭದ ದೇಗುಲಗಳಾದರೆ ಲಕ್ಷ್ಮಣ, ವಿಶ್ವನಾಥ, ಪಾರ್ವತಿ, ಚಿತ್ರಗುಪ್ತ, ದೇವಿಭೂಜ ಇವು ಆನಂತರದ ದೇಗುಲಗಳು.[೪೧] ಇವುಗಳಲ್ಲಿ ಖಂಡಾರೀಯ ಮಹಾದೇವ ಅತ್ಯಂತ ದೊಡ್ಡ ದೇವಾಲಯ. ಈ ದೇವಾಲಯಗಳಲ್ಲಿ ವಾಸ್ತು ವೈಭವ ಮತ್ತು ಶಿಲ್ಪಿ ಸೌಂದರ್ಯಗಳ ನಡುವೆ ಅಪೂರ್ವವಾದ ಸಮನ್ವಯವನ್ನು ಸಾಧಿಸಲಾಗಿದೆ. ಪ್ರತಿಯೊಂದು ದೇಗುಲವನ್ನು ಅಸಂಖ್ಯಾತ ಶಿಲ್ಪಗಳಿಂದ ಅಲಂಕೃತಗೊಳಿಸಲಾಗಿದೆ.

೧೪. **ಎಲಿಫೆಂಟಾ ಗುಹಾಲಯಗಳು** : ಮಹಾರಾಷ್ಟ್ರ ರಾಜ್ಯದ ಕೊಲಬಾ ಜಿಲ್ಲೆಯ ಎಲಿಫೆಂಟಾ ಗುಹಾಲಯಗಳನ್ನು ಯುನೆಸ್ಕೋ ೧೯೮೭ ರಲ್ಲಿ ಸಾಂಸ್ಕೃತಿಕ ತಾಣವೆಂದು ಘೋಷಿಸಿದೆ. ಇದು ಮುಂಬೈ ಬಂದರಿನಲ್ಲಿರುವ ಒಂದು ದ್ವೀಪ. ಇದನ್ನು ಹಿಂದೆ ಘರಪುರಿ ಎಂದು ಕರೆಯಲಾಗಿತ್ತು. ಈ ದ್ವೀಪದಲ್ಲಿ ಪೋರ್ಚಗೀಸರು ೧೫೩೪ ರಿಂದ ದೀರ್ಘಕಾಲ ವಾಸವಾಗಿದ್ದರು. ಅವರಿಂದ ಇಲ್ಲಿನ ಗುಹಾಲಯಗಳು ಹೆಚ್ಚಿನ ನಾಶಕ್ಕೆ ಗುರಿಯಾದವು. ಇಲ್ಲಿ ಎರಡು ಕಲ್ಲಿನ ದೊಡ್ಡ ಆನೆಗಳ ಪ್ರತಿಮೆಗಳಿದ್ದವು. ಆದ್ದರಿಂದ ಈ ದ್ವೀಪಕ್ಕೆ 'ಎಲಿಫೆಂಟಾ'

ಎಂಬ ಹೆಸರನ್ನು ಕೊಟ್ಟು ಈ ಪ್ರತಿಮೆಗಳ ನಾಶಕ್ಕೆ ಕಾರಣರಾದರು. ಅವುಗಳಲ್ಲಿ ಒಂದನ್ನು ೧೮೬೪ರಲ್ಲಿ ಮುಂಬೈನ ವಿಕ್ಟೋರಿಯ ಗಾರ್ಡನ್‌ಗೆ[೪೨] ತಂದಿಡಲಾಯಿತು. ಜಕಂ ಆಗಿದ್ದ ಆನೆಯನ್ನು ೧೯೧೨ರಲ್ಲಿ ಜೋಡಿಸಲಾಯಿತು. ಎಲಿಫೆಂಟಾ ಇಂದು ಪ್ರಸಿದ್ಧವಾಗಿರುವುದು ಅಲ್ಲಿರುವ ಶಿವ ಗುಹಾಲಯದಿಂದ. ಇಲ್ಲಿರುವ ಶಿವನ ೨೩ ಅಡಿ ಎತ್ತರದ ಶಿಲ್ಪ ಭಾರತದಲ್ಲೆ ಪ್ರಸಿದ್ಧವಾದುದು. ಮೂರು ಮುಖಗಳನ್ನು ಹೊಂದಿರುವ ಶಿಲ್ಪ ಸುಂದರವಾಗಿ ಕಲಾ ವಿಮರ್ಶಕರ ಮೆಚ್ಚುಗೆ ಗಳಿಸಿದೆ.

**೧೫. ಚೋಳ ದೇವಾಲಯಗಳು** : ತಮಿಳುನಾಡು ರಾಜ್ಯದ ತಂಜಾವೂರು ಜಿಲ್ಲೆಯ ತಂಜಾವೂರಿನ ಬೃದೀದೇಶ್ವರ ದೇವಾಲಯವನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೧೯೮೭ ರಲ್ಲಿ ಘೋಷಿಸಿತ್ತು. ನಂತರ ಇದೇ ಜಿಲ್ಲೆಯ ಗಂಗೈಕೊಂಡ ಚೋಳಪುರಂನಲ್ಲಿರುವ ಬೃಹದೇಶ್ವರ ದೇವಾಲಯವನ್ನು ಹಾಗೂ ತಿರುಚನಾಪಳ್ಳಿ ಜಿಲ್ಲೆಯ ದಾರಾಸುರಂನ ಐರಾವತೇಶ್ವರ ದೇವಾಲಯವನ್ನು ಯುನೆಸ್ಕೋ ಅದೇ ಸಾಂಸ್ಕೃತಿಕ ತಾಣದ ಪಟ್ಟಿಗೆ ೨೦೦೪ರಲ್ಲಿ ಸೇರಿಸಲಾಯಿತು.[೪೩] ಇವುಗಳನ್ನು ಯುನೆಸ್ಕೋ ಸಂಸ್ಥೆಯು ಮಹಾಚೋಳ ದೇವಾಲಯಗಳೆಂದು ಹೆಸರಿಸಿದೆ. ಇವು ಎಲ್ಲವೂ ಶಿವನ ದೇವಾಲಯಗಳೆ. ಇವುಗಳನ್ನು ಚೋಳ ದೊರೆಗಳಾದ ಒಂದನೇ ರಾಜರಾಜ ಹಾಗೂ ಎರಡನೇ ರಾಜರಾಜ ಅರಸರ ಆಡಳಿತಾವಧಿಯಲ್ಲಿ ನಿರ್ಮಿಸಲಾಗಿದೆ.

**೧೬. ಪಟ್ಟದಕಲ್ಲು ಸ್ಮಾರಕ ಸಮೂಹ** : ಕರ್ನಾಟಕ ರಾಜ್ಯದ ಬಾಗಲಕೋಟೆ ಜಿಲ್ಲೆಯ ಪಟ್ಟದಕಲ್ಲು ಸ್ಮಾರಕ ಸಮೂಹಗಳನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೧೯೮೭ ರಲ್ಲಿ ಘೋಷಿಸಿದೆ. ಬಾದಾಮಿ ಚಾಲುಕ್ಯರಿಗೆ ಇಲ್ಲಿ ಪಟ್ಟಾಭಿಷೇಕವಾಗುತ್ತಿದ್ದರಿಂದ ಈ ಸ್ಥಳವನ್ನು ಪಟ್ಟದಕಲ್ಲು ಎಂದು ಕರೆಯಲಾಗಿದೆ. ಈ ಸ್ಥಳದಲ್ಲಿ ಬಾದಾಮಿ ಚಾಲುಕ್ಯರ ಕಾಲದ ವಾಸ್ತು ಸಾಧನೆ ಅತ್ಯಂತ ಉನ್ನತ ಹಂತವನ್ನು ತಲುಪಿದೆಯೆಂದು ಅಭಿಪ್ರಾಯಿಸಲಾಗಿದೆ. ಪಟ್ಟದಕಲ್ಲಿನಲ್ಲಿ ಹತ್ತು ದೇವಾಲಯಗಳ ಸಂಕೀರ್ಣವಿದೆ. ಇವೆಲ್ಲವೂ ವಿಶಿಷ್ಟವಾದ ವಾಸ್ತುಲಕ್ಷಣಗಳಿಂದ ಕೂಡಿವೆ. ಇವೆಲ್ಲವೂ ೭–೮ನೇ ಶತಮಾನಗಳಲ್ಲಿ ನಿರ್ಮಾಣವಾಗಿವೆ. ಅವುಗಳಲ್ಲಿ ಸಂಗಮೇಶ್ವರ, ವಿರೂಪಾಕ್ಷ, ಮಲ್ಲಿಕಾರ್ಜುನ, ಜೈನ್‌ನಾರಾಯಣ, ಚಂದ್ರಶೇಖರ, ಪಾಪನಾಥ, ಜಂಬುಲಿಂಗ, ಕಾಡಸಿದ್ಧೇಶ್ವರ, ಕಾಶಿನಾಥ ಮತ್ತು ಗಳಗನಾಥ ದೇವಾಲಯಗಳಿವೆ. ಇಲ್ಲಿರುವ ದೇಗುಲಗಳಲ್ಲಿಯೇ ಅತ್ಯಂತ ದೊಡ್ಡದು ಮತ್ತು ಸುಂದರವಾದುದು ವಿರೂಪಾಕ್ಷ ದೇಗುಲ.[೪೪] ಇದರ ಮೂಲ ಹೆಸರು ಲೋಕೇಶ್ವರ ದೇವಸ್ಥಾನ ಇದನ್ನು ಎರಡನೆಯ

ವಿಕ್ರಮಾದಿತ್ಯನ ರಾಣಿ ಲೋಕಮಹಾದೇವಿ ತನ್ನ ಪತಿ ಕಾಂಚಿ ಪಟ್ಟಣವನ್ನು ಮೂರು ಬಾರಿಗೆದ್ದುದರ ನೆನಪಿಗಾಗಿ ಕಟ್ಟಿಸಿದಳೆಂಬ ಮಾಹಿತಿಗಳುಂಟು.

೧೭. **ಸುಂದರ್ಬನ್ ರಾಷ್ಟ್ರೀಯ ಉದ್ಯಾನ** : ಪಶ್ಚಿಮ ಬಂಗಾಳ ರಾಜ್ಯದ ಸುಂದರ್ ಬನ್ ರಾಷ್ಟ್ರೀಯ ಉದ್ಯಾನವನವನ್ನು ಯುನೆಸ್ಕೋ ನೈಸರ್ಗಿಕ ತಾಣವೆಂದು ೧೯೮೭ ರಲ್ಲಿ ಘೋಷಿಸಿದೆ. ಇದು ಬಂಗಾಳದಲ್ಲಿರುವ ಗಂಗಾನದಿಯ ಮುಖಜ ಭೂಮಿ. ಇದು ೨೫೮೫ ಚ.ಕಿ.ಮಿ. ವಿಸ್ತಾರವಾಗಿದೆ. [ಇದು ಅರ್ಧಭಾಗ ಭಾರತದಲ್ಲೂ, ಉಳಿದರ್ಧ ಭಾಗ ಬಾಂಗ್ಲಾದೇಶದಲ್ಲೂ ವ್ಯಾಪಿಸಿದೆ] ಸುಂದರಬನವು ಪೂರ್ಣವಾಗಿ ಮಾವಿನ ಮರಗಳಿಂದ ತುಂಬಿದೆ. ವನ್ಯ ಜೀವಿಗಳ ರಕ್ಷಿತ ಧಾಮ. ಹುಲಿ ಸಂರಕ್ಷಣಾ ಯೋಜನೆಯನ್ನು ಹೊಂದಿದೆ. ಇದರಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಹುಲಿಗಳಿವೆ. ಅಪಾಯದ ಅಂಚಿನಲ್ಲಿರುವ ಜಲ ಸಸ್ತನಿಗಳು, ಪಕ್ಷಿಗಳು ಮತ್ತು ಉರುಗಗಳಿವೆ.

೧೮. **ನಂದಾದೇವಿ ಮತ್ತು ಪುಷ್ಪ ಕಣಿವೆಯ ರಾಷ್ಟ್ರೀಯ ಉದ್ಯಾನ** : ಉತ್ತರಾಖಂಡ ರಾಜ್ಯದ ಚಾಮೊಲಿ ಜಿಲ್ಲೆಯ ಸಶ್ಮಿಮ ಹಿಮಾಲಯದಲ್ಲಿರುವ ನಂದಾದೇವಿ ಹಾಗೂ ಪುಷ್ಪ ಕಣಿವೆಯ ರಾಷ್ಟ್ರೀಯ ಉದ್ಯಾನವು ವಿಶ್ವಪಾರಂಪರಿಕ ಪಟ್ಟಿಯಲ್ಲಿ ನೈಸರ್ಗಿಕ ತಾಣಗಳಾಗಿವೆ. ೧೯೮೮ರಲ್ಲಿ ನಂದಾದೇವಿ ಪರ್ವತವನ್ನು ನಂತರ ೨೦೦೫ರಲ್ಲಿ ಪುಷ್ಪ ಕಣಿವೆ ರಾಷ್ಟ್ರೀಯ ಉದ್ಯಾನವನ್ನು ವಿಶ್ವಪಾರಂಪರಿಕ ಪಟ್ಟಿಗೆ ಸೇರಿಸಲಾಯಿತು. ನಂದಾದೇವಿ ರಾಷ್ಟ್ರೀಯ ಉದ್ಯಾನ ೬೩೦ ಚ.ಕಿ.ಮೀ. ಇದೆ. ಪುಷ್ಪ ಕಣಿವೆ ರಾಷ್ಟ್ರೀಯ ಉದ್ಯಾನ ೮೭.೫ ಚ.ಕಿ.ಮೀ[೪೫] ಹೊಂದಿದೆ. ಭಾರತದಲ್ಲಿನ ಸುಂದರ ತಾಣಗಳಲ್ಲಿ ನಂದಾದೇವಿ ಮತ್ತು ಹೂವುಗಳ ಕಣಿವೆ ರಾಷ್ಟ್ರೀಯ ಉದ್ಯಾನ ಪ್ರಮುಖವಾಗಿದೆ. ಈ ಪ್ರದೇಶದ ಸೌಂದರ್ಯ ನೋಡಲು ಅಪಾರ ಸಂಖ್ಯೆಯ ಪ್ರವಾಸಿಗರು ಆಗಮಿಸುತ್ತಾರೆ. ನಂದಾದೇವಿ ಪರ್ವತ ಹಾಗೂ ಅದರ ತಪ್ಪಲಿನಲ್ಲಿ ಹೂವುಗಳು ಮೂಡುತ್ತವೆ. ಭಾರತದ ಎರಡನೇ ಅತೀದೊಡ್ಡ ಪರ್ವತ. ಇಲ್ಲಿ ಉತ್ತರದಿಂದ ದಕ್ಷಿಣ ಕಡೆಗೆ ಪರ್ವತ ಹರಡಿಕೊಂಡಿವೆ. ಅವುಗಳ ನಡುವೆ ನೈಸರ್ಗಿಕ ಉದ್ಯಾನವು ನಿರ್ಮಾಣಗೊಂಡಿದೆ. ಹಿಮಾಲಯದ ಕಾಡುಕುರಿ, ಹಿಮಾಲಯದ ಕಸ್ತೂರಿ ಜಿಂಕೆ, ಹಿಮಚಿರತೆ ಇಲ್ಲಿ ಕಂಡು ಬರುವ ವನ್ಯಜೀವಿಗಳು. ಪುಷ್ಪ ಕಣಿವೆಯ ಹೂಗಳನ್ನು ಕುರಿತು ಫ್ರಾಂಕ್ ಎಸ್. ಸ್ಮಿತ್ ಅವರು "ವ್ಯಾಲಿ ಅಫ್ ಫ್ಲವರ್" ಪುಸ್ತಕವನ್ನು ಹೊರತಂದರು. ನಂತರದಲ್ಲಿ ಈ ಪ್ರದೇಶಕ್ಕೆ ರಾಷ್ಟ್ರೀಯ ಉದ್ಯಾನ ಸ್ಥಾನಮಾನ ಲಭಿಸಿದೆ.

**೧೯. ಸಾಂಚಿಯ ಬೌದ್ಧರ ಸ್ಮಾರಕಗಳು :** ಮಧ್ಯಪ್ರದೇಶ ರಾಜ್ಯದ ರೈಸನ್ ಜಿಲ್ಲೆಯ ಸಾಂಚಿಯ ಬೌದ್ಧ ಸ್ಮಾರಕಗಳನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೧೯೮೯ ರಲ್ಲಿ ಘೋಷಿಸಿದೆ. ಬೌದ್ಧ ಸ್ತೂಪಗಳು ಮತ್ತು ಇತರ ಸ್ಮಾರಕಗಳು ಸಾಂಚಿಯ ಗುಹೆಯೊಂದರ ಮೇಲಿವೆ. ಸ್ತೂಪಗಳು, ಏಕಶೀಲಾಸ್ತಂಭ, ದೇವಾಲಯಗಳು, ವಿಹಾರಗಳು ಇಲ್ಲಿವೆ.[೪೬] ಈ ಬೌದ್ಧರ ಕೇಂದ್ರ ಕ್ರಿ.ಶ. ೧೨ನೇ ಶತಮಾನದವರೆಗೂ ಕ್ರಿಯಾಶೀಲವಾಗಿತ್ತು. ಆನಂತರ ಅದು ನಿರ್ಲಕ್ಷಕ್ಕೆ ಒಳಗಾಯಿತು. ಇಲ್ಲಿರುವ ಸ್ತೂಪಗಳು ಚಿಕ್ಕದಾದರು ಸುಂದರವಾಗಿವೆ. ಇದು ೭ ಮೀಟರ್ ಎತ್ತರವಾಗಿದೆ. ಇಲ್ಲಿ ಉತ್ಖನನ ನಡೆಸಿ ವಿಹಾರವನ್ನು ಪತ್ತೆ ಮಾಡಲಾಗಿದೆ. ಸಾಂಚಿಯ ಗುಡ್ಡದ ಮೇಲೆ ಮೌರ್ಯ ಚಕ್ರವರ್ತಿ ಅಶೋಕನು ೮ ಸ್ತೂಪಗಳನ್ನು ನಿರ್ಮಿಸಿದನೆಂದು ಹೇಳಲಾಗುತ್ತದೆ.

**೨೦. ಹುಮಾಯೂನ್ ಗೋರಿ :** ದೆಹಲಿಯಲ್ಲಿರುವ ಹುಮಾಯೂನ್‌ನ ಸಮಾಧಿಯನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೧೯೯೩ ರಲ್ಲಿ ಘೋಷಿಸಿದೆ. ಈ ಸಮಾಧಿಯನ್ನು ಹುಮಾಯೂನ್‌ನ ರಾಣಿ ಹಾಜಿಬೇಗಂಳು ಕ್ರಿ.ಶ. ೧೫೭೦ರಲ್ಲಿ ಕಟ್ಟಿಸಿದಳು. ಇದು ಭಾರತದ ಉಪಖಂಡದಲ್ಲೇ ಉದ್ಯಾನದಿಂದ ಆವೃತವಾದ ಮೊದಲ ಗೋರಿ. ಇದು ಭಾರತದಲ್ಲಿ ಮೊಘಲ್ ವಾಸ್ತು ಪರಂಪರೆಯನ್ನು ಅನಾವರಣ ಮಾಡಿತು. ಇದು ವಿಶಾಲವಾದ ಹಾಗೂ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಾಣಗೊಂಡಿದೆ. ಈ ಸಮಾಧಿಯಲ್ಲಿ ಅಷ್ಟ ಕೋನಾಕಾರದಲ್ಲಿರುವ ಎರಡು ಗುಮ್ಮಟಗಳು ಎತ್ತರವಾದ ಕಮಾನುಗಳನ್ನು ಪ್ರತಿ ಪಾರ್ಶ್ವದಲ್ಲೂ ಕಾಣುತ್ತೇವೆ. ನಾಲ್ಕು ದಿಕ್ಕೂಗಳಿಂದಲೂ ಕಟ್ಟಡವನ್ನು ಪ್ರವೇಶಿಸಲು ದಾರಿಗಳಿವೆ.[೪೭] ಮೇಲೆ ದೊಡ್ಡದಾದ ಡೂಮನ್ನು ನಿರ್ಮಿಸಲಾಗಿದೆ. ಕಟ್ಟಡವನ್ನು ಪೂರ್ಣವಾಗಿ ಕೆಂಪು ಮರಳುಗಲ್ಲಿನಿಂದ ಕಟ್ಟಲಾಗಿದೆ.

**೨೧. ಕುತುಬ್ ಮಿನಾರ್ ಮತ್ತು ಸುತ್ತಲಿನ ಸ್ಮಾರಕಗಳು :** ನವದೆಹಲಿಯಲ್ಲಿರುವ ಕುತುಬ್ ಮಿನಾರ್, ಮೆಹರೌಲಿ ಬಳಿಯಿದೆ. ಇದನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೧೯೯೩ ರಲ್ಲಿ ಘೋಷಿಸಿದೆ. ದೆಹಲಿ ಸುಲ್ತಾನರ ಕಾಲದಲ್ಲಿ ಅರಾಬಿಕ್ ಹಾಗೂ ನಾಗರ ಶೈಲಿಯಲ್ಲಿ ನಿರ್ಮಾಣ ಮಾಡಲಾಗಿದೆ. ಕ್ರಿ.ಶ. ೧೧೯೧ರಲ್ಲಿ ಗುಲಾಮಿ ಸಂತತಿಯ ಕುತ್ಬುದ್ದೀನ್ ಐಬಕ್ ಇದಕ್ಕೆ ಅಡಿಪಾಯ ಹಾಕಿ ಮೊದಲ ಉಪ್ಪರಿಗೆಯನ್ನು ನಿರ್ಮಿಸಿದನು. ಇದನ್ನು ಅಳಿಯ ಇಲ್ತಮಶ್‌ನ ಕಾಲದಲ್ಲಿ ಮತ್ತೇ ಮೂರು ಉಪ್ಪರಿಗೆಗಳನ್ನು ನಿರ್ಮಿಸಲಾಯಿತು. ಫಿರೋಜ್ ತುಘಲಕ್ ಕಾಲದಲ್ಲಿ ನಾಲ್ಕನೇ ಉಪ್ಪರಿಗೆಗೆ ಸಿಡಿಲು ಬಡಿದು ದುರಸ್ಥಿಗೊಳಗಾಯಿತ್ತು. ಆಗ

ಅದನ್ನು ಫಿರೋಜ್ ತುಘಲಕ್ ಸರಿಪಡಿಸಿ ಮತ್ತೆರಡು ಉಪ್ಪರಿಗೆಗಳನ್ನು ನಿರ್ಮಾಣ ಮಾಡಿದ. ಹಾಗಾಗಿ ಕುತುಬ್ ಮಿನಾರ್ ೫ ಉಪ್ಪರಿಗೆಗಳನ್ನು ಹೊಂದಿದೆ. ಪ್ರತಿಯೊಂದು ಉಪ್ಪರಿಗೆಯಲ್ಲಿಯೂ ಬಾಲ್ಕನಿಯಿದೆ. ಒಂದೊಂದು ವಿಭಿನ್ನ ವಿನ್ಯಾಸದಿಂದ ಕೂಡಿದೆ. ಇದು ಹಿಂದೂ ಮತ್ತು ಇಸ್ಲಾಂ ಧರ್ಮಗಳ ವಾಸ್ತುಶಿಲ್ಪದ ಸಮ್ಮಿಲನಗೊಂಡಿದೆ.[೪೮] ಅದರ ಲಕ್ಷಣದ ಹಿನ್ನೆಲೆಯಿಂದ ವಿದ್ವಾಂಸ ಫರ್ಗುಸನ್ ಅವರು ಇದು ಇಂಡೋಸಾರ್ಸೆನಿಕ್ ಶೈಲಿಯಲ್ಲಿದೆ ಎಂದಿದ್ದಾರೆ.

**೨೨. ಭಾರತದ ಪರ್ವತ ರೈಲ್ವೆಗಳು** : ಪಶ್ಚಿಮ ಬಂಗಾಳ ರಾಜ್ಯದಲ್ಲಿನ ಡಾರ್ಜಲಿಂಗ್ ಹಿಮಾಲಯ ರೈಲ್ವೆಯನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೧೯೯೯ರಲ್ಲಿ ಘೋಷಿಸಿತ್ತು. ನಂತರ ತಮಿಳುನಾಡು ರಾಜ್ಯದ ನೀಲಗಿರಿಯ ಪರ್ವತ ರೈಲ್ವೆಯನ್ನು ಯುನೆಸ್ಕೋ ಇನ್ನೊಂದು ಶಾಸನವನ್ನು ಹೊರಡಿಸಿ ಈ ರೈಲ್ವೆಯನ್ನು ಅದೇ ಸಾಂಸ್ಕೃತಿಕ ತಾಣದಲ್ಲಿ ೨೦೦೫ರಲ್ಲಿ ಘೋಷಿಸಿತು.[೪೯] ಹಾಗಾಗಿ ಯುನೆಸ್ಕೋ ಈ ರೈಲ್ವೆಯನ್ನು ಭಾರತದ ಪರ್ವತ ರೈಲ್ವೆಗಳೆಂದು ನಾಮಕರಣ ಮಾಡಿತು. ಡಾರ್ಜಲಿಂಗ್ ಒಂದು ವಿಲಕ್ಷಣ ಗಿರಿಧಾಮ ಇಲ್ಲಿ ಪುಟಾಣಿ ಟ್ರೈನ್ ಎರಡು ಅಡಿ ಅಗಲದ ರೈಲು ಕಂಬಿಗಳ ಮೇಲೆ ೮೩ ಕಿ.ಮೀ.ವರೆಗೆ ಸಂಚರಿಸುತ್ತದೆ. ಇದು ಇಂಜಿನಿಯರಿಂಗ್ ತಾಂತ್ರಿಕತೆಗಾಗಿ ಹೆಸರಾಗಿದೆ. ಸುಂದರವಾದ ನಿಸರ್ಗ ಪರಿಸರದಲ್ಲಿ ನೀಲಗಿರಿ ಪರ್ವತದಲ್ಲಿ ಪುಟಾಣಿ ಟ್ರೈನ್ ಸಂಚರಿಸುವುದರಿಂದ ಯಕ್ಷ ಲೋಕಕ್ಕೆ ಹೋದ ಅನುಭವವಾಗುತ್ತದೆ. ಇದು ಮೆಟ್ಟುಪಾಳ್ಯಂ ಮತ್ತು ನೀಲಗಿರಿಯ (ಉದಕಮಂಡಲ ಅಥವಾ ಊಟಿ) ನಡುವೆ ಸಂಚರಿಸುತ್ತದೆ.

**೨೩. ಮಹಾಬೋಧಿ ದೇವಾಲಯ ಸಂಕೀರ್ಣ** : ಬಿಹಾರ ರಾಜ್ಯದ ಗಯಾ ಜಿಲ್ಲೆಯಲ್ಲಿರುವ ಮಹಾಬೋಧಿ ದೇವಾಲಯ ಸಂಕೀರ್ಣವನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೨೦೦೨ ರಲ್ಲಿ ಘೋಷಿಸಿದೆ. ಸಾಮ್ರಾಟ್ ಅಶೋಕನು ಕ್ರಿ.ಪೂ. ೩ನೇ ಶತಮಾನದಲ್ಲಿ ಮಹಾಬೋಧಿ ದೇವಾಲಯ ನಿರ್ಮಾಣಕ್ಕೆ ಬುನಾದಿ ಹಾಕಿದ. ಆದರೆ ಈಗಿನ ಪುಸ್ತುತ ದೇವಾಲಯಗಳು ಕ್ರಿ.ಶ. ೬ನೇ ಶತಮಾನಕ್ಕೆ ಸೇರಿದವುಗಳೆಂದು ಅಭಿಪ್ರಾಯಿಸಲಾಗಿದೆ. ಅವುಗಳನ್ನು ಗುಪ್ತರ ಆಡಳಿತವಧಿಯಲ್ಲಿ ಅಭಿವೃದ್ಧಿಪಡಿಸಲಾಯಿತು. ಈ ಸ್ಥಳದಲ್ಲಿಯೇ ಬುದ್ಧನಿಗೆ ಜ್ಞಾನೋದಯದವಾಯಿತು. ಆನಂತರ ಕೆಲಕಾಲ ಇಲ್ಲೇ ನೆಲೆಸಿದ್ದುದರ ಬಗ್ಗೆ ದಾಖಲೆಗಳಿವೆ. ಅಶೋಕನ ಕಾಲದಲ್ಲಿ ನಿರ್ಮಿತವಾದ ಈ ದೇವಾಲಯವು ಸ್ತಂಭಗಳು ಹಾಗೂ ಪ್ರಾಂಗಣಗಳನ್ನು ಒಳಗೊಂಡಿರುವುದನ್ನು ದಾಖಲಿಸಲಾಗಿದೆ.[೫೦] ಇಲ್ಲಿನ

ದೇವಾಲಯಗಳ ಸಮೂಹವು ಸುಮಾರು ೪.೮ ಹೆಕ್ಟೇರ್ ಪ್ರದೇಶದಲ್ಲಿ ಹರಡಿಕೊಂಡಿವೆ. ಈ ದೇವಾಲಯಗಳ ಸಮೂಹದಲ್ಲಿರುವ ಪ್ರಮುಖ ಸ್ಮಾರಕಗಳೆಂದರೆ ೫೦ ಮೀಟರ್ ಎತ್ತರದ ಮುದಿಗಾ ದೇವಾಲಯ, ವಜ್ರಾಪನ ಸ್ಥಿತಿಯಲ್ಲಿರುವ ಬುದ್ಧ, ಪವಿತ್ರ ಬೋಧಿ ವೃಕ್ಷ, ಬುದ್ಧನಿಗೆ ಜ್ಞಾನೋದಯವಾದ ಆರು ಪವಿತ್ರ ಸ್ಥಳಗಳು, ಪುರಾತತ್ವ ಸ್ತೂಪಗಳು, ೮೦ ಅಡಿ ಎತ್ತರದ ಬುದ್ಧನ ಪ್ರತಿಮೆ, ೭ನೇ ಪವಿತ್ರ ಸ್ಥೂಲವಾದ ತಾವರೆ ಕೊಳವು ದೇವಾಲಯದ ಹೊರಭಾಗದ ಉತ್ತರ ದಿಕ್ಕಿನಲ್ಲಿವೆ. ದೇವಾಲಯ ಹಾಗೂ ತಾವರೆ ಕೊಳ ಸುತ್ತಲೂ ೫ ಮೀಟರ್ ಎತ್ತರದ ಆವರಣ ಇದೆ. ಇದು ಮೂರು ಹಂತಗಳಲ್ಲಿ ರಚನೆಯಾಗಿದೆ.

**೨೪. ಭೀಮ್‌ಬೆಟ್ಕ ಬಂಡೆ ಆಸರೆಗಳು :** ಮಧ್ಯಪ್ರದೇಶ ರಾಜ್ಯದ ಭೋಪಾಲ್ ಜಿಲ್ಲೆಯಲ್ಲಿರುವ ಭೀಮ್ ಬೆಟ್ಕಾದಲ್ಲಿನ ಶಿಲಾಯುಗದ ಗುಹೆಗಳನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೨೦೦೩ ರಲ್ಲಿ ಘೋಷಿಸಿದೆ. ಈ ಸ್ಥಳವು ಸು. ಒಂದು ಲಕ್ಷ ವರ್ಷಗಳಷ್ಟು ಹಳೆಯದಾದ ಮಧ್ಯಶಿಲಾಯುಗದ "ಮಾನವ ವಿಕಾಸದ ಆರಂಭಿಕ ತೊಟ್ಟಿಲು"[೫೧] ಎನ್ನಲಾಗಿದೆ. ಆದಿ ಮಾನವರ ಜೀವನ ಕ್ರಮ, ಸಾಮೂಹಿಕ ಜೀವನ, ವಾತಾವರಣ, ಆಡಳಿತದ ಬಗೆಗಿನ ಮಾಹಿತಿಗಳನ್ನು ಅವರು ಒಡಮೂಡಿಸಿರುವ ಚಿತ್ರಗಳ ಮೂಲಕ ಇತಿಹಾಸಕಾರರು ಸಂಗ್ರಹಿಸಿದ್ದಾರೆ. ಸುಮಾರು ೧೦ ಕಿ.ಮೀ ಉದ್ದ ಹಾಗೂ ೩ ಕಿ.ಮೀ ಅಗಲವಾದ ವಿಸ್ತೀರ್ಣದ ಪ್ರದೇಶದಲ್ಲಿ ಭೀಮ್‌ಬೆಟ್ಕಾ ಗುಹೆಗಳು ಹರಡಿಕೊಂಡಿವೆ. ಇಲ್ಲಿ ಸುಮಾರು ೭೦೦ ಬೃಹದಾಕಾರ ಗುಹೆಗಳಿವೆ. ಅವುಗಳಲ್ಲಿ ೪೦೦ ಗುಹೆಗಳು ವರ್ಣಚಿತ್ರಗಳನ್ನು ಒಳಗೊಂಡಿವೆ. ಆ ಕಾಲದ ಮಾನವ ಕೈಗೊಳ್ಳುತ್ತಿದ್ದ ಸಂಶೋಧನೆ, ಆವಿಷ್ಕಾರಗಳ ಕುರಿತ ಚಿತ್ರಗಳನ್ನು ಇಲ್ಲಿ ಚಿತ್ರಿಸಲಾಗಿದೆ. ಅವರು ವಿವಿಧ ಕಲ್ಲಿನ ಆಯುಧಗಳನ್ನು ಬಳಸುತ್ತಿದ್ದರು ಎನ್ನಲಾಗಿದೆ. ಅವುಗಳಲ್ಲಿ ಚೂಪಾದ ಆಯುಧಗಳೂ ಇವೆ.

**೨೫. ಛತ್ರಪತಿ ಶಿವಾಜಿ ಟರ್ಮಿನಸ್ ನಿಲ್ದಾಣ, ಮುಂಬೈ :** ಮಹಾರಾಷ್ಟ್ರ ರಾಜ್ಯದ ರಾಜಧಾನಿ ಪಟ್ಟಣವಾಗಿರುವ ಮುಂಬೈನಲ್ಲಿರುವ ಛತ್ರಪತಿ ಶಿವಾಜಿ ಟರ್ಮಿನಸ್ ನಿಲ್ದಾಣವನ್ನು ಮೊದಲಿಗೆ ವಿಕ್ಟೋರಿಯಾ ಟರ್ಮಿನಸ್ ಎಂದು ಕರೆಯಲಾಗಿತ್ತು. ಅನಂತರ ೧೯೯೬ರಲ್ಲಿ ಶಿವಾಜಿ ಟರ್ಮಿನಸ್ ಎಂದು ಮರುನಾಮಕರಣ ಮಾಡಲಾಯಿತು. ಯುನೆಸ್ಕೋ ಈ ಟರ್ಮಿನಸ್‌ನ್ನು ಸಾಂಸ್ಕೃತಿಕ ತಾಣವೆಂದು ೨೦೦೪ ರಲ್ಲಿ ಘೋಷಿಸಿದೆ. ಇದನ್ನು ಫ್ರೆಡರಿಕ್ ಡಬ್ಲ್ಯೂ ಸ್ಟೀವನ್ಸ್, ಎಂಬ ಬ್ರಿಟಿಷ್ ವಾಸ್ತುಕಾರ ವಿನ್ಯಾಸಗೊಳಿಸಿದ ರಾಣಿ ವಿಕ್ಟೋರಿಯಾಳ ಚಿನ್ನದ ಹಬ್ಬದ ಆಚರಣೆಯ ಸಮಯದಲ್ಲಿ ೧೮೮೭ರಲ್ಲಿ ಇದನ್ನು ಅನಾವರಣ ಮಾಡಲಾಯಿತು[೫೨] ಅಂದು

ಇಂಗ್ಲೆಂಡಿನಲ್ಲಿ ಜನಪ್ರಿಯವಾಗಿದ್ದ ವೆನೀಷಿಯನ್ ಗಾಥಿಕ್ ಮಾದರಿ ಮತ್ತು ಭಾರತೀಯ ವಾಸ್ತು ಅಂಶಗಳನ್ನು ಅಳವಡಿಸಿ ಇದನ್ನು ಕಟ್ಟಲಾಗಿದೆ. ಇದರಿಂದ ಬಾಂಬೆ ನಗರ "ಗಾಥಿಕ್ ನಗರ"[೫೩] ಎಂಬ ಹೆಸರನ್ನು ಪಡೆಯಿತು. ಇದರ ನಿರ್ಮಾಣ ಕಾರ್ಯ ೧೮೭೮ರಲ್ಲಿ ಆರಂಭವಾಗಿ, ೧೦ ವರ್ಷಗಳಲ್ಲಿ ಪೂರ್ಣವಾಯಿತು. ಶಿಲೆಯಿಂದ ರಚಿಸಿದ ಡೂಮ್‌ಗಳು, ಸಣ್ಣಸಣ್ಣ ಗೋಪುರಗಳು, ಚೂಪಾದ ಕಮಾನುಗಳು, ವಿಭಿನ್ನ ತಲವಿನ್ಯಾಸ ಇವು ಭಾರತೀಯ ಅರಮನೆಯ ವಾಸ್ತುವನ್ನು ಹೋಲುತ್ತವೆ. ಬ್ರಿಟಿಷ್ ಮತ್ತು ಭಾರತೀಯ ವಾಸ್ತು ಪರಂಪರೆಗಳು ಅರ್ಥಪೂರ್ಣವಾಗಿ ಸಂಯೋಜನೆ ಆಗಿವೆ. ಇದು ೧೯ನೇ ಶತಮಾನದ ರೈಲ್ವೆ ವಾಸ್ತು ಮಾದರಿಯಾಗಿದೆ.

**೨೬. ಚಂಪಾನೇರ್-ಪಾವಾಗಡ್ ಸ್ಮಾರಕಗಳು** : ಗುಜರಾತ್ ರಾಜ್ಯದ ಪಂಚಮಹಲ್ ಜಿಲ್ಲೆಯಲ್ಲಿರುವ ಪಾವಾಗಡ್ ಎಂಬುವುದು ಒಂದು ಬೆಟ್ಟ, ಇದರ ಮಡಿನಲ್ಲಿಯೇ ಚಂಪಾನೇರ್ ಇದೆ. ಇದನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೨೦೦೪ ರಲ್ಲಿ ಘೋಷಿಸಿದೆ. ಪಾವಾಗಡ್ ಬೆಟ್ಟ ಕೆಂಪು ಮಿಶ್ರಿತ ಹಳದಿ ಬಣ್ಣದ ಕಲ್ಲಿನಿಂದ ಕೂಡಿದೆ. ಜತೆಗೆ ಭಾರತದ ಅತ್ಯಂತ ಹಳೆಯ ಕಾಲದಲ್ಲಿ ಹಿಂದೂಗಳ ಪವಿತ್ರ ಸ್ಥಳವಾಗಿತ್ತು. ನಂತರದಲ್ಲಿ ಕ್ರಿ.ಶ. ೧೪೮೪ರಲ್ಲಿ ಸುಲ್ತಾನ್ ಮಹಮದ್ ಬೆಗ್ರಾಮ್ ಈ ಪ್ರದೇಶವನ್ನು ವಶಪಡಿಸಿಕೊಂಡ.[೫೪] ಪಾವಾಗಡಕ್ಕೆ ಮಹಮದಾಬಾದ್ ಎಂದು ಮರುನಾಮಕರಣ ಮಾಡಿದ ಈ ಬಗ್ಗೆ ಪಾವಾಗಡ್ ಬೆಟ್ಟದಲ್ಲಿರುವ ಶಾಸನವೊಂದು ತಿಳಿಸುತ್ತದೆ. ಇವನು ಮಸೀದಿ, ದರ್ಗಾಗಳನ್ನು ಕಟ್ಟಿಸಿದ. ಇಲ್ಲಿರುವ ಜಾಮೀಯಾ ಮಸೀದಿಯು ಅನುಪಮ ಕಟ್ಟಡ ಇದು ಸುಂದರವಾದ ಕತ್ತನೆ ಹಾಗೂ ೧೭೨ ಸ್ತಂಭಗಳನ್ನು ಹೊಂದಿದೆ.

**೨೭. ಕೆಂಪು ಕೋಟೆ** : ದೆಹಲಿಯಲ್ಲಿರುವ ಕೆಂಪುಕೋಟೆಯನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು (೨೦೦೭) ಘೋಷಿಸಿದೆ. ಕೆಂಪುಕೋಟೆ ಆವರಣದಲ್ಲಿ ಅರಮನೆ, ಮಸೀದಿಗಳು, ಗ್ಯಾಲರಿಗಳನ್ನು ನಿರ್ಮಾಣ ಮಾಡಲಾಗಿದೆ. ಮುಖ್ಯವಾಗಿ ದಿವಾನ್-ಇ-ಅಮ್, ಮುಮ್ತಾಜ್ ಮಹಲ್, ರಂಗಮಹಲ್, ಮುಮ್ತಾಜ್ ಬುರ್ಜ್ ಹಾಗೂ ಜಾಮೀಯಾ ಮಸೀದಿ.[೫೫] ಷಾಹಜಾನನ ಕಾಲದ ಪ್ರಮುಖ ಸ್ಮಾರಕಗಳಲ್ಲಿ ಒಂದಾದ ಜಾಮೀಯಾ ಮಸೀದಿಯನ್ನು ಕ್ರಿ.ಶ. ೧೬೪೪ ರಲ್ಲಿ ಕಟ್ಟಲು ಆರಂಭಿಸಿ ಒಂದು ವರ್ಷದ ಅವಧಿಯಲ್ಲಿ ಪೂರ್ಣಗೊಳಿಸಿದ. ಇದು ಚೌಕಾಕಾರದಲ್ಲಿದ್ದು, ನೀರಿನ ಮಧ್ಯದಲ್ಲಿ ೧೦೦ ಮೀಟರ್ ವಿಸ್ತೀರ್ಣದಲ್ಲಿ ಕಟ್ಟಲಾಗಿದೆ. ದೇಶದ

ದೊಡ್ಡ ಮಸೀದಿಗಳಲ್ಲಿ ಜಾಮೀ ಮಸೀದಿ ಕೂಡ ಸ್ಥಾನ ಪಡೆದಿದೆ. ಇದರ ನಿರ್ಮಾಣಕ್ಕೆ ಕಪ್ಪು ಮತ್ತು ಬಿಳಿ ಬಣ್ಣದ ಅಮೃತಶಿಲೆ ಬಳಸಲಾಗಿದೆ.

**೨೮. ಜಂತರ್ ಮಂತರ್, ಜೈಪುರ** : ರಾಜಸ್ಥಾನ ರಾಜ್ಯದ ಜೈಪುರ ಜಿಲ್ಲೆಯ ಜಂತರ್ ಮಂತರ್‌ನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೨೦೧೦ ರಲ್ಲಿ ಘೋಷಿಸಿದೆ. ಕ್ರಿ.ಶ. ೧೭೩೪ ರ ಜಂತರ್ ಮಂತರ್ ಜೈಪುರದ ಸಿಟಿ ಪ್ಯಾಲೇಸ್ ಹಾಗೂ ಹವಾ ಅರಮನೆ ಬಳಿಯಿದೆ. ಇದನ್ನು ರಜಪೂತರ ರಾಜ ಎರಡನೇ ಜೈಸಿಂಗ್ ಕಟ್ಟಿಸಿದನು. ಪುರಾತನ ಗಣಿತ ಲೆಕ್ಕಾಚಾರ ಹಾಗೂ ಖಗೋಳ ವಿಜ್ಞಾನಕ್ಕೆ ಸಂಬಂಧಿಸಿದ ಶೈಲಿಯಲ್ಲಿ ಸ್ಮಾರಕಗಳ ನಿರ್ಮಿಸಲಾಗಿದೆ. ಸಂಸ್ಕೃತದಲ್ಲಿ ಜಂತರ್ ಎಂದರೆ ಯಂತ್ರ ಹಾಗೂ ಮಂತರ್ ಎಂದರೆ ಮಂತ್ರಣ ಎನ್ನುತ್ತಿದ್ದರು. ಸಾಕ್ಷರತೆ ಬೆಳೆದಂತೆ ಜಂತರ್ ಮಂತರ ಎಂದರೆ ಲೆಕ್ಕಚಾರ ಸಾಧನ ಎಂದು ಕರೆಯಲಾರಂಭಿಸಿದ್ದನ್ನು ಗಮನಿಸಬಹುದು.[೫೬] ಇಲ್ಲಿರುವ ಯಂತ್ರಗಳೆಂದರೆ ಚಕ್ರಯಂತ್ರ, ದಿಗಾಂಶ ಯಂತ್ರ, ಧ್ರುವ ದರ್ಶಕ್ ಪಟ್ಟಿಕಾ, ಕಪಾಲಿ ಯಂತ್ರ, ಕ್ರಾಂಲೆ ವೃತ್ತಯಂತ್ರ, ಮಿಶ್ರಾಯಂತ್ರ, ಪಲ್ಭಯಂತ್ರ ರಾಶಿವಲಯ ಯಂತ್ರ ಮುಂತಾದವು.

**೨೯. ಪಶ್ಚಿಮ ಘಟ್ಟಗಳು** : ಭಾರತದ ಪಶ್ಚಿಮ ಘಟ್ಟಗಳನ್ನು ಯುನೆಸ್ಕೋ ನೈಸರ್ಗಿಕ ತಾಣವೆಂದು ೨೦೧೨ ರಲ್ಲಿ ಘೋಷಿಸಿದೆ. ಭಾರತವು ವೈವಿಧ್ಯಮಯ ಪರಿಸರವನ್ನು ಹೊಂದಿದೆ. ಎತ್ತರದಲ್ಲಿ ಹಿಮಾಲಯ ಪರ್ವತ ಹಾಗೂ ಉಳಿದ ಮೂರು ಕಡೆಗಳಲ್ಲಿ ಸಮುದ್ರದ ನೀರಿನಿಂದ ಆವೃತ್ತವಾಗಿದೆ. ಇವುಗಳ ನಡುವೆಯೇ ಅಪಾರ ಅರಣ್ಯ ಸಂಪತ್ತನ್ನು ಒಳಗೊಂಡಿದೆ. 'ಸಹ್ಯಾದ್ರಿ ಬೆಟ್ಟಗಳ ಸಾಲುಗಳಿವೆ'.[೫೭] ಗುಜರಾತಿನ ತಪತಿ ನದಿಯಿಂದ ಆರಂಭವಾಗಿ ತಮಿಳುನಾಡಿನ ಕನ್ಯಾಕುಮಾರಿವರೆಗೂ ಪಶ್ಚಿಮ ಬೆಟ್ಟಗಳ ಸಾಲು ವಿಸ್ತರಿಸಿವೆ. ಗುಜರಾತ್, ಮಹಾರಾಷ್ಟ್ರ, ಗೋವಾ, ಕರ್ನಾಟಕ, ಕೇರಳ, ಹಾಗೂ ತಮಿಳುನಾಡು ರಾಜ್ಯಗಳಲ್ಲಿ ಹರಡಿಕೊಂಡಿವೆ. ರಾಜ್ಯದ ಬೆಳಗಾವಿ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಚಿಕ್ಕಮಂಗಳೂರು, ಶಿವಮೊಗ್ಗ, ಉಡುಪಿ, ಕೊಡಗು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ವ್ಯಾಪಿಸಿದೆ.[೫೮] ಜಾಗತಿಕ ಮಟ್ಟದಲ್ಲಿ ಅಪಾಯದಂಚಿನಲ್ಲಿರುವ ೩೨೫ಕ್ಕೂ ಹೆಚ್ಚಿನ ಪ್ರಾಣಿ-ಪಕ್ಷಿ ಪ್ರಭೇದ ಪಶ್ಚಿಮ ಘಟ್ಟಗಳ ಸಾಲಿನಲ್ಲಿ ಕಂಡುಬರುತ್ತವೆ.

**೩೦. ರಾಜಸ್ಥಾನದ ಕೋಟೆಗಳು** : ರಾಜಸ್ಥಾನದ ಹಲವು ಕೋಟೆಗಳನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೨೦೧೩ ರಲ್ಲಿ ಘೋಷಿಸಿದೆ. ಕ್ರಿ.ಶ. ೧೧೫೬ರಲ್ಲಿ ರಜಪೂತ ದೊರೆ ರಾವ್ ಜೈಸಲ್ ಜೈಸಲ್ಮೇರ್ ಕೋಟೆಯನ್ನು ಕಟ್ಟಿಸಿದ ತ್ರಿಕೂಟ ಬೆಟ್ಟದಲ್ಲಿರುವ ಈ ಕೋಟೆ

ಜಗತ್ತಿನ ವಿಶಾಲವಾದ ಕೋಟೆಗಳಲ್ಲಿ ಒಂದಾಗಿದೆ. ಇಂದು ಈ ಪ್ರದೇಶವನ್ನು ಜೈಸಲ್ಮೇರ್ ನಗರ ಎಂದು ಕರೆಯುತ್ತಾರೆ.[೫೯] ರಾಜಸ್ಥಾನದ ರಾಜಧಾನಿ ಜೈಪುರದಿಂದ ೧೧ ಕಿ.ಮೀ ದೂರದಲ್ಲಿ ೪ ಚ.ಕಿ.ಮೀ ವಿಸ್ತೀರ್ಣದಲ್ಲಿ ಚಾಚಿಕೊಂಡಿರುವ ಕೋಟೆ ಅಂಚೇರ್ ಕೋಟೆ ರಾಜ್ ಸಮಂತ್ ಜಿಲ್ಲೆಯ ಅರಾವಳಿ ಬೆಟ್ಟದಲ್ಲಿ ಕುಂಭಲ್‌ಗಡ ಕೋಟೆ ಸ್ಥಾಪಿತವಾಗಿದೆ. ಇದೇ ಬೆಟ್ಟದಲ್ಲಿಯೇ ಗರ್ಗೊನ್ ಕೋಟೆ ಕೂಡಾ ನಿರ್ಮಾಣವಾಗಿರುವುದು.

**೩.೧. ಹಿಮಾಲಯನ್ ನ್ಯಾಷನಲ್ ಪಾರ್ಕ್** : ಹಿಮಾಚಲ ಪ್ರದೇಶದ ಹಿಮಾಚಲಯ ಪರ್ವತಗಳ ಪಶ್ಚಿಮ ಭಾಗದಲ್ಲಿರುವ ಈ ರಾಷ್ಟ್ರೀಯ ಉದ್ಯಾನವನವು ಹೆಚ್ಚಿನದಾಗಿ ಆಲ್ವೈನ್ ಶಿಖರಗಳಿಂದ ಕೂಡಿದ್ದು. ಯುನೆಸ್ಕೋ ಇದನ್ನು ನೈಸರ್ಗಿಕ ತಾಣವೆಂದು ೨೦೧೪ ರಲ್ಲಿ ಘೋಷಿಸಿದೆ. ವಿಶೇಷವಾಗಿ ಆಲ್ವೈನ್ ಹುಲ್ಲುಗಾವಲುಗಳು ಮತ್ತು ನದಿಗಳ ಕಾಡುಗಳಿಂದ ನಿರ್ಮಾಣಗೊಂಡಿದೆ. ೯೦.೫೪೦ ಹೆಕ್ಟೇರ್[೬೦] ಪ್ರದೇಶಗಳು ಮೇಲ್ಭಾಗದ ಪರ್ವತದ ಹಿಮನದಿ ಮತ್ತು ಹಿಮದ ಕರಗಿಸುವ ನೀರನ್ನು ಅನೇಕ ನದಿಗಳ ಮತ್ತು ನೀರಿನ ಸರಬರಾಜಿನ ಸಂಗ್ರಹಗಳು ಲಕ್ಷಾಂತರ ಕೆಳಮಟ್ಟದ ಬಳಕೆದಾರರಿಗೆ ಅತ್ಯಗತ್ಯವಾಗಿದೆ.

**೩.೨. ರಾಣಿ–ಕಿ–ವಾವ್** : ಸರಸ್ವತಿ ನದಿ ದಂಡೆಯ ಮೇಲಿರುವ ರಾಣಿ–ಕಿ–ವಾವನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೨೦೧೪ ರಲ್ಲಿ ಘೋಷಿಸಿದೆ. ಇದನ್ನು ಗುರ್ಜರ ವಾಸ್ತುಶಿಲ್ಪದ ಶೈಲಿಯಲ್ಲಿ ನಿರ್ಮಿಸಲಾಗಿದೆ.[೬೧] ೧೧ನೇ ಶತಮಾನದಲ್ಲಿ ಇಲ್ಲಿನ ರಾಜನಿಗೆ ಸ್ಮಾರಕವಾಗಿ ಕಟ್ಟಲ್ಪಟ್ಟಿತು. ನೆಲದಡಿಯ ನೀರಿನ ಸಂಪನ್ಮೂಲ ಮತ್ತು ಶೇಖರಣಾ ವ್ಯವಸ್ಥೆಗಳ ಒಂದು ವಿಶಿಷ್ಟವಾದ ರೂಪವಾಗಿದೆ. ಮರಳು ಮಣ್ಣಿನಲ್ಲಿ ಕಲಾ ಮತ್ತು ವಾಸ್ತುಶಿಲ್ಪದ ವಿಸ್ತಾರವಾದ ಮಲ್ಟಿ–ಸ್ಟೋರ್‌ಗಳ ಕಡೆಗೆ ಮೂಲಭೂತವಾಗಿ ವಿಕಾಸನಗೊಂಡಿತು.

**೩.೩. ನಳಂದಾದ ಮಹಾ ವಿಹಾರ ಪುರಾತತ್ವ ತಾಣ** : ಬಿಹಾರ ರಾಜ್ಯದಲ್ಲಿನ ನಳಂದ ಮಹಾ ವಿಹಾರ ತಾಣವನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೨೦೧೬ ರಲ್ಲಿ ಘೋಷಿಸಿದೆ. ಇದು ಕ್ರಿ.ಪೂ. ೩ ರಿಂದ ಕ್ರಿ.ಶ. ೧೩ನೇ ಶತಮಾನ ವರೆಗಿನ ಸನ್ಯಾಸಿ ಮತ್ತು ಪಾಂಡಿತ್ಯದ ಸಂಸ್ಥೆಗಳ ಪುರಾತತ್ವ ಅವಶೇಷಗಳನ್ನು ಒಳಗೊಂಡಿದೆ.[೬೨] ಇದರಲ್ಲಿ ಸ್ತೂಪಗಳು, ವಿಹಾರಗಳು, ವಸತಿ ಮತ್ತು ಶೈಕ್ಷಣಿಕ ಕಟ್ಟಡಗಳು, ಲೋಹದ ಪ್ರಮುಖ ಕಲಾಕೃತಿಗಳು ಸೇರಿವೆ. ನಳಂದ ಭಾರತ ಉಪಖಂಡದ ಅತ್ಯಂತ ಪುರಾತನ ವಿಶ್ವವಿದ್ಯಾನಿಲಯವಾಗಿದೆ. ಇದು ೮೦೦ ವರ್ಷಗಳ ನಿರಂತರ ಅವಧಿ ವರೆಗೆ ಜ್ಞಾನದ ಸಂಘಟಿತ ಪ್ರಸರಣದಲ್ಲಿ ತೊಡಗಿತು. ಈ ಸಾಂಸ್ಕೃತಿಕ ತಾಣವು ಐತಿಹಾಸಿಕ ಬೆಳವಣಿಗೆ ಬೌದ್ಧಧರ್ಮವನ್ನು ಒಂದು ಧರ್ಮವಾಗಿ

ಅಭಿವೃದ್ಧಿ ಪಡಿಸುವುದಕ್ಕೆ ಮತ್ತು ಸನ್ಯಾಸಿ ಮತ್ತು ಶೈಕ್ಷಣಿಕ ಸಂಪ್ರದಾಯಗಳ ಪ್ರವರ್ಧಮಾನಕ್ಕೆ ಸಾಕ್ಷಿಯಾಗಿದೆ.

೩೪. **ಕಾಂಚನಜುಂಗಾ ರಾಷ್ಟ್ರೀಯ ಉದ್ಯಾನ** : ಸಿಕ್ಕಿಂ ರಾಜ್ಯದ ಹಿಮಾಲಯ ಪರ್ವತ ಶ್ರೇಣಿಯ ಹೃದಯಭಾಗದಲ್ಲಿರುವ ಕಾಂಚನಜುಂಗಾ ರಾಷ್ಟ್ರೀಯ ಉದ್ಯಾನವನವನ್ನು ಯುನೆಸ್ಕೋ ಸಾಂಸ್ಕೃತಿಕ ಮತ್ತು ನೈಸರ್ಗಿಕವಾಗಿ ಎರಡು ಒಗ್ಗೂಡಿದ ಮಿಶ್ರ ತಾಣವಾಗಿ ೨೦೧೬ ರಲ್ಲಿ ಘೋಷಿಸಿದೆ. ಭಾರತದ ಏಕೈಕ ಮಿಶ್ರತಾಣ ಇದೊಂದೆ. ಈ ರಾಷ್ಟ್ರೀಯ ಉದ್ಯಾನವು ಸಮೃದ್ಧವಾದ, ಬಯಲು ಪ್ರದೇಶಗಳು, ಕಣಿವೆಗಳು, ಸರೋವರಗಳು, ಹಿಮನದಿಗಳು ಮತ್ತು ಅದ್ಭುತವಾದ, ಹಿಮದಿಂದ ಆವೃತವಾದ ಪರ್ವತಗಳನ್ನು ಒಳಗೊಂಡಿದ್ದು, ಪುರಾತನ ಕಾಡುಗಳಿಂದ ಆವೃತವಾಗಿದೆ. ಕಾಂಚನಜುಂಗಾದ ಪೌರಾಣಿಕ ಕಥೆಗಳು, ಈ ಪರ್ವತದೊಂದಿಗೆ ಸಿಕ್ಕಿಂನ ಸ್ಥಳೀಯ ಜನರು ಹೊಂದಿರುವ ಗಾಢವಾದ ಸಂಬಂಧಗಳನ್ನು ಆರಾಧಿಸುವ ದೊಡ್ಡ ಸಂಖ್ಯೆಯ ಸಮುದಾಯಗಳು ನೈಸರ್ಗಿಕ ಅಂಶಗಳೊಂದಿಗೆ ಹೊಂದಿರುವ ಸಂಬಂಧಗಳನ್ನು ಹೇಳುತ್ತವೆ.[೬೩] ಈ ಕಥೆಗಳ ಮತ್ತು ಪದ್ಧತಿಗಳ ಪವಿತ್ರ ಅರ್ಥಗಳು ಬೌದ್ಧ ನಂಬಿಕೆಗಳೊಂದಿಗೆ ಸಂಯೋಜಿಸಲ್ಪಟ್ಟವು.

೩೫. **ಐತಿಹಾಸಿಕ ಅಹ್ಮದಾಬಾದ್ ನಗರ** : ಗುಜರಾತ್ ರಾಜ್ಯದ ಅಹ್ಮದಾಬಾದ್ ನಗರವನ್ನು ಯುನೆಸ್ಕೋ ಸಾಂಸ್ಕೃತಿಕ ತಾಣವೆಂದು ೨೦೧೭ ರಲ್ಲಿ ಘೋಷಿಸಿದೆ. ಗುಜರಾತ್‌ನ ಐತಿಹಾಸಿಕ ನಗರ ಅಹ್ಮದಾಬಾದ್ ಕ್ರಿ.ಶ. ೧೪೧೧ ರಲ್ಲಿ ಮುಜಾಫರೀದ್ ಮನೆತನದ 'ಅಹ್ಮದ್ ಷಾ' ಸ್ಥಾಪಿಸಿದ್ದನು ಎನ್ನಲಾಗಿದೆ. ಈ ನಗರದ ಸುತ್ತಲೂ ಗೋಡೆ ನಿರ್ಮಿಸಲಾಗಿದ್ದು "ಗೋಡೆಗಳ ನಗರ"ವೆಂದೂ ಕರೆಯಲಾಗುತ್ತದೆ. ಈ ನಗರಕ್ಕೆ ೧೨ ಗೇಟ್‌ಗಳು, ೧೮೯ ಬುರುಜ್‌ಗಳು ಹಾಗೂ ಸುಮಾರು ೨೦೦೦ಕ್ಕೂ ಹೆಚ್ಚು ಕೋಟೆಗಳಿಂದ ನಿರ್ಮಾಣವಾಗಿದ್ದುದರ ಕುರಿತು ತಿಳಿಯುತ್ತದೆ.[೬೪] ಸಾಂಪ್ರದಾಯಿಕ ಶೈಲಿಯಲ್ಲಿ ನಿರ್ಮಾಣಗೊಂಡಿರುವ ಮನೆಗಳು, ಸಾಂಪ್ರದಾಯಿಕ ಸೊಗಡಿನಿಂದ ಕೂಡಿರುವ ಬೀದಿಗಳು, ಸಾರ್ವಜನಿಕ ಬಾವಿಗಳು, ಧಾರ್ಮಿಕ ಸಂಸ್ಥೆಗಳು ಅಹ್ಮದಾಬಾದ್ ನಗರದ ಕೀರ್ತಿ ಬೆಳಗಿಸಿವೆ.

೩೬. **ವಿಕ್ಟೋರಿಯನ್ ಗೋಥಿಕ್ ಮತ್ತು ಮುಂಬೈನ ಆರ್ಟ್ ಡೆಕೊ ಎನ್ಸೆಂಬಲ್ಸ್** : ಜಾಗತಿಕ ವ್ಯಾಪಾರ ಕೇಂದ್ರವಾದ ಮುಂಬೈ ನಗರವು ಮಹತ್ವಾಕಾಂಕ್ಷೆಯ ನಗರ ಯೋಜನೆಯನ್ನು ೧೯ ನೇ ಶತಮಾನದ ದ್ವಿತೀಯಾರ್ಧದಲ್ಲಿ ಜಾರಿಗೆ ತಂದಿತು. ಇದು ಓವಲ್ ಮೈದಾನದ ಮುಕ್ತ ಜಾಗದ ಗಡಿಯಲ್ಲಿರುವ ಸಾರ್ವಜನಿಕ ಕಟ್ಟಡಗಳ ಮೇಳಗಳ ನಿರ್ಮಾಣಕ್ಕೆ ಕಾರಣವಾಯಿತು.

ಮೊದಲು ವಿಕ್ಟೋರಿಯನ್ ನಿಯೋ–ಗೋಥಿಕ್ ಶೈಲಿಯಲ್ಲಿ ಮತ್ತು ನಂತರ, ೨೦ ನೇ ಶತಮಾನದ ಆರಂಭದಲ್ಲಿ, ಆರ್ಟ್ ಡೆಕೊ ಶೈಲಿಯಲ್ಲಿದೆ. ವಿಕ್ಟೋರಿಯನ್ ಸಮೂಹವು ಭಾರತೀಯ ಹವಾಮಾನಕ್ಕೆ ಸೂಕ್ತವಾದ ಅಂಶಗಳನ್ನು ಒಳಗೊಂಡಿರುವುದು. ಇದರಲ್ಲಿ ಬಾಲ್ಕನಿಗಳು ಮತ್ತು ವರಾಂಡಾಗಳು ಸೇರಿವೆ. ಆರ್ಟ್ ಡೆಕೊ ಕಟ್ಟಡಗಳು, ಅವುಗಳ ಚಿತ್ರಮಂದಿರಗಳು ಮತ್ತು ವಸತಿ ಕಟ್ಟಡಗಳೊಂದಿಗೆ, ಭಾರತೀಯ ವಿನ್ಯಾಸವನ್ನು ಆರ್ಟ್ ಡೆಕೊ ಚಿತ್ರಣದೊಂದಿಗೆ ಸಂಯೋಜಿಸಿ, ಇಂಡೋ–ಡೆಕೊ ಎಂದು ವಿವರಿಸಿರುವ ವಿಶಿಷ್ಟ ಶೈಲಿಯನ್ನು ಸೃಷ್ಟಿಸುತ್ತದೆ. ಈ ಎರಡು ಮೇಳಗಳು ೧೯ ಮತ್ತು ೨೦ ನೇ ಶತಮಾನಗಳಲ್ಲಿ ಮುಂಬೈ ಅನುಭವಿಸಿದ ಆಧುನೀಕರಣದ ಹಂತಗಳಿಗೆ ಸಾಕ್ಷಿಯಾಗಿದೆ.

**೩೭. ಜೈಪುರ ನಗರ, ರಾಜಸ್ಥಾನ :** ಭಾರತದ ವಾಯುವ್ಯ ರಾಜ್ಯವಾದ ರಾಜಸ್ಥಾನದಲ್ಲಿರುವ ಜೈಪುರದ ಕೋಟೆಯನ್ನು ೧೭೨೭ರಲ್ಲಿ ಎರಡನೇ ಸವಾಯಿ ಜೈ ಸಿಂಗ್ ಸ್ಥಾಪಿಸಿದರು. ಗುಡ್ಡಗಾಡು ಪ್ರದೇಶದಲ್ಲಿರುವ ಈ ಪ್ರದೇಶ ಇತರ ನಗರಗಳಿಗಿಂತ ಭಿನ್ನವಾಗಿ ನಿರ್ಮಿಸಲಾಗಿದೆ. ಇಲ್ಲಿನ ಬೀದಿಗಳಲ್ಲಿ ನಿರಂತರವಾದ ವ್ಯವಹಾರಗಳಿವೆ, ಅದು ಮಧ್ಯದಲ್ಲಿ ಚೌಪರ್ ಎಂದು ಕರೆಯಲ್ಪಡುವ ದೊಡ್ಡ ಸಾರ್ವಜನಿಕ ಚೌಕಗಳನ್ನು ಸೃಷ್ಟಿಸುತ್ತದೆ. ಮುಖ್ಯ ಬೀದಿಗಳಲ್ಲಿ ನಿರ್ಮಿಸಲಾದ ಮಾರುಕಟ್ಟೆಗಳು, ಸ್ಟಾಲ್‌ಗಳು, ನಿವಾಸಗಳು ಮತ್ತು ದೇವಾಲಯಗಳು ಏಕರೂಪದ ಮುಂಭಾಗಗಳನ್ನು ಹೊಂದಿವೆ. ಇದರಲ್ಲಿ ನಗರ ಯೋಜನೆ ಪ್ರಾಚೀನ ಹಿಂದೂ ಮತ್ತು ಮಧ್ಯಕಾಲೀನ ಮೊಘಲ್ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ವಿಚಾರ ವಿನಿಮಯವನ್ನು ತೋರಿಸುತ್ತದೆ. ಗ್ರಿಡ್ ಯೋಜನೆ ಪಶ್ಚಿಮದಲ್ಲಿ ಚಾಲ್ತಿಯಲ್ಲಿರುವ ಒಂದು ಮಾದರಿಯಾದರೆ, ವಿವಿಧ ಜಿಲ್ಲೆಗಳ ಸಂಘಟನೆಯು ಸಾಂಪ್ರದಾಯಿಕ ಹಿಂದೂ ಪರಿಕಲ್ಪನೆಗಳನ್ನು ಸೂಚಿಸುತ್ತದೆ. ವಾಣಿಜ್ಯ ರಾಜಧಾನಿಯಾಗಿ ವಿನ್ಯಾಸಗೊಳಿಸಲಾಗಿರುವ ಈ ನಗರವು ತನ್ನ ಸ್ಥಳೀಯ ವಾಣಿಜ್ಯ, ಕುಶಲಕರ್ಮಿ ಮತ್ತು ಸಹಕಾರಿ ಸಂಪ್ರದಾಯಗಳನ್ನು ಇಂದಿಗೂ ಉಳಿಸಿಕೊಂಡಿದೆ.

**ಕರ್ನಾಟಕ :**

ಯುನೆಸ್ಕೋ ಪ್ರಪಂಚದ ಹಲವು ದೇಶಗಳಲ್ಲಿ ವಿಶ್ವಪರಂಪರೆಯ ತಾಣಗಳನ್ನು ಗುರುತಿಸಿತು. ಅಳಿವಿನ ಅಂಚಿನಲ್ಲಿರುವ, ಮುಖ್ಯವಾದ ಸ್ಮಾರಕಗಳು ಹಾಗೂ ತಾಣಗಳನ್ನು ಗುರುತಿಸಿ ಪರಂಪರೆ ಪಟ್ಟಿಯಲ್ಲಿ ಸೇರಿಸಿದೆ. ಇಂತಹ ವಿಶ್ವ ಪಾರಂಪರಿಕ ತಾಣಗಳು ಭಾರತದ ಉದ್ದಗಲಕ್ಕೂ ಹರಡಿವೆ. ಹಾಗೆಯೇ ಕರ್ನಾಟಕದಲ್ಲಿನ ಎರಡು ಸ್ಥಳಗಳು ವಿಶ್ವ ಪರಂಪರೆಯ

ಪಟ್ಟಿಯಲ್ಲಿವೆ. ಇತಿಹಾಸ ಪ್ರಸಿದ್ಧವಾದ ನಗರ ಅವಶೇಷಗಳಲ್ಲಿ ಹಂಪಿಯು ಪ್ರಮುಖವೆಂದರೆ ಉತ್ಪ್ರೇಕ್ಷೆಯಾಗಲಾರದು. ಈ ಮಹಾನಗರದ ಅಶೇಷಗಳು ವಿಶ್ವ ಸಂಸ್ಕೃತಿಗೆ ಸೇರಿದ ಅವಿಚ್ಛಿನ್ನ ಭಾಗವೆಂದೂ ಸಂಯುಕ್ತ ರಾಷ್ಟ್ರದ ಸಾಂಸ್ಕೃತಿಕ ಅಂಗವಾದ ಯುನೆಸ್ಕೋ ಮಾನ್ಯತೆ ನೀಡಿದೆ. ಸುಮಾರು ೧೦-೧೨ ವರ್ಷಗಳಿಂದ ಭಾರತ ಮತ್ತು ಕರ್ನಾಟಕ ಸರ್ಕಾರಗಳ ಪ್ರಾಚ್ಯ ಸಂಶೋಧನಾ ಇಲಾಖೆಗಳು ನಡೆಸಿರುವ ಭೂ ಸಂಶೋಧನೆಯಿಂದ ಇದುವರೆಗೂ ಬೆಳಕಿಗೆ ಬರದಿದ್ದ ಅನೇಕ ಕಟ್ಟಡಗಳು ಮತ್ತು ಇತರ ಅವಶೇಷ ವೈಶಿಷ್ಟ್ಯಗಳು ಬೆಳಕಿಗೆ ಬಂದಿವೆ. ಯುನೆಸ್ಕೋ ೧೯೮೬ರಲ್ಲಿ ಹಂಪಿಯನ್ನು ವಿಶ್ವ ಪಾರಂಪರಿಕ ತಾಣಗಳ ಪಟ್ಟಿಗೆ ಸೇರ್ಪಡೆ ಮಾಡಿಕೊಂಡಿತು. ಹಾಗೆಯೇ ಬಾದಾಮಿಗೆ ೧೦ ಮೈಲಿ ದೂರದಲ್ಲಿರುವ ಪಟ್ಟದಕಲ್ಲು ಬಾದಾಮಿ ಚಾಲುಕ್ಯರ ವಾಸ್ತುಶಿಲ್ಪದ ತವರು ಮನೆಯಾಗಿದೆ. ಚಾಲುಕ್ಯರ ರಾಜರಿಗೆ ಇಲ್ಲಿ ಪಟ್ಟಭಿಷೇಕವಾಗುತ್ತಿದ್ದುದರಿಂದ ಇದಕ್ಕೆ ಪಟ್ಟದಕಲ್ಲು ಎಂಬ ಹೆಸರಾಯಿತು. ಪಟ್ಟದಕಲ್ಲು ಚಾಲುಕ್ಯರ ವಾಸ್ತಿಶಿಲ್ಪದ ಕೇಂದ್ರವಾಗಿತ್ತು. ಹೀಗೆ ಸಾವಿರಾರು ವರ್ಷಗಳಷ್ಟು ಐತಿಹಾಸಿಕ ಕಲೆ ಹೊಂದಿರುವ ಪಟ್ಟದಕಲ್ಲನ್ನು ಯುನೆಸ್ಕೋ ೧೯೮೭ ರಲ್ಲಿ ವಿಶ್ವಪಾರಂಪರಿಕ ತಾಣವಾಗಿ ಅಂಗೀಕರಿಸಿತು.

**೧. ಹಂಪಿಯ ಸ್ಮಾರಕ ಸಮೂಹ :**

ಭಾರತದಲ್ಲಿ ಚಾರಿತ್ರಿಕ ಮಹತ್ವ, ಕಲೆ ಮತ್ತು ವಾಸ್ತುಶಿಲ್ಪಗಳು ಸೇರಿದಂತೆ ಇನ್ನಿತರೆ ಸಾಂಸ್ಕೃತಿಕ ವಿಷಯಗಳ ಕುರಿತಂತೆ ತನ್ನದೇ ಆದ ವೈಶಿಷ್ಟ್ಯತೆಯನ್ನು ಹೊಂದಿರುವ ತಾಣ ಹಂಪಿ. ಯುನೆಸ್ಕೋ ಈ ತಾಣವನ್ನು ೧೯೮೬ರಲ್ಲಿ ವಿಶ್ವ ಪರಂಪರೆ ಪಟ್ಟಿಯಲ್ಲಿ ಸೇರಿಸಿದೆ.[೬೫] ಇತಿಹಾಸ ವಿಮರ್ಶಕರು ಹಂಪಿಯನ್ನು "ಭಾರತದ ಪಾಂಪೆ" ಎಂದೇ ಬಣ್ಣಿಸಿದ್ದಾರೆ. ಪಾಂಪೆ ಎಂದರೆ ಪ್ರಾಚೀನ ರೋಮನ್ ಸಾಮ್ರಾಜ್ಯದ ನಶಿಸಿಹೋದ ಮಹಾನ್ ನಗರ ಎಂದು ವಿಶ್ಲೇಷಿಸಲಾಗಿದೆ. ನಿಕೊಲೊ ಕೊಂಟಿ, ಅಬ್ದುಲ್ ರಜಾಕ್, ಬಾರ್ಬೋಡಾಸ್ ಮತ್ತು ಡೊಮಿಂಗೊ ಪಯಾಸ್‌ರಂತಹ ವಿದೇಶಿ ರಾಯಭಾರಿಗಳು ಮತ್ತು ಯಾತ್ರಿಕರು ಹಂಪೆಯನ್ನು ಆಗೀನ ವಿಶ್ವದ ಶ್ರೇಷ್ಠ ಶಿಲ್ಪಿಕಲೆಯ ಬೀಡು ಎಂದು ತಮ್ಮ ಗ್ರಂಥಗಳಲ್ಲಿ ದಾಖಲಿಸಿದ್ದಾರೆ.[೬೬] ಪ್ರಾಚೀನ ಕಾಲದಲ್ಲಿ ಪಂಪಾ ಎಂದು ಕರೆಯಲ್ಪಡುತ್ತಿದ್ದ ಹಂಪೆ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯಲ್ಲಿ ರಾಜಧಾನಿಯಾಗಿತ್ತು. ಸಂಗಮ, ಸಾಳುವ, ತುಳುವ ಮತ್ತು ಅರವೀಡು ಸಂತತಿಗಳಿಂದ ಆಳಲ್ಪಟ್ಟ ನಗರವು ಭಾರತದ ಇತಿಹಾಸಕ್ಕೆ ತನ್ನದೇ ಕೊಡುಗೆ ನೀಡಿದೆ.

ವಿಜಯನಗರ ಅರಸರ ಕಾಲದಲ್ಲಿ ಹಂಪೆಯಲ್ಲಿನ ಆಗುಹೋಗುಗಳು ವಿದೇಶಗಳಲ್ಲಿಯೂ ಚರ್ಚಿತವಾಗುತ್ತಿದ್ದವು. ಆಗ ಸಾಮ್ರಾಜ್ಯ ಎಷ್ಟೊಂದು ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂದು ತಿಳಿಯುತ್ತದೆ. ಆಗ ಹಂಪೆಯ ಪೇಟೆಯಲ್ಲಿ ಆಭರಣ ವರ್ತಕರು ನಿರ್ಭೀತರಾಗಿ ಮುತ್ತು, ರತ್ನ ಮತ್ತು ಪಚ್ಚೆಗಳನ್ನು ಮಾರಾಟ ಮಾಡುತ್ತಿದ್ದರು. ಹಂಪೆ ಬಜಾರು, ವಿಠ್ಠಲ ಬಜಾರ್, ಅಚ್ಯುತರಾಯ ಬಜಾರ್, ಹಜಾರ ರಾಮ್ ಬಜಾರ್ ಅಂಗಡಿ ಸಾಲುಗಳು ಮುತ್ತು ರತ್ನ ಮಾರುವಿಕೆಯ ಕೇಂದ್ರಗಳೆಂದು ಪ್ರವಾಸಿಗರಿಗೆ ಇಂದಿಗೂ ಪರಿಚಿತವಾಗಿದೆ.[೬೭] ೧೬ ಅಡಿ ಎತ್ತರದ ಕಡಲೆಕಾಳು ಗಣೇಶ ಮತ್ತು ೮ ಅಡಿ ಎತ್ತರದ ಸಾಸಿವೆಕಾಳು ಗಣೇಶ ಇವೆರಡೂ ಏಕಶಿಲಾ ವಿಗ್ರಹಗಳು, ಹಂಪೆಯ ಅಂದಿನ ಶಿಲ್ಪಿಕಲೆಯ ದ್ಯೋತಕವಾಗಿದೆ.

ಹಂಪೆಯನ್ನು ದೇಗುಲಗಳ ಮಹಾಸಮೂಹವೆಂದು ಕರೆಯಬಹುದು ಪ್ರವಾಸಿಗರು ಲೆಕ್ಕ ಮಾಡಲು ಪ್ರಯಾಸ ಪಡುವಷ್ಟು ದೇಗುಲಗಳು, ಜಿನಾಲಯಗಳು, ವೈಷ್ಣವ ಕೇಂದ್ರಗಳು ಇವೆ. ಒಂದೊಂದು ದೇವಾಲಯದಲ್ಲಿಯೂ ಒಂದೊಂದು ವಿಶೇಷತೆ ಇದೆ. ವಿಠ್ಠಲರಾಯ ಗುಡಿ, ವಿರೂಪಾಕ್ಷ ದೇಗುಲ, ಅಚ್ಯುತರಾಯ ದೇಗುಲ, ಗಾಣಗಿತ್ತಿ ಜಿನಾಲಯ, ಪಂಪಾವತಿ ದೇಗುಲಕ್ಕೆ ಅಭಿಮುಖವಾಗಿರುವ ಹೇಮಕೂಟ ಗುಡಿಗಳ ಸಮೂಹ, ವೈಷ್ಣವ ದೇಗುಲಗಳ ಸಮೂಹ, ಕಲ್ಲಿನ ನರಸಿಂಹ, ನಯನ ಮನೋಹರ ಮಹಾನವಮಿ ದಿಬ್ಬ, ಕಮಲಮಹಲ್, ಕಲ್ಲಿನ ರಥ, ಅಂತಃ ಪುರದ ಮೂಲೆ ಗೋಪುರಗಳು, ಅರಮನೆಯ ವಿಶಾಲವಾದ ಆನೆ ಮತ್ತು ಕುದುರೆ ಲಾಯಗಳು ಹಿಂದೂ ವಾಸ್ತುಶಿಲ್ಪ ಶೈಲಿಯ ಘನತೆಯ ಪ್ರತೀಕವೆನಿಸಿವೆ. ರಾಣಿಯರ ಸ್ನಾನಗೃಹಗಳಂತಹ ಕಟ್ಟಡಗಳೂ ಅಂದಿನ ಶಿಲ್ಪಕಲೆಯ ಭವ್ಯತೆಯನ್ನು ವಿಶ್ವಕ್ಕೆ ಸಾರಿ ಹೇಳುತ್ತವೆ.

ಒಂದೇ ದಿನದಲ್ಲಿ ಹಂಪೆಯಲ್ಲಿನ ಎಲ್ಲಾ ಕಟ್ಟಡ ಸ್ಮಾರಕಗಳನ್ನು ಅಧ್ಯಯನ ಶೀಲರು ನೋಡಲು ಸಾಧ್ಯವಿಲ್ಲ. ಕಾರಣ ವಿಶಾಲವಾದ ಜಾಗದಲ್ಲಿ ಹರಡಿಕೊಂಡಿರುವ ಸ್ಮಾರಕಗಳು ದೂರದೂರದಲ್ಲಿ ಹರಡಿಕೊಂಡಿರುವುದು ಮುಖ್ಯ ಕಾರಣವಾಗಿವೆ. ಅದೆಷ್ಟೋ ಸ್ಮಾರಕಗಳು ಭಗ್ನಗೊಂಡಿವೆ. ಸಾಮಾನ್ಯ ಪ್ರವಾಸಿಗರು ತಮ್ಮ ಸ್ವಂತ ವಾಹನಗಳಲ್ಲಿ ಇಲ್ಲಿನ ಪ್ರಮುಖ ಕಟ್ಟಡ ಸ್ಮಾರಕಗಳನ್ನು ನೋಡಿಕೊಂಡು ಹೋಗುತ್ತಾರೆ. ಪ್ರತಿ ವರ್ಷ ಹಂಪೆಯನ್ನು ವೀಕ್ಷಿಸಲು ಲಕ್ಷಾಂತರ ಪ್ರವಾಸಿಗರು ಆಗಮಿಸುತ್ತಾರೆ. ಹೊರ ರಾಜ್ಯಗಳವರಿಗೆ ಹೇಗೆ ಆಕರ್ಷಣೀಯವಾಗಿದೆಯೋ ಹಾಗೆಯೇ ವಿದೇಶಿಯರನ್ನು ಕೈಬೀಸಿ ಕರೆಯುತ್ತಿವೆ. ಇಲ್ಲಿರುವ

ಸ್ಮಾರಕಗಳು ೧೯೮೬ರಲ್ಲಿ ಯುನೆಸ್ಕೋ ಹಂಪೆಯನ್ನು ವಿಶ್ವಪರಂಪರೆಯ ಪಟ್ಟಿಯಲ್ಲಿ ಮಾನ್ಯ ಮಾಡಿರುವುದರಿಂದ ಇತ್ತೀಚಿನ ವರ್ಷಗಳಲ್ಲಿ ಇಲ್ಲಿಗೆ ಬರುವ ವಿದೇಶಿಗರ ಸಂಖ್ಯೆ ಹೆಚ್ಚಾಗಿದೆ.

**೨. ಪಟ್ಟದಕಲ್ಲು ಸ್ಮಾರಕ ಸಮೂಹ :**

ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ಪುಟ್ಟ ಗ್ರಾಮ ಪಟ್ಟದಕಲ್ಲು ದಕ್ಷಿಣ ಮತ್ತು ಉತ್ತರ ಭಾರತದ ವಾಸ್ತುಶಿಲ್ಪಿಗಳ ಸಂಗಮವೆನಿಸಿರುವ ಈ ತಾಣ ೧೯೮೭ರಲ್ಲಿ ವಿಶ್ವ ಪರಂಪರೆಯ ಪಟ್ಟಿಯಲ್ಲಿ ಗುರುತಿಸಲ್ಪಟ್ಟಿದೆ. ಪಟ್ಟದಕಲ್ಲು ಮಲಪ್ರಭಾ ನದಿಯ ಎಡದಂಡೆಯ ಮೇಲಿದೆ.[೬೮] ಪ್ರಾಚೀನ ಕಾಲದಲ್ಲಿ ಇದು ಚಾಲುಕ್ಯರ ಉಪರಾಜಧಾನಿಯಾಗಿತ್ತು. ಚಾಲುಕ್ಯ ಅರಸ ಕೀರ್ತಿವರ್ಮನ ರಾಜಧಾನಿಯಾಗಿತ್ತೆಂದು ಮನಗೂಳಿಯ ಶಾಸನವು ಉಲ್ಲೇಖಿಸುತ್ತದೆ. ಚಾಲುಕ್ಯ ಅರಸರು ತಮ್ಮ ಪಟ್ಟಬಂಧೋತ್ಸವವನ್ನು ಇಲ್ಲಿಯೇ ಮಾಡಿಕೊಳ್ಳುತ್ತಿದ್ದರೆಂಬುದು ಸಿಂಗಿರಾಜ ಪುರಾಣ, ಹಮ್ಮೀರ ಕಾವ್ಯಗಳಿಂದ ತಿಳಿದುಬರುತ್ತದೆ.[೬೯] ಚಾಲುಕ್ಯರು ಮಾತ್ರವಲ್ಲದೆ ಈ ಭಾಗವನ್ನಾಳಿದ ನಂದರು, ಗುಪ್ತರು, ಕದಂಬ ಮುಂತಾದ ರಾಜಮನೆತನದವರು ಸಹ ಇಲ್ಲಿ ಪಟ್ಟಾಭೀಷೆಕ ಮಾಡಿಕೊಳ್ಳುತ್ತಿದ್ದರಂತೆ ಆ ಹಿನ್ನೆಲೆಯಿಂದಲೇ ಪಟ್ಟದಕಲ್ಲು ಎಂಬ ಹೆಸರು ಬಂದಿದೆ ಎಂಬ ಪ್ರತೀತಗಳು ದಾಖಲಾಗಿರುವುದುಂಟು. ಪಟ್ಟದಕಲ್ಲಿಗೆ ಪ್ರಾಚೀನ ಕಾಲದಲ್ಲಿ ಕಿಸುವೊಳಲ್, ರಕ್ತಾಪುರ ಎಂಬ ಹೆಸರುಗಳು ಇದ್ದವು. ಟಾಲೆಮಿ ತನ್ನ ಎ ಗೈಡ್ ಟು ಜಿಯಾಗ್ರಾಫಿ ಪುಸ್ತಕದಲ್ಲಿ ಪೆಟ್ರಿಕಲ್ ಎಂದು ಕರೆದಿದ್ದಾನೆ. ಅಲ್ಲದೆ ಚರಿತ್ರೆಕಾರರು ಹಮ್ಮೀರಪುರ, ಪಡ್ಡಶಿಲಾಪುರ, ಎಂದಾಗಿಯೂ ಉಲ್ಲೇಖಿಸಿದ್ದಾರೆ. ಭವ್ಯ ಶಿಲ್ಪಿಕಲೆ ಮತ್ತು ವಾಸ್ತು ಶಿಲ್ಪಗಳುಳ್ಳ ದೇಗುಲಗಳಿಂದ ಪಟ್ಟದಕಲ್ಲು ಹೆಸರುವಾಸಿಯಾಗಿದೆ.

ದಕ್ಷಿಣ ಮತ್ತು ಉತ್ತರ ವಾಸ್ತುಶಿಲ್ಪ ಕಲೆಯ ಸಂಗಮವು ಇಲ್ಲಿರುವ ಸ್ಮಾರಕಗಳಲ್ಲಿ ಮೇಳೈಸಿಕೊಂಡಿದೆ. ಪಟ್ಟದಕಲ್ಲಿನಲ್ಲಿರುವ ಸಂಗಮೇಶ್ವರ, ಮಲ್ಲಿಕಾರ್ಜುನ, ವಿರೂಪಾಕ್ಷ, ಮಂದಿರಗಳು ದ್ರಾವಿಡ ಮತ್ತು ವೇಸರ ಮಿಶ್ರಿತ ಶೈಲಿಯನ್ನು ಪ್ರತಿನಿಧಿಸಿದರೆ ಗಳಗನಾಥ, ಕಾಶಿವಿಶ್ವೇಶ್ವರ, ಜಂಬುಲಿಂಗ, ಕಾಡಸಿದ್ದೇಶ್ವರ ದೇವಾಲಯಗಳು, ಉತ್ತರದ ವಾಸ್ತುಶಿಲ್ಪದ ಶೈಲಿ ಆಗಿರುವ ನಗರದಿಂದ ಪ್ರಭಾವಿತಗೊಂಡಿರುವುದನ್ನು ಕಾಣುತ್ತೇವೆ. ಇವೆರಡು ವಾಸ್ತುಶಿಲ್ಪ ಪದ್ಧತಿಗಳು ಕಾಲಕ್ರಮದಲ್ಲಿ ಕಲ್ಯಾಣದ ಚಾಲುಕ್ಯ ವಾಸ್ತುಪದ್ಧತಿಯ ಉಗಮಕ್ಕೆ ಕಾರಣವಾಯಿತೆಂದು ವಾಸ್ತುಶಾಸ್ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ವಿರೂಪಾಕ್ಷ ದೇಗುಲ ಅತ್ಯಂತ ದೊಡ್ಡದು ಮತ್ತು ಆಕರ್ಷಕವಾದದ್ದು. ಪ್ರಾಕಾರ ಗೋಡೆ, ಎರಡು ಮಹಾದ್ವಾರಗಳು, ನಂದಿಮಂಟಪ, ಇದರ ಮೇಲೆ ದ್ರಾವಿಡ ಶಿಖರದ ಮೆಟ್ಟಿಲುಗಳಿವೆ. ಒಂದರ ಮೇಲೊಂದು

ಕಿರಿದಾಗುತ್ತಾ ಹೋಗಿರುವ ಅಡ್ಡ ರೇಖಾಕಾರಗಳ ಮಾದರಿಯಲ್ಲಿ ಮೆಟ್ಟಿಲುಗಳನ್ನು ನೋಡುತ್ತೇವೆ. ಶೈವ ಮತ್ತು ವೈಷ್ಣವ ಪಂಥಕ್ಕೆ ಸಂಬಂಧಿಸಿದ ಮೂರ್ತಿಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ರಾವಣ ಕೈಲಾಸ ಪರ್ವತವನ್ನೇತ್ತುತ್ತಿರುವುದು. ಜಟಾಯುವನ್ನು ಸಂಹರಿಸುತ್ತಿರುವುದು, ಗಜೇಂದ್ರ ಮೋಕ್ಷ ಕೆತ್ತನೆಗಳು ಕಣ್ಣಿಗೆ ಮುದ ನೀಡುತ್ತವೆ. ಹೊರಮಗ್ಗುಲಲ್ಲಿ ರಸಿಕ ದಂಪತಿಗಳ ಶಿಲ್ಪಗಳು ಚಿತ್ತಾಕರ್ಷಕವಾಗಿವೆ. ೮–೯ ನೆಯ ಶತಮಾನದ ಕೆಲವು ಶಾಸನಗಳನ್ನು ಇಲ್ಲಿರುವುದನ್ನು ಗಮನಿಸಬಹುದು.

ಬಾದಾಮಿ ಚಾಲುಕ್ಯರ ಕಾಲದಲ್ಲಿ ರೂಪುಗೊಂಡ ಚಾಲುಕ್ಯ ವಾಸ್ತು ಶಿಲ್ಪಕೃತಿಗಳು ಚಾಲುಕ್ಯರ ಆಳ್ವಿಕೆಯ ಸಂಸ್ಕೃತಿ, ಶಕ್ತಿ ಸಂಪತ್ತುಗಳ ಪ್ರತೀಕಗಳಾಗಿ ನಿಂತಿವೆ. ಪಟ್ಟದಕಲ್ಲು ಈ ಸಿರಿಯ ಭಂಡಾರ, ಇಲ್ಲಿನ ದೇವಾಲಯಗಳ ಶಿಲ್ಪಗಳಲ್ಲಿ ಪುರಾಣ ಕಥಾ ಸನ್ನಿವೇಶಗಳು, ದೇವತಾ ಮೂರ್ತಿಗಳಲ್ಲದೆ ಆಗಿನ ಸಾಮಾಜಿಕ ಜೀವನದ ಚಿತ್ರಣವನ್ನು ಕಾಣಬಹುದು. ಆಗಿನ ಕಾಲದಲ್ಲಿ ಪ್ರಚಲಿತದಲ್ಲಿದ್ದ ಹಲವು ಬಗೆಯ ಸಂಗೀತ ವಾದ್ಯಗಳು, ಉಡುಗೆ–ತೊಡುಗೆಗಳು, ಕೇಶವಿನ್ಯಾಸ, ಗ್ರಾಮ ಜೀವನ ಇವೆಲ್ಲ ಅಲ್ಲಿ ಮನಮುಟ್ಟುವಂತೆ ಮೂಡಿವೆ. ರೇವಡಿ ಒವಜ್ಜ, ಅನಿವಾರಿತ ಗುಂಡ ಎಂಬ ಸ್ಥಪತಿಗಳಿಂದ, ಚೆಂಗಮ್ಮ ಪುಲ್ಲಪ್ಪನ್, ನಿರ್ಮಾಣದೇವ, ಬಲದೇವಯ್ಯ, ದೇವ, ಆರ್ಯ ಮೊದಲಾದ ಶಿಲ್ಪಿಗಳಿಂದ ಆಚಲನ್‌ರಂತಹ ನಾಟ್ಯಶಾಸ್ತ್ರ ಪ್ರವೀಣರಿಂದ, ಚಲಬ್ಬೆ ಮೊದಲಾದ ದೇವದಾಸಿಯರಿಂದ ಪಟ್ಟದಕಲ್ಲು ಕಲಾಪೂರ್ಣವಾಗಿತ್ತು. ಆಗ ನಂದಿ ಧ್ವಜಗಳು ಇಲ್ಲಿ ಮೆರೆಯುತ್ತಿದ್ದವು. ಭಾರತೀಯ ವಾಸ್ತುಶಿಲ್ಪಕಲೆಯ ಇತಿಹಾಸ ಅಭ್ಯಾಸಿಗಳಿಗೆ ಪಟ್ಟದಕಲ್ಲು ಒಂದು ವಿದ್ಯಾಲಯದಂತಿದೆ ಭಾರತೀಯ ವಾಸ್ತುಶಿಲ್ಪಕಲೆಯ ವಿಕಾಸಕ್ಕೆ ಸಂಬಂಧಿಸಿದ ಹಲವಾರು ಅಂಶಗಳನ್ನು ಇಲ್ಲಿ ಗುರುತಿಸಬಹುದು.

**ಭಾರತದ ತಾತ್ಕಾಲಿಕ ಪಟ್ಟಿಗಳು :**

ವಿಶ್ವಪರಂಪರೆಯ ಪಟ್ಟಿಯಲ್ಲಿ ನಮೂದಾಗಿರುವಂತೆ ೩೭ ತಾಣಗಳ ಜೊತೆಗೆ ಭಾರತದ ಮೌಲ್ಯಮಾಪನ ಮತ್ತು ಮಾನ್ಯತೆಗೆ ಯುನೆಸ್ಕೋ ಸಮಿತಿಯೊಂದು ರಚನೆಯಾಗಿದೆ. ವಿಶ್ವ ಪರಂಪರೆಯಲ್ಲಿ ತಾತ್ಕಾಲಿಕ ಪಟ್ಟಿಯಲ್ಲಿ ನಾಮ ನಿರ್ದೇಶನಗೊಂಡ ನೆಲೆಗಳು.

೧. ವಿಷ್ಣುಪುರದ ದೇವಾಲಯಗಳು (ಪಶ್ಚಿಮ ಬಂಗಾಳ)
೨. ಮತ್ತನ್ಚೇರಿ ಅರಮನೆ (ಕೇರಳ)
೩. ಮಂಡು ಸ್ಮಾರಕ ಸಮೂಹ (ಮಧ್ಯಪ್ರದೇಶ)
೪. ಸಾರನಾಥ ಪ್ರಾಚೀನ ಬೌದ್ಧನೆಲೆ (ಉತ್ತರ ಪ್ರದೇಶ)

೫. ಶ್ರೀ ಹರ್ಮಂದಿರ್ ಸಾಹಿಬ್ (ಪಂಜಾಬ್)

೬. ಮಜುಲಿ ನದಿ ದ್ವೀಪ (ಅಸ್ಸಾಂ)

೭. ನಾಮ್ದಫಾ ನ್ಯಾಷನಲ್ ಪಾರ್ಕ್ (ಅರುಣಾಚಲ ಪ್ರದೇಶ)

೮. ಕಾಡುಕತ್ತೆ ಅಭಯಾರಣ್ಯ (ಗುಜರಾತ್)

೯. ಭೀತರ್ಕಾನಿಕಾ ಸಂರಕ್ಷಣಾ ಪ್ರದೇಶ (ಒರಿಸ್ಸಾ)

೧೦. ನೀರಾ ವ್ಯಾಲಿ ರಾಷ್ಟ್ರೀಯ ಉದ್ಯಾನ (ಪಶ್ಚಿಮ ಬಂಗಾಳ)

೧೧. ಡಸರ್ಟ್ ನ್ಯಾಷನಲ್ ಪಾರ್ಕ್ (ರಾಜಸ್ಥಾನ)

೧೨. ಅಮ್ಮು ಮತ್ತು ಕಾಶ್ಮೀರ ಮೊಘಲ್ ಉದ್ಯಾನಗಳು (ಜಮ್ಮು ಮತ್ತು ಕಾಶ್ಮೀರ)

- ಚಾಷ್ಮಾ ಶಾಹಿ
- ಶಾಲಿಮಾರ್ ಬಾಗ್
- ವೆರಿನಾಗ್ ಗಾರ್ಡನ್
- ಪರಿಮಹಲ್
- ಅಚಬಲ್ಸ್ ಗಾರ್ಡನ್ಸ್
- ನಿಶಾತ್ ಬಾಗ್ಸ್

೧೩. ಭಾರತದಲ್ಲಿ ಸಿಲ್ಕ್ (ರೇಷ್ಮೆ) ನೆಲೆಗಳು

೧೪. ಶಾಂತಿನಿಕೇತನ (ಪಶ್ಚಿಮ ಬಂಗಾಳ)

೧೫. ದೆಹಲಿ

೧೬. ಹೈದರಾಬಾದ್ ಆಫ್ ಕುತುಬ್ ಷಾಹಿ ಸ್ಮಾರಕಗಳು (ಹೈದರಾಬಾದ್)

೧೭. ಅಪತಾನಿ ಸಾಂಸ್ಕೃತಿಕ ಭೂದೃಶ್ಯ (ಅರುಣಾಚಲ ಪ್ರದೇಶ)

೧೮. ಲೋಥಾಲ್ ಪುರಾತತ್ವಶಾಸ್ತ್ರೀಯ ಉಳಿಕೆಗಳು (ಗುಜರಾತ್)

೧೯. ಆರಾಧನೆಯ ಬಹಾಯಿ ಮನೆ (ದೆಹಲಿ)

೨೦. ಸೆಲ್ಯುಲರ್ ಜೈಲ್ (ಅಂಡಮಾನ್ ದ್ವೀಪಗಳು)

೨೧. ಚೆಟ್ಟಿನಾಡು, ತಮಿಳು ವ್ಯಾಪಾರಿಗಳ ಗ್ರಾಮ ಪುಂಜಗಳು (ತಮಿಳುನಾಡು)

೨೨. ಚಿಲ್ಕ ಸರೋವರ (ಒಡಿಶಾ)

೨೩. ಡೆಕ್ಕನ್ ಸುಲ್ತಾನರ ಸ್ಮಾರಕಗಳು ಮತ್ತು ಕೋಟೆಗಳು

೨೪. ಇಕಾಮ್ರ ಕ್ಷೇತ್ರ ದೇವಾಲಯ ನಗರ (ಒರಿಸ್ಸಾ)

೨೫. ಭಾರತದ ಸಾಂಪ್ರದಾಯಿಕ ಸೀರೆ ವೀವಿಂಗ್ ಪುಂಜಗಳು

೨೬. ಪದ್ಮನಾಭಪುರ ಅರಮನೆ (ತಮಿಳುನಾಡು)

೨೭. ಹೊಯ್ಸಳರ ಸ್ಮಾರಕ ಸಮೂಹ (ಕರ್ನಾಟಕ, ಬೇಲೂರು–ಹಳೇಬೀಡು)

೨೮. ಶ್ರೀರಂಗಪಟ್ಟಣ ನಗರ ಸ್ಮಾರಕಗಳು (ಕರ್ನಾಟಕ)

೨೯. ನಾರ್ಕೊಂಡಮ್ ದ್ವೀಪ (ಅಂಡಮಾನ ಮತ್ತು ನಿಕೋಬಾರ್)

೩೦. ಬುರ್ಜಹೊಂ ನವಶಿಲಾಯುಗದ ನೆಲೆಗಳು (ಜಮ್ಮು ಮತ್ತು ಕಾಶ್ಮೀರ)

೩೧. ತಿಂಬ್ಯಾಂಗ್ ಕೋಟೆಗಳ ನಗರ (ಆರುಣಾಚಲ ಪ್ರದೇಶ)

೩೨. ಗ್ಲೋರಿಯಸ್ ಕಾಕತೀಯರ ದೇವಾಲಯಗಳು (ತೆಲಂಗಣಾ)

೩೩. ಭಾರತದ ಅಹಿಂಸಾತ್ಮಕ ಸ್ವಾತಂತ್ರ್ಯ ಚಳವಳಿಯ ಸತ್ಯಾಗ್ರಹ ನೆಲೆಗಳು

೩೪. ಉತ್ತರಪಥ ಬಾದ್ಷಾಹಿ ಸಡಕ್, ಇ ಅಜಾಮ್ ಗ್ರ್ಯಾಂಡ್ ಟ್ರಂಕ್ ರಸ್ತೆಯ ನೆಲೆಗಳು

೩೫. ಅಹೋಮಾ ರಾಜವಂಶದ ಮೌಂಡ್ ಬ್ಯುರಿಯಲ್ಸ್ (ಅಸ್ಸಾಂ)

೩೬. ಶ್ರೀರಂಗನಾಥ ದೇವಾಲಯ (ತಮಿಳುನಾಡು)

೩೭. ಹರಪ್ಪ ನಾಗರಿಕತೆಯ ಧೋಲವೀರ (ಗುಜರಾತ್)

೩೮. ಐಹೊಳೆ–ಬಾದಾಮಿ, ವಾಸ್ತುಶಿಲ್ಪ ವಿಕಾಸ (ಕರ್ನಾಟಕ)

೩೯. ಭಾರತದ ಶೀತಲ ಡಸರ್ಟ್ ಸಾಂಸ್ಕೃತಿಕ ಭೂದೃಶ್ಯ

೪೦. ಭಾರತದ ರೈಲು ಮಾರ್ಗಗಳು

**ಕೊನೆ ಟಿಪ್ಪಣಿಗಳು**

೧. ಶಶಿಕುಮಾರ ಎಂ. ಎನ್., ೨೦೧೩, ವಿಶ್ವಪರಂಪರೆಯ ತಾಣಗಳು, ಪು. ೪

೨. ಶಿವರುದ್ರಸ್ವಾಮಿ ಎಂ, ಎನ್., ೨೦೦೭, ಭಾರತೀಯ ಪ್ರವಾಸೋದ್ಯಮ, ಪು. ೯೧

೩. ಅದೇ, ಪು. ೯೧

೪. Sona Thakur, 2001, World Cultural Heritage Sites in India, p. 4

೫. ವಿದ್ಯಾಶಂಕರ ಎಸ್., ೨೦೧೫, ಪ್ರವಾಸೋದ್ಯಮ ಹಾಗೂ ಕನ್ನಡ ಸಾಹಿತ್ಯ, ಪು. ೧೨

೬. ಶಿವರುದ್ರಸ್ವಾಮಿ ಎಂ, ಎನ್., ೨೦೦೭, ಪೂರ್ವೋಕ್ತ, ಪು. ೯೨

೭. ಅದೇ, ಪು. ೯೩

೮. ಶಶಿಕುಮಾರ ಎಂ. ಎನ್., ೨೦೧೩, ಪೂರ್ವೋಕ್ತ, ಪು. ೬

೯. ನಾಗಪತಿ ಕೆ.ಎಸ್., ೨೦೧೨, ಪ್ರವಾಸೋದ್ಯಮ ಅಭಿವೃದ್ಧಿ ಒಂದು ಹೊಸ ಆಯಾಮ, ಪು. ೪೯

೧೦. ಅದೇ, ಪು. ೫೦

೧೧. ಶಿವರುದ್ರಸ್ವಾಮಿ ಎಂ, ಎನ್., ೨೦೦೭, ಪೂರ್ವೋಕ್ತ, ಪು. ೯೩

೧೨. ವಿಜಯ ಎಸ್., ೨೦೧೨, ಭಾರತದ ವಿಶ್ವಪರಂಪರೆಯ ತಾಣಗಳು, ಪು. ೩

೧೩. ಶಿವರುದ್ರಸ್ವಾಮಿ ಎಂ, ಎನ್., ೨೦೦೭, ಪೂರ್ವೋಕ್ತ, ಪು. ೯೩

೧೪. ಅದೇ, ಪು. ೯೪

೧೫. ನಾಗಪತಿ ಕೆ.ಎಸ್., ೨೦೧೨, ಪೂರ್ವೋಕ್ತ, ಪು. ೫೩

೧೬. ಅದೇ, ಪು. ೫೩



೧೭. ಅದೇ, ಪು. ೫೪

೧೮. www.unesco.org

೧೯. ರೇಖಾ ಕೆ., ೨೦೧೦, ವಿಶ್ವಪರಂಪರೆಯ ತಾಣಗಳು, ಪು. ೭

೨೦. www.unesco.org

೨೧. ಅದೇ, ವೆಬ್‌ಸೈಟ್

೨೨. ಅದೇ, ವೆಬ್‌ಸೈಟ್

೨೩. ಅದೇ, ವೆಬ್‌ಸೈಟ್

೨೪. ಅದೇ, ವೆಬ್‌ಸೈಟ್

೨೫. ತಂಜಾವೂರಿನ ಬೃಹದೇಶ್ವರ ದೇವಾಲಯವನ್ನು ೧೯೮೭ರಲ್ಲಿ ವಿಶ್ವಪರಂಪರೆಯ ತಾಣವೆಂದು ಯುನೆಸ್ಕೋ ಶಾಸನವನ್ನು ಹೊರಡಿಸಿತ್ತು. ಆನಂತರ ೨೦೦೫ರಲ್ಲಿ ಮತ್ತೊಂದು ಶಾಸನವನ್ನು ಮಾಡಿ, ತಂಜಾವೂರಿನ ಬೃಹದೇಶ್ವರ ದೇವಾಲಯದ ಜೊತೆಗೆ ಗಂಗೈಕೊಂಡ ಚೋಳಪುರಂನ ಬೃಹದೀಶ್ವರ ಮತ್ತು ದಾರಕೂರಂನ ಐರಾವತೇಶ್ವರ ದೇವಾಲಯವನ್ನು ಸೇರಿಸಿ, ಚೋಳ ದೇವಾಲಯಗಳೆಂದು ಹೆಸರಿಸಿತು.

೨೬. ಮೊದಲಿಗೆ ೧೯೯೦ರಲ್ಲಿ ಡಾರ್ಜಲಿಂಗ್ ಹಿಮಾಲಯ ರೈಲ್ವೆ ಎಂದು ಆದೇಶವನ್ನು ಹೊರಡಿಸಲಾಗಿತ್ತು. ಅನಂತರ ೨೦೦೫ರಲ್ಲಿ ಭಾರತದ ಪರ್ವತ ರೈಲ್ವೆ ಎಂದು ಕರೆದು ಅದರಲ್ಲಿ ಡಾರ್ಜಲಿಂಗ್ ಹಿಮಾಲಯ ರೈಲ್ವೆ ಮತ್ತು ತಮಿಳುನಾಡಿನ ನೀಲಗಿರಿಯ ರೈಲ್ವೆಗಳನ್ನು ಸೇರಿಸಲಾಗಿದೆ.

೨೭. ದಿನಾಂಕ : ೨೦ ಏಪ್ರಿಲ್ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೨೮. ದಿನಾಂಕ : ೨೧ ಏಪ್ರಿಲ್ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೨೯. ಶಿವರುದ್ರಸ್ವಾಮಿ ಎಂ, ಎನ್., ೨೦೦೭, ಪೂರ್ವೋಕ್ತ, ಪು. ೯೭

೩೦. ಅದೇ, ಪು. ೯೭

೩೧. ದಿನಾಂಕ : ೨೬ ಏಪ್ರಿಲ್ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೩೨. ದಿನಾಂಕ : ೨೮ ಏಪ್ರಿಲ್ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೩೩. ಶಿವರುದ್ರಸ್ವಾಮಿ ಎಂ, ಎನ್., ೨೦೦೭, ಪೂರ್ವೋಕ್ತ, ಪು. ೯೮

೩೪. ದಿನಾಂಕ : ೦೧ ಮೇ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೩೫. ದಿನಾಂಕ : ೦೫ ಮೇ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೩೬. ಮೃತ್ಯುಂಜಯ ಎಸ್., ೨೦೧೧, ವಿಶ್ವದ ವಿಸ್ಮಯಕರ ಪ್ರವಾಸಿ ತಾಣಗಳು, ಪು. ೧೩

೩೭. ದಿನಾಂಕ : ೦೩ ಮೇ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೩೮. ದಿನಾಂಕ : ೦೬ ಮೇ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೩೯. ದಿನಾಂಕ : ೧೧ ಮೇ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೪೦. ಶಿವರುದ್ರಸ್ವಾಮಿ ಎಂ, ಎನ್., ೨೦೦೭, ಪೂರ್ವೋಕ್ತ, ಪು. ೧೯೫

೪೧. ಅದೇ, ಪು. ೧೦೧

೪೨. ಅದೇ, ಪು. ೧೦೧

೪೩. ದಿನಾಂಕ : ೨೩ ಮೇ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೪೪. ಶೀಲಕಾಂತ ಪತ್ತಾರ, ೨೦೦೮, ಪಟ್ಟದಕಲ್ಲು ದರ್ಶನ, ಪು. ೧೨

೪೫. ದಿನಾಂಕ : ೨೯ ಮೇ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೪೬. ಶಿವರುದ್ರಸ್ವಾಮಿ ಎಂ, ಎನ್., ೨೦೦೭, ಪೂರ್ವೋಕ್ತ, ಪು. ೧೦೪

೪೭. ಅದೇ, ಪು. ೧೦೪

೪೮. ದಿನಾಂಕ : ೩೦ ಮೇ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೪೯. ವಿಜಯ ಎಸ್., ೨೦೧೨ , ಪೂರ್ವೋಕ್ತ, ಪು. ೯

೫೦. ದಿನಾಂಕ : ೫ ಜೂನ್ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೫೧. ದಿನಾಂಕ : ೮ ಜೂನ್ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೫೨. ವಿಜಯ ಎಸ್., ೨೦೧೨, ಪೂರ್ವೋಕ್ತ, ಪು. ೧೩

೫೩. ದಿನಾಂಕ : ೧೨ ಜೂನ್ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೫೪. ಶಿವರುದ್ರಸ್ವಾಮಿ ಎಂ, ಎನ್., ೨೦೦೭, ಪೂರ್ವೋಕ್ತ, ಪು. ೧೦೮

೫೫. ದಿನಾಂಕ : ೧೭ ಜೂನ್ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೫೬. ದಿನಾಂಕ : ೨೧ ಜೂನ್ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೫೭. ದಿನಾಂಕ : ೨೦ ಜೂನ್ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೫೮. ಮೃತ್ಯುಂಜಯ ಎಸ್., ೨೦೧೧, ಪೂರ್ವೋಕ್ತ, ಪು. ೧೬

೫೯. ದಿನಾಂಕ : ೨೩ ಜೂನ್ ೨೦೧೭ರ ಪ್ರಜಾವಾಣಿ ದಿನಪತ್ರಿಕೆ, ವಿಚಾರ–ತೋರಣ, ಪು. ೨

೬೦. www.unesco.org

೬೧. ಅದೇ, ವೆಬ್‌ಸೈಟ್

೬೨. ಅದೇ, ವೆಬ್‌ಸೈಟ್

೬೩. ಅದೇ, ವೆಬ್‌ಸೈಟ್

೬೪. ಸ್ಪರ್ಧಾ ಚಾಣಕ್ಯ, ಮಾಸಪತ್ರಿಕೆ, ಆಗಸ್ಟ್–೨೦೧೭, ಸಂಪುಟ–೬, ಸಂಚಿಕೆ–೮, ಪು. ೧೩

೬೫. ಇತಿಹಾಸ ಮತ್ತು ಪುರಾತತ್ವ, ೨೦೦೯, ಪು. ೯೬೦

೬೬. ವಿವೇಕ ರೈ ಬಿ.ಎ., (ಸಂ.), ೨೦೦೬, ಪ್ರವಾಸಿ ಕಂಡ ವಿಜಯನಗರ, ಪು, ೧೨

೬೭. ವೀರೇಶ ಯಂಗಟಿ, ೨೦೧೫, ಭಾರತದ ಆಕರ್ಷಣೀಯ ಪಾರಂಪರಿಕ ತಾಣಗಳು, ಪು. ೨೯

೬೮. ಇತಿಹಾಸ ಮತ್ತು ಪುರಾತತ್ವ, ೨೦೦೯, ಪು. ೫೬೧

೬೯. ಶೀಲಾಕಾಂತ ಪತ್ತಾರ, ೨೦೦೮, ಪೂರ್ವೋಕ್ತ, ಪು. ೩

## ಅಧ್ಯಾಯ – ಮೂರು

## ವಿಶ್ವ ಪಾರಂಪರಿಕ ತಾಣ : ಹಂಪಿ

ಹಂಪಿಯನ್ನು ಬಯಲು ವಸ್ತುಸಂಗ್ರಹಾಲಯ ಎಂದು ಕರೆಯಲಾಗುತ್ತದೆ. ಇಲ್ಲಿನ ಭವ್ಯ ಪರಂಪರೆ ಮತ್ತು ಶ್ರೀಮಂತಿಕೆಯ ಇತಿಹಾಸದಿಂದಾಗಿ ೧೯೮೬ರಲ್ಲಿ ವಿಶ್ವಪರಂಪರೆ ತಾಣಗಳ ಪಟ್ಟಿಯಲ್ಲಿ ಸ್ಥಾನ ಪಡೆದಿಕೊಂಡಿತು. ಇದರಿಂದ ಯುನೆಸ್ಕೋ ಎಂಬ ಅಂತಾರಾಷ್ಟ್ರೀಯ ಸಂಸ್ಥೆಯು ಹಂಪಿಯ ರಮಣೀಯತೆಯನ್ನು ಕಾಪಾಡಲು ಮತ್ತು ಭಗ್ನಗೊಂಡಿರುವ ಸ್ಮಾರಕಗಳನ್ನು ಯಥಾವತ್ತಾಗಿ ಪ್ರತಿಷ್ಠಾಪಿಸುವಲ್ಲಿ ಕಾರ್ಯೋನ್ಮುಖವಾಗಿದೆ. ಅಷ್ಟೇ ಅಲ್ಲದೆ ಹಂಪಿಗೆ ಪ್ರವಾಸಿಗರನ್ನು ಆಕರ್ಷಿಸುವ ಉದ್ದೇಶದಿಂದ ದೇಶ–ವಿದೇಶಗಳಲ್ಲಿ ಕಲಾಕೃತಿಗಳ ಪ್ರದರ್ಶನ, ವಿದ್ವಾಂಸರೊಂದಿಗೆ ಚರ್ಚೆ, ನೃತ್ಯ, ರೂಪಕಗಳನ್ನು ಏರ್ಪಡಿಸುತ್ತಾ ಕಲಾರಸಿಕರ ಗಮನ ಸೆಳೆಯುತ್ತಿದೆ. ಇದಕ್ಕಾಗಿ ಹಂಪಿ ಸೇರಿದಂತೆ ಸುತ್ತಮುತ್ತಲಿನ ಪ್ರದೇಶದಲ್ಲಿ ಉತ್ಖನನ ನಿರಂತರವಾಗಿ ನಡೆಯುತ್ತಿರುತ್ತದೆ. ಈ ಭಾಗದಲ್ಲಿದ್ದ ಪ್ರವಾಸಿ ತಾಣಗಳ ರಕ್ಷಣೆಗಾಗಿ ಮುಂಜಾಗ್ರತಾ ಕ್ರಮಗಳನ್ನು ಕೇಂದ್ರ ಪುರಾತತ್ವ ಸರ್ವೇಕ್ಷಣಾ ಇಲಾಖೆ ಹಾಗೂ ಕೇಂದ್ರ ರಾಜ್ಯ ಪ್ರವಾಸೋದ್ಯಮ ಇಲಾಖೆ ಜಂಟಿಯಾಗಿ ಕಾರ್ಯಾಚರಣೆ ವೀಕ್ಷಣೆಗೆ ಇಳಿದಿವೆ. ಈ ಹಿನ್ನೆಲೆಯಲ್ಲಿ ಹಂಪಿ ವೀಕ್ಷಣೆಗೆಂದೇ ಆಗಮಿಸುವ ಪ್ರವಾಸಿಗರ ಸಂಖ್ಯೆ ನಿರಂತರವಾಗಿ ಹೆಚ್ಚುತ್ತಿರುವುದು ಉಲ್ಲೇಖಾರ್ಹವಾದ ಸಂಗತಿಯಾಗಿದೆ.

ನಮ್ಮ ಪೂರ್ವಜರಿಂದ ನಮಗೆ ಬಳುವಳಿಯಾಗಿ ಬಂದ ಸಂಪ್ರದಾಯ, ಆಚರಣೆ, ಹಬ್ಬ, ಜಾತ್ರೆ ಕಲಾ ಪದ್ಧತಿ ಹಾಗೂ ಉಳಿದುಬಂದಿರುವ ದೇವಾಲಯಗಳು, ಸ್ಮಾರಕಗಳು ಮತ್ತು ವಸ್ತುಗಳನ್ನು ನಮ್ಮ ಪರಂಪರೆ ಎಂದು ಸಾಮಾನ್ಯವಾಗಿ ಕರೆಯಲಾಗುತ್ತದೆ.[೧] ಪ್ರತಿಯೊಂದು ದೇಶಕ್ಕೆ ತನ್ನದೇ ಆದ ಪರಂಪರೆ ಇರುತ್ತದೆ. ಅವುಗಳ ಸಂರಕ್ಷಣೆ ಆಯಾ ದೇಶಗಳ ಸರ್ಕಾರದ ಮುಖ್ಯ ಜವಾಬ್ದಾರಿಯಾಗಬೇಕೆಂದು ನಿರ್ಧರಿಸಿ ವಿಶ್ವಸಂಸ್ಥೆಯ ಅಂಗಸಂಸ್ಥೆಯಾದ ಯುನೆಸ್ಕೋ ವಿಶ್ವದ ಚಾರಿತ್ರಿಕ, ಸಾಂಸ್ಕೃತಿಕ, ನೈಸರ್ಗಿಕ ಮಹತ್ವ ಪಡೆದ ಸ್ಥಳಗಳನ್ನು ವಿಶ್ವ ಪರಂಪರೆಯ ತಾಣಗಳನ್ನಾಗಿ ಗುರುತಿಸಿ ಅವುಗಳ ಸಂರಕ್ಷಣೆಗಾಗಿ ವಿಶೇಷ ಕಾಯ್ದೆಗಳನ್ನು ಅನುಷ್ಠಾನಕ್ಕೆ ತಂದಿದೆ. ಇದಕ್ಕಾಗಿ ಅದು ಕೋಟ್ಯಂತರ ಪ್ರಮಾಣದಲ್ಲಿ ಹಣವನ್ನು ಪ್ರತಿವರ್ಷ ಖರ್ಚು ಮಾಡುತ್ತಿದೆ. ಇದು ತನ್ನ ೧೯೭೨ರ ಅಧಿವೇಶನದಲ್ಲಿ ನೈಸರ್ಗಿಕ ಮತ್ತು ಸಾಂಸ್ಕೃತಿಕ ಪ್ರದೇಶಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗಮನಿಸಿ ಅವುಗಳ ರಕ್ಷಣೆಗೆ ಮುಂದಾಯಿತು. ಮನುಕುಲದ ಪರಂಪರೆಯನ್ನು ಮುಂದಿನ ಪೀಳಿಗೆಗೆ

ಉಳಿಸಿ ಕೊಡಬೇಕೆಂಬ ಮಹ್ವತ್ವಾಕಾಂಕ್ಷೆಯೊಂದಿಗೆ ಮಾರಕವಾಗುವಂತಹ ಎಲ್ಲ ಕ್ರಮಗಳನ್ನು ಕಡಿಮೆ ಮಾಡಲು ಸಂಕಲ್ಪ ಮಾಡಿತು. ಈ ನಿಟ್ಟಿನಲ್ಲಿ ಅದು ಕೆಲವು ಒಪ್ಪಂದಗಳನ್ನು ತನ್ನ ಸದಸ್ಯ ರಾಷ್ಟ್ರಗಳೊಂದಿಗೆ ಮಾಡಿಕೊಂಡಿತು. ೧೯೭೫ರಲ್ಲಿ ಪರಂಪರೆಯ ರಕ್ಷಣೆಗಾಗಿ ಕಟಿಬದ್ಧರಾಗಲು ಸುಮಾರು ೨೨ ದೇಶಗಳು ಯುನೆಸ್ಕೋಗೆ ತಮ್ಮ ಒಪ್ಪಿಗೆ ಸೂಚಿಸಿದವು.[೨] ಕಾಲಕ್ರಮೇಣ ವಿಶ್ವಪರಂಪರೆಯ ತಾಣಗಳನ್ನು ಗುರುತಿಸುವ ಕೆಲಸ ಭರದಿಂದ ಸಾಗತೊಡಗಿತ್ತು. ಇದರ ಪರಿಣಾಮವಾಗಿ ಸುಮಾರು ೧೬೭ ದೇಶಗಳು ೧೧೨೧ ಸಾಂಸ್ಕೃತಿಕ, ನೈಸರ್ಗಿಕ ಹಾಗೂ ಮಿಶ್ರ ತಾಣಗಳು ವಿಶ್ವಪರಂಪರೆ ಪಟ್ಟಿಯಲ್ಲಿ ಸೇರಿವೆ ೮೬೯ ಸಾಂಸ್ಕೃತಿಕ ೨೧೩ ನೈಸರ್ಗಿಕ ಮತ್ತು ೩೯ ಮಿಶ್ರ ತಾಣಗಳಾಗಿವೆ. ಇವುಗಳಲ್ಲಿ ಶೇಕಡಾ ೬೬ರಷ್ಟು ಸಾಂಸ್ಕೃತಿಕ ತಾಣಗಳಿವೆ. ಅವುಗಳಲ್ಲಿ ಭಾರತ ದೇಶವು ತನ್ನ ಸ್ಥಾನವನ್ನು ಪಡೆದುಕೊಂಡಿರುವುದು ವಿಶೇಷವಾಗಿದೆ. ಇಂದು ಭಾರತದಲ್ಲಿ ಸುಮಾರು ೩೭ ಸ್ಥಳಗಳು ವಿಶ್ವಪರಂಪರೆ ಪಟ್ಟಿಯಲ್ಲಿವೆ.[೩] ಕರ್ನಾಟಕದಲ್ಲಿ ಹಂಪಿ ಸ್ಮಾರಕಗಳ ಗುಂಪು ಹಾಗೂ ಪಟ್ಟದಕಲ್ಲು ಸ್ಮಾರಕಗಳ ಗುಂಪು ಮನ್ನಣೆಯನ್ನು ಪಡೆದಿರುವುದು ವಿಶೇಷವಾಗಿದೆ.

೧೪-೧೬ನೆಯ ಶತಮಾನದ ಅವಧಿಯಲ್ಲಿ ಹಂಪಿಯು ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದುಕೊಂಡು, ಅನೇಕ ದೇವಾಲಯಗಳ ರಚನೆಗೆ ಕಾರಣವಾಗಿವೆ. ಬಹಳಷ್ಟು ಜನ ವಿದೇಶಿ ವಿದ್ವಾಂಸರು ಹಂಪಿಯನ್ನು ವರ್ಣನೆ ಮಾಡಿದ್ದಾರೆ. ಇದನ್ನು 'ದಕ್ಷಿಣಕಾಶಿ', 'ಪಂಪಾ ಕ್ಷೇತ್ರ' ಎಂದೆಲ್ಲಾ ಕರೆಯಲಾಗುತ್ತದೆ. ವಿಜಯನಗರ ಅರಸರು ತಮ್ಮ ಕಾಲಾವಧಿಯಲ್ಲಿ ವಿವಿಧ ಪ್ರಕಾರದ ಅಸಂಖ್ಯಾತ ಸ್ಮಾರಕಗಳನ್ನು ನಿರ್ಮಿಸಿದರು. ಇದರಿಂದ ಕೆಲವು ಸ್ಮಾರಕಗಳು ಇಲ್ಲಿ ನಿರ್ಮಾಣಗೊಂಡು ಇದು ಬಯಲು ವಸ್ತುಸಂಗ್ರಹಾಲಯ ಸ್ಮಾರಕಗಳ ತವರೂರು ಎಂದು ಖ್ಯಾತವಾಯಿತು.[೪] ಹೀಗೆ ನಿರ್ಮಿತವಾದ ಸ್ಮಾರಕಗಳು ಕಾಲಕ್ರಮೇಣ ಬೇರೆ ಬೇರೆ ಕಾರಣಕ್ಕಾಗಿ ಅವಸಾನದತ್ತ ಮುಖಮಾಡಿವೆ. ವಿನಾಶದಂಚಿನಲ್ಲಿರುವ ಸ್ಮಾರಕಗಳ ದಾಖಲೀಕರಣ ಮತ್ತು ಅವುಗಳ ಸಂರಕ್ಷಣೆಯ ಕಾರ್ಯ ಮೊದಲು ಬ್ರಿಟಿಷ್ ಅಧಿಕಾರಿಗಳಿಂದ ಆರಂಭವಾಯಿತು. ಆಡಳಿತದ ಅವಧಿಯಲ್ಲಿ ಬಳ್ಳಾರಿಗೆ ಸೇರಿದ ೨೨ ಜಿಲ್ಲೆಗಳಲ್ಲಿ ಒಂದಾಗಿತ್ತು. ಈ ಕಾರಣಕ್ಕಾಗಿ ಹಂಪಿಯ ಸ್ಮಾರಕಗಳ ರಕ್ಷಣೆಯ ಕಾರ್ಯ ಅವರ ಕಾಲದಲ್ಲಿ ಆರಂಭವಾಯಿತು. ಹಂಪಿಯಲ್ಲಿರುವ ಸ್ಮಾರಕಗಳು ಮತ್ತು ದೇವಾಲಯಗಳ ಸಂರಕ್ಷಣೆಯೊಟ್ಟಿಗೆ ಅವುಗಳ ಸಂಪೂರ್ಣ ಇತಿಹಾಸವನ್ನು ದಾಖಲಿಸುವಂಥ ಕೆಲಸವನ್ನು ಮೊದಲು ಬ್ರಿಟಿಷ್ ಅಧಿಕಾರಿಗಳು ಆರಂಭಿಸಿದರು. ಅವರಲ್ಲಿ ಬಳ್ಳಾರಿ ಕಲೆಕ್ಟರ್ ಆಗಿದ್ದ ರಾಬರ್ಟ್ ಸಿವೆಲ್‌ರವರು

ಹಂಪಿಯ ೧೮೭೭ರಲ್ಲಿ ಅವಸಾನದಂಚಿನಲ್ಲಿದ್ದ ಕೆಲ ಸ್ಮಾರಕಗಳ ಸಂರಕ್ಷಣೆ ಮಾಡಿದರು. ಇದಕ್ಕಿಂತಲೂ ಮುಖ್ಯವಾಗಿ ಅವರು ವಿಜಯನಗರ ಸಾಮ್ರಾಜ್ಯದ ಕುರಿತು ಅನ್ವೇಷಣೆ ಕೈಗೊಂಡು ಅವುಗಳನ್ನು 'ಫಾರಗಾಟನ್ ಎಂಪೈರ್' ಎನ್ನುವ ಕೃತಿಯ ಮೂಲಕ ಜಗತ್ತಿಗೆ ಹಂಪಿಯನ್ನು ಮೊದಲು ಪರಿಚಯಿಸಿದ ಶ್ರೇಯಸ್ಸಿಗೆ ಭಾಜನರಾಗಿದ್ದಾರೆ. ಅದೇ ರೀತಿ ೧೭೦೭–೧೮೦೦ರವರೆಗೆ ಕಲೆಕ್ಟರ್ ಆಗಿದ್ದ ಸರ್ ಥಾಮಸ್ ಮನ್ರೋ ಮತ್ತು ೧೮೨೪–೧೮೩೮ ರ ವರೆಗೆ ಕಲೆಕ್ಟರ್ ಆಗಿದ್ದ ಎಫ್. ಡಬ್ಲ್ಯೂ. ರಾಬರ್ಟ್ಸನ್ ಅವರು ಹಂಪಿಯ ಸ್ಮಾರಕಗಳನ್ನು ವೀಕ್ಷಿಸಿ ಅವುಗಳಲ್ಲಿ ಕಲ್ಲಿನ ತೇರು, ವಿರೂಪಾಕ್ಷ ದೇವಾಲಯದ ಮುಖ್ಯ ಗೋಪುರಗಳಿಗೆ ತಡೆಗೋಡೆ ನಿರ್ಮಿಸಿ ಅವುಗಳು ಬೀಳದಂತೆ ಸಂರಕ್ಷಣೆ ಮಾಡಿಸಿದರು.

೧೮೮೫ರಲ್ಲಿ ವಿರೂಪಾಕ್ಷ ದೇವಾಲಯದ ರಥೋತ್ಸವ ನಡೆಸಲು ಬಳ್ಳಾರಿ ಕಲೆಕ್ಟರ್ ಅನುಮತಿ ನೀಡಿದ್ದು ಬಹಳ ಮುಖ್ಯವಾದ ಅಂಶ. ಹಂಪಿಯ ಅಸಂಖ್ಯಾತ ಸ್ಮಾರಕಗಳ ಸಮೂಹವನ್ನು ಅವುಗಳ ವಿಶೇಷತೆಯನ್ನು ಗಮನಿಸಿದ ಯುನೆಸ್ಕೋ ೧೯೮೬ರಲ್ಲಿ ಹಂಪಿ ಪ್ರದೇಶವನ್ನು ವಿಶ್ವ ಪರಂಪರೆಯ ತಾಣವೆಂದು ಘೋಷಿಸಿತು. ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ೫೬ ಸ್ಮಾರಕಗಳನ್ನು ಮತ್ತು ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಸುಮಾರು ೧೨೦೦ ಸ್ಮಾರಕಗಳನ್ನು ಈ ಪ್ರದೇಶದಲ್ಲಿ ಗುರುತಿಸಿದೆ.[೫] ಯುನೆಸ್ಕೋ ನಿರ್ದೇಶನದಂತೆ ಕರ್ನಾಟಕ ಸರ್ಕಾರವು ಹಂಪಿ ವಿಶ್ವಪರಂಪರಾ ಪ್ರದೇಶ ನಿರ್ವಹಣಾ ಪ್ರಾಧಿಕಾರವನ್ನು ೨೦೦೧ ರಲ್ಲಿ ಸ್ಥಾಪಿಸಿದೆ. ಇದು ೨೦೦೨ರ ಕಾಯ್ದೆ ಪ್ರಕಾರ ತನ್ನ ವ್ಯಾಪ್ತಿಯಲ್ಲಿ ಬರುವ ಬಳ್ಳಾರಿ ಜಿಲ್ಲೆಯ ೧೪ ಗ್ರಾಮಗಳು, ಮತ್ತು ಕೊಪ್ಪಳ ಜಿಲ್ಲೆಯ ೧೫ ಗ್ರಾಮಗಳನ್ನು ಒಳಗೊಂಡಂತೆ ಒಟ್ಟು ೨೯ ಗ್ರಾಮಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತದೆ. ಈ ಪ್ರಾಧಿಕಾರವು ಇಲ್ಲಿರುವ ಸಾಂಸ್ಕೃತಿಕ ಮತ್ತು ನೈಸರ್ಗಿಕ ಸಂಪತ್ತನ್ನು ಗುರುತಿಸಿ ಸಂರಕ್ಷಣೆ ಮಾಡುವುದು ಮತ್ತು ಇಲ್ಲಿರುವ ಸ್ಮಾರಕಗಳನ್ನು ಸಂರಕ್ಷಣೆ ಮಾಡುವುದು ಹಾಗೂ ಅನಿಯಮಿತ ಅಭಿವೃದ್ಧಿಯನ್ನು ತಡೆಯುವುದು ಮತ್ತು ಜನರ ಅಭಿವೃದ್ಧಿ ಮಟ್ಟವನ್ನು ಹೆಚ್ಚಿಸುವ ಪ್ರಧಾನ ಉದ್ದೇಶಗಳನ್ನು ಹೊಂದಿದೆ.

**ಹಂಪಿ ಸ್ಥಳನಾಮ**

ವಿಶ್ವ ವಿಖ್ಯಾತ ಹಂಪಿ ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿಗೆ ಸೇರಿದ್ದು, ಭೌಗೋಳಿಕವಾಗಿ ಹಾಗೂ ಚಾರಿತ್ರಿಕವಾಗಿ ತನ್ನದೇ ಆದ ಆಡಳಿತ ಕೇಂದ್ರವಾಗಿ, ಆದರ ರಾಜಧಾನಿಯಾಗಿ ಉಪನಗರವಾಗಿ ಅಲ್ಲದೆ ಸಾಂಸ್ಕೃತಿಕ ಕೇಂದ್ರವಾಗಿ ಪ್ರಸಿದ್ಧಿ ಪಡೆದಿದೆ.

ಹಂಪಿ ಎಂಬ ಪದದ ನಿಷ್ಪತ್ತಿಯ ಕುರಿತಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಅದು ವ್ಯಕ್ತಿವಾಚಕವೊ ಅಥವಾ ಪ್ರದೇಶ ವಾಚಕವೊ ಎಂಬ ಜಿಜ್ಞಾಸೆಯ ಚರ್ಚೆ ಇಂದಿಗೂ ಇತಿಹಾಸ ವಿದ್ವಾಂಸರಲ್ಲಿ ನಡೆದೇ ಇದೆ. ಹಂಪಿಯಲ್ಲಿ ದೊರೆತ ಶಾಸನಗಳು ಮತ್ತು ಇಲ್ಲಿ ರಚಿತವಾದ ಸಾಹಿತ್ಯ ಕೃತಿಗಳು ಹಂಪಿಯನ್ನು ದಾಖಲಿಸಿದ ವಿಷಯವನ್ನು ಆಧಾರವಾಗಿಟ್ಟುಕೊಂಡು ಚರ್ಚೆ ನಡೆದಿರುವುದನ್ನು ಕಾಣಬಹುದಾಗಿದೆ.

'ಪಂಪ' ಎಂಬುದರಿಂದ ಹಂಪಿ ಆಗಿರಬೇಕೆಂದು ಒಂದು ಅಭಿಪ್ರಾಯವಿದೆ. 'ಪಂ' ಅಂದರೆ ಅಮೃತವೆಂದೂ 'ಪ' ಎಂದರೆ ಸ್ವರ್ಣವೆಂದು ಅರ್ಥೈಸಿ, ದೇವರಿಗೆ ಅಮೃತ ಸಮಾನವಾದ ಮೋಕ್ಷವನ್ನು ಸಂಪತ್ ರೂಪವಾದ ಭಾಗವನ್ನು ಕೊಟ್ಟು ರಕ್ಷಿಸುವಂತಹದ್ದಾಗಿರುವುದರಿಂದ ಇದಕ್ಕೆ 'ಪಂಪಾ' ಎಂದು ಹೆಸರಾಯಿತೆಂದು ಪಂಪಾ ಮಹಾತ್ಮ ಕೃತಿಯಲ್ಲಿ ವಿಶ್ಲೇಷಿಸಲಾಗಿದೆ.[೬] ಚಿದಾನಂದಮೂರ್ತಿಯವರು ಪಂಪಾ ಎಂಬುದು ಒಂದು ನದಿ ಈ ನದಿಯ ಉಲ್ಲೇಖ ರಾಮಾಯಣ, ಮಹಾಭಾರತಗಳಲ್ಲಿಯೂ ಬರುತ್ತದೆ. ಇಂದಿಗೂ ಕೂಡ ಈ ಹೆಸರಿನ ನದಿಗಳು ಆಂಧ್ರ ಪ್ರದೇಶಗಳಲ್ಲಿ ಇವೆ ಎಂದು ಹೇಳುತ್ತಾ, ಪಂಪಾ (ಪಂಪ) ದ್ರಾವಿಡ ಭಾಷೆಯ ಪದವಾದರೆ ಅದರ ಮೂಲ ದಟ್ಟವಾಗಿರುವುದು, ಸಂದಣಿ ಎಂಬರ್ಥದ ಕನ್ನಡ ಪಂಪಕ (ಪಪ್ಪಕ) ಪುಷ್ಟಿಕ ಆಗಿರಬಹುದು. ತಮಿಳು–ಪಂಪು, ಪಂಪಲ್, ತೆಲುಗು ಪಂಬು, ಧಾತು –ಪರ(ದು) ಹರಡು ದಟ್ಟ ಅರಣ್ಯದ ಮಧ್ಯೆ ಹರಿಯುವ ನದಿ ಪಂಪಾ (ಪಂಪ) ಆಗಿರಬಹುದು. 'ಪಂಪಾ' ಪದವು ಮೂಲತಃ ನದಿಯನ್ನು ಹೇಳುತ್ತದೆ. "ಪಂಪಾ ನದಿ ಹರಿಯುತ್ತಿದ್ದು, ಪ್ರಾಚೀನ ಜನವಸತಿಯ ಹಂಪಿ ಪ್ರದೇಶದಲ್ಲಿ ಅಲ್ಲಿನ ದೇವತೆ ಪಂಪಾಂಬಿಕೆ ಮುಂದೆ ಆಕೆಯ ದೇವಾಲಯದ ಸುತ್ತ ಹಳ್ಳಿಗಳು ಬೆಳೆದಿದ್ದರಿಂದ ಆ ಊರಿಗೆ 'ಪಂಪೆ' ಎಂದು ನಾಮಕರಣಗೊಂಡು ಬೆಳಕಿಗೆ ಬಂದಿತ್ತು" ಎಂದು ಹೇಳುತ್ತಾರೆ.[೭]

ಸಾಮಾನ್ಯವಾಗಿ ಜನತೆಯು ತುಂಗಭದ್ರಾ ನದಿಯನ್ನು ಹಂಪಿ ಹೊಳೆ, ಪಂಪಾತೀರ್ಥ ಎಂದು ಕರೆಯುವುದುಂಟು. ಇದು ಭೌಗೋಳಿಕವಾಗಿ ಹರಿದು ಬರುತ್ತ ಅಲ್ಲಲ್ಲಿ ಕವಲೊಡೆದಿರುವುದು ಮತ್ತೆ ಕೂಡಿರುವುದು ಅನೇಕ ನಡುಗಡ್ಡೆಗಳನ್ನು ಸೃಷ್ಟಿಸಿರುವುದು ಶಾಖೆಗಳಾಗಿ ಹರಿದು ಹಂಚಿ ಹೋಗಿದ್ದರಿಂದ 'ಪಂಪ' ಅಂದರೆ ಭಾಗಗಳಾಗಿದ್ದು ಎಂಬರ್ಥವನ್ನು ಪಡೆದು ಈ ಭಾಗದ ಜನರ ಬಾಯಿಯಲ್ಲಿ ಹಂಪಿ ಹೊಳೆಯಾಗಿದೆ. 'ದ್ರಾವಿಡಿಯನ್ ಎಟಮಲಾಜಿಕಲ್' ಎಂಬ ನಿಘಂಟುವಿನಲ್ಲಿ ಪಯಲ್, ಪಂಚು, ಪಂಡು, ಪಂಕು ಮೊದಲಾದ ಪದಗಳಿಗೆ 'ವಿಂಗಡಣೆ' ಎಂಬ ಅರ್ಥವಿದೆ.[೮] ಹೀಗಾಗಿ ಈ ಭಾಗದ

ಜನರು ಇಲ್ಲಿನ ನದಿಯಿಂದಾಗಿ ಇದನ್ನು ಪಂಪ ಎನ್ನುತ್ತಾರೆ. ಈ ಜನರ ಬಾಯಲ್ಲಿ ಪದ ಮುಂದೆ ಹಂಪಿಯಾಯಿತು ಎಂದು ಹೇಳಬಹುದಾಗಿದೆ. 'ಪಂಪಾ' ಎಂಬ ಶಬ್ದವು ಭಾಗಶಃ ವ್ಯಕ್ತಿವಾಚಕವಾಗಿರದೆ ನೈಸರ್ಗಿಕ(ನದಿ) ವಾಚಿಕವಾಗಿ ತುಂಗಭದ್ರಾ ನದಿಯಿಂದಲೆ 'ಪಂಪಾ' ಹೆಸರು ಬಂದಿದೆ. ಈ ನದಿಯ ದಂಡೆಯ ಮೇಲೆ ಪಾರ್ವತಿ ನೆಲೆಸಿದಳೆಂದು ಪಂಪಾನದಿ ತೀರದಲ್ಲಿ ಅವಳು ನೆಲೆಸಿದ್ದರಿಂದ ಶಕ್ತಿಗೆ ಅಧಿದೇವತೆಯಾಗಿದ್ದರಿಂದ ಶಕ್ತಿಯ ಆರಾಧನೆ ಹೆಚ್ಚಿತು. ಪಾರ್ವತಿ ಪಂಪಾ ತೀರದಲ್ಲಿ ನೆಲೆಸಿದ್ದರಿಂದ ಇವಳು ಪಂಪಾಯಿನಿಕೆಯಾದಳು. ಜನರ ಬಾಯಲ್ಲಿ ಪಂಪಾದೇವಿ ಹಂಪಾ ದೇವಿಯಾದಳು. ನಂತರ ಈಕೆಯ ಪ್ರಭಾವದಿಂದ ನದಿಯು ಪಂಪಾ ತೀರವಾಗಿ ಕೊನೆಗೆ 'ಹಂಪಿ' ಎಂದು ಹೆಸರು ಪಡೆದು ಪ್ರಸಿದ್ಧಿಯನ್ನು ಪಡೆಯಿತು. ಹಂಪಿಯು ರಾಮಾಯಣ ಕಾಲದಲ್ಲಿ ವಾಲಿ-ಸುಗ್ರೀವರ ರಾಜಧಾನಿಯಾದ ಕಿಷ್ಕಿಂದೆಯಾಗಿತೆಂಬ ಜನಾಭಿಪ್ರಾಯಯವೂ ಜೀವಂತವಾಗಿದೆ. ೧೦ ನೆಯ ಶತಮಾನದಿಂದೀಚೆಗೆ ಇದನ್ನು 'ಪಂಪಾಕ್ಷೇತ್ರ', 'ಹಂಪಿ', 'ಹೊಸಪಟ್ಟಣ', 'ವಿರೂಪಾಕ್ಷ ತೀರ್ಥ,' 'ವಿಜಯನಗರ', 'ವಿದ್ಯಾನಗರ' ಮತ್ತು ದಕ್ಷಿಣ ಕಾಶಿ ಮುಂತಾದ ಪರ್ಯಾಯ ಹೆಸರುಗಳಿಂದ ಶಾಸನಗಳಲ್ಲಿ ಉಲ್ಲೇಖಿಸಲಾಗಿರುವುದನ್ನು ಗಮನಿಸಬಹುದು.[೯]

ಕ್ರಿ.ಶ. ೧೧೯೯ರ ಇಮ್ಮಡಿ ರಾಚಮಲ್ಲನ ಶಾಸನವು 'ಪಂಪಾಕ್ಷೇತ್ರ,' 'ಪಂಪಾತೀರ್ಥ' ವಿರೂಪಾಕ್ಷ ತೀರ್ಥ ಎಂದು ಕರೆದಿದೆ.[೧೦] ವಿರೂಪಾಕ್ಷ ದೇವಾಲಯದ ಕನಕಗಿರಿಗೋಪುರದಲ್ಲಿರುವ ಹೊಯ್ಸಳ ಸೋಮೇಶ್ವರನ ಕ್ರಿ.ಶ. ೧೨೩೬ರ ಶಾಸನವು "ಪಂಪಾಕ್ಷೇತ್ರ"ವೆಂದೂ ಇದೆ ಗೋಪುರದ ಪೂರ್ವಕ್ಕಿರುವ ಎರಡನೆಯ ಹರಿಹರನ ಕಾಲದ ಶಾಸನವು "ಶ್ರೀ ಬುಕ್ಕರಾಜೋ ವಿಜಯಾಧಿದಾನಂ ಪುರಂದರಂಶ್ರೀ" ಎಂಬ ಉಲ್ಲೇಖವನ್ನೊಳ್ಳಗೊಂಡಿದೆ.[೧೧] ಈ ಶಾಸನದಲ್ಲಿ ಉಕ್ತವಾದ ವಿಚಾರದ ಅರ್ಥ ಇಂತಿದೆ, 'ವಿಜಯ' ಎಂಬ ಅಭಿದಾನದಿಂದ ಕಂಗೊಳಿಸುವ ನಗರದಲ್ಲಿ ಶ್ರೀ ಬುಕ್ಕರಾಯನು ಆಳ್ವಿಕೆ ಮಾಡುತ್ತಿದ್ದನು. ಈ ಶಾಸನವು ಹಂಪಿಯನ್ನು "ವಿಜಯ" ಎಂದೂ[೧೨] ಹಾಗೂ ನದಿ ದಂಡೆಯ ನರಸಿಂಹ ದೇವಾಲಯದ ಪೂರ್ವಕ್ಕೆ ಇರುವ ಬಂಡೆಯ ಮೇಲಿನ ಶಾಸನವು 'ಪಂಪಾತೀರ'[೧೩] ಎಂದೂ, ಇದರ ಪಕ್ಕದ ಶಾಸನದಲ್ಲಿ "ಪಂಪಾ ತೀರ ನಿಲಯ" ಎಂದು ಕರೆದಿದೆ.[೧೪] ಈ ಶಾಸನವು 'ವಿರೂಪಾಕ್ಷ' ನೇ ಪಂಪಾ ಸ್ಥಳದ ಒಡೆಯ ಎಂಬಾರ್ಥ ಎಂದಿರುವುದರಿಂದ ಹಂಪಿಯನ್ನು 'ಪಂಪಾ' ಎಂದು ಕರೆಯುತ್ತಿದ್ದರೆಂದು ತಿಳಿಯಬಹುದಾಗಿದೆ.

ಕ್ರಿ.ಶ. ೧೪೦೦ಕ್ಕೆ ಸೇರುವ ವಿಜಯ ವಿಠ್ಠಲ ದೇವಾಲಯದ ಹೊಂಡದ ಬಂಡೆಯ ಮೇಲಿನ ಈ ಶಾಸನದಲ್ಲಿ "ತುಂಗಭದ್ರಾ ತೀರ(ದ)ಲು ಭಾಸ್ಕರ ಕ್ಷೇತ್ರ, ಪಂಪಾ ಸರಸ್ಸಿನ" ಎಂಬ ಉಲ್ಲೇಖವಿದೆ.[೧೫] ಇದರಲ್ಲಿ ತುಂಗಭದ್ರಾತೀರದ ಭಾಸ್ಕರ ಕ್ಷೇತ್ರ ಪಂಪಾ ಸರಸ್ಸು" ಎಂದು ಕರೆದಿದೆ. ಆನೆ ಸಾಲಿನ ಹಿಂದಿರುವ ಜೈನ ಬಸದಿಯ ಗೋಡೆಯಲ್ಲಿನ ಎರಡನೇ ದೇವರಾಯನ ಕ್ರಿ.ಶ. ೧೪೨೪ರ ಶಾಸನದಲ್ಲಿ.................. ವಿಜಯನಗರಸ್ಯ..... ವಿಜಯನಗರ ರೀತಿ ತಸ್ಮಿ ನಗರೀ.... ಎಂದೂ,[೧೬] ಅಲ್ಲಿ ಇರುವ ಬೆಟ್ಟದ ಮೇಲಿನ ಗುಂಡಿನ ಮೇಲೆ ಇರುವ ಶಾಸನವು "ವಿಜಯನಗರ" ಪಟ್ಟಣ ಎಂದೂ,[೧೭] ಗಾಣಗಿತ್ತಿ ಬಸದಿಯ ಮುಂಭಾಗದ ಮಹಾಸ್ತಂಭದಲ್ಲಿನ ಕ್ರಿ.ಶ. ೧೩೮೬ರ ಶಾಸನದಲ್ಲಿ 'ವಿಜಯಾಭಿದಂ ನಗರಂ' ಎಂದು ಉಲ್ಲೇಖಗೊಂಡಿದೆ.[೧೮] ವಿಜಯನಗರ ಪಟ್ಟಣ, ವಿಜಯಾಭಿದನಗರ, ವಿಜಯನಗರ ಎಂದು ಬುಕ್ಕರಾಯ ಮತ್ತು ಎರಡನೇ ದೇವರಾಯನ ಕಾಲದ ಶಾಸನಗಳು ಹಂಪಿಯನ್ನು ಈ ಮೇಲ್ಕಂಡ ಹೆಸರಿನಿಂದ ಕರೆಯುತ್ತವೆ. ಪ್ರೌಢದೇವರಾಯನ ನಿಂಬಾಪುರದ ಕಪಿಲಾಶ್ರಮದ ಬಳಿ ಇರುವ ಕ್ರಿ.ಶ. ೧೪೫೫ರ ಶಾಸನವು ಶ್ರೀ ತುಂಗಭದ್ರಾ ಪರಿತೀನಗರೇ........ ವಿಜಯನಗರೀ...........ಎಂದೂ ಹಂಪಿಯನ್ನು ತುಂಗಭದ್ರಾ ಪರಿಬೇನಗರ 'ವಿಜಯನಗರೀ' ಎಂದು ದಾಖಲಿಸಿದೆ.[೧೯]

ಕೃಷ್ಣದೇವರಾಯನ ಕಾಲದ ಕ್ರಿ.ಶ. ೧೫೨೨ರ ಶಾಸನವು ಕಮಲಾಪುರದ ವಾಯುವ್ಯ ದಿಕ್ಕಿಗೆ ಇರುವ ಕುಂಬಾರ ಕುಂಟೆಯ ದರ್ಗಾ ಬಳಿಯ ಹೊಂಡದಲ್ಲಿದೆ. ಈ ಶಾಸನವು 'ವಿಜಯನಗರ ಪಟ್ಟಣ' ಎಂದೂ ಹೇಳಿದೆ.[೨೦] ಮಾತಂಗ ಪರ್ವತದ ಮೇಲೆ ಇರುವ ಅಚ್ಯುತ ದೇವರಾಯನ ಕ್ರಿ.ಶ.೧೫೩೨ರ ಶಾಸನವು 'ವಿಜೇಯನಾಗರ' ಎಂದೂ.[೨೧] ಸದಾಶಿವರಾಯನ ಕ್ರಿ.ಶ. ೧೫೪೫ರ ಶಾಸನವು 'ವಿದ್ಯಾನಗರ' ಎಂದು ದಾಖಲಿಸಿವೆ.[೨೨] ಕ್ರಿ.ಶ. ೧೩೭೯ ರ ಎರಡನೆಯ ಹರಿಹರನ ಕಾಲದ ಶಾಸನವು 'ಪಂಪಾಂಬುಧಿ'[೨೩] ಎಂದೂ, ಲಕ್ಷ್ಮೀಧರನ ಕ್ರಿ.ಶ. ೧೪೧೦ರ ಶಾಸನವು 'ಪಂಪಾಪುರ'ವೆಂದೂ[೨೪] ಕ್ರಿ.ಶ. ೧೧೯೯ರ ಕುರುಗೋಡು ಸಿಂಧರ ಕಲಿದೇವನ ಶಾಸನವು 'ಪಂಪಾತೀರ್ಥ', 'ಹಂಪೆ' ಎಂದು ದಾಖಲಿಸಿದೆ.[೨೫] ಹೀಗೆ ಹಂಪಿಯನ್ನು 'ಹಂಪಿಯ ಮೃಡರ' ಇನ್ನೂ ಹಲವಾರು ನಾಮಗಳಿಂದ ಶಾಸನಗಳು ದಾಖಲಿಸಿವೆ.[೨೬] ಶಾಸನಗಳಂತೆ ಕನ್ನಡದಲ್ಲಿ ರಚನೆಯಾದ ಹಲವಾರು ಸಾಹಿತ್ಯ ಕೃತಿಗಳು ಸಹ ಹಂಪಿಯ ಹೆಸರನ್ನು ತಮ್ಮದೆ ಆದ ದೃಷ್ಟಿಕೋನದಲ್ಲಿ ದಾಖಲಿಸಿವೆ. ಆ ಸಾಹಿತ್ಯ ಕೃತಿಗಳಲ್ಲಿರುವ 'ಹಂಪಿ' ಹೆಸರಿನ ಉಲ್ಲೇಖಗಳನ್ನು ಹೀಗೆ ಚರ್ಚಿಸಲಾಗಿದೆ.

ಮಹಾಕವಿ ಹರಿಹರ ತನ್ನ ಎಲ್ಲ ಕಾವ್ಯಗಳಲ್ಲಿ "ಪಂಪಾಪುರದರಸ" ಹಂಪೆಯಾಳ್ದನೆಂದು ವಿರೂಪಾಕ್ಷನನ್ನು ಸ್ತುತಿಸಿದ್ದಾನೆ. ಅಂದರೆ ಹಂಪೆಯನ್ನು ಪಂಪಾಪುರ, ಹಂಪೆ ಎಂದು ಆತ ಕರೆದಿದ್ದಾನೆ. ರಾಘವಾಂಕನು ಕೂಡ "ಹಂಪೆಯ ಹರೀಶ್ವರನ ವರಸುತ" ಎಂದು ತನ್ನ ಕಾವ್ಯಗಳಲ್ಲಿ ಹೇಳಿಕೊಂಡಿದ್ದಾನೆ. ಹರಿಶ್ಚಂದ್ರ ಕಾವ್ಯದಲ್ಲಂತೂ ವಿರೂಪಾಕ್ಷನನ್ನು "ಪಂಪಾಪತಿ" "ಪಂಪಾಧಿಪತಿ" ಎಂದು ಹಂಪಿಯನ್ನು ಪಂಪಾ, ಹಂಪೆ ಎಂದು ಕರೆದಿದ್ದಾನೆ. ಶಿವತತ್ವ ಚಿಂತಾಮಣಿ, ಕೃತಿಯಲ್ಲಿ ಪ್ರೌಢದೇವರಾಯನ ಪ್ರಧಾನಿ ಲಕ್ಕಣ್ಣ ದಂಡೇಶನ್ನು ಹಂಪೆಯನ್ನು 'ವಿಜಯ ಕಲ್ಯಾಣ' 'ವಿಜಯನಗರಿ'[೨೭] 'ವಿಜಯ ಕಲ್ಯಾಣಪುರ'. 'ವಿಜಯ ಕಲ್ಯಾಣ ಪಟ್ಟಣ' 'ಪಂಪಾಕ್ಷೇತ್ರ',[೨೮] 'ಪಂಪಾಪುರ'[೨೯] ಎಂಬ ಇತ್ಯಾದಿ ಹೆಸರುಗಳಿಂದ ಹಂಪಿಯನ್ನು ವಿವಿಧ ಹೆಸರುಗಳನ್ನು ಉಲ್ಲೇಖಿಸಿದ್ದಾನೆ. ಕಲ್ಮಠದ ಪ್ರಭುದೇವ ತನ್ನ ಲಿಂಗಲೀಲಾವಿಲಾಸ ಚಾರಿತ್ರದಲ್ಲಿ ವಿದ್ಯಾನಗರವೆಂದೂ,[೩೦] ಚಂದ್ರಶೇಖರ ಕವಿ ತನ್ನ ಪಂಪಾಸ್ಥಾನ ವರ್ಣನಂ ಕಾವ್ಯದಲ್ಲಿ "ಹಂಪೆಯ ವಿರೂಪಾಕ್ಷಂ"[೩೧] 'ಪಂಪಾ ಮಹಾಕ್ಷೇತ್ರ' 'ಪಂಪಾಕ್ಷೇತ್ರ[೩೨] ಹಾಗೂ ಪಂಪಾಪುರಿ ಎಂದು ಕರೆದಿದ್ದಾನೆ.[೩೩]

ಹಂಪಿಯನ್ನು ಶಾಸನಗಳು ಹಾಗೂ ಕಾವ್ಯಗಳು 'ಪಂಪಾತೀರ್ಥ', ಪಂಪಾವರ ಕ್ಷೇತ್ರ, ದಕ್ಷಿಣಕಾಶಿ ವಿರೂಪಾಕ್ಷತೀರ್ಥ, ಪಂಪಾಕ್ಷೇತ್ರ, ವಿಜಯ, ಪಂಪಾಪತಿ, ಪಂಪಾತೀರ ನಿಲಯ, ಪಂಪಾ, ಭಾಸ್ಕರ ಕ್ಷೇತ್ರ, ಪಂಪಾ, ಸರಸ್ಸು, ವಿಜಯನಗರ ಪಟ್ಟಣ, ವಿಜಯಾಭಿದನಗರ, ತುಂಗಭದ್ರಾ, ಪರಿಬೇನಗರ, ವಿಜಯನಗರಿ, ವಿಜೇಯನಗರ ಪಟ್ಟಣ, ಪಂಪಾಂಬುಧಿ, ಪಂಪಾಪುರ, ಹಂಪಾತೀರ್ಥ, ಹಂಪೆ, ವಿಜಯ ಕಲ್ಯಾಣ, ವಿಜಯಕಲ್ಯಾಣಪುರ, ವಿದ್ಯಾನಗರ, ಪಂಪಾಮಹಾಕ್ಷೇತ್ರ ಪಂಪಾಪುರಿ ಎಂಬ ಇತ್ಯಾದಿ ಹೆಸರುಗಳಿಂದ ಕರೆಯಲ್ಪಟ್ಟಿದೆ. ಆದರೆ ಇಂದಿಗೂ ಅದು 'ಹಂಪಿ' ಎಂಬ ಹೆಸರಿನಿಂದ ಖ್ಯಾತಿ ಪಡೆದಿರುವುದು ಐತಿಹಾಸಿಕ ಸಂಗತಿಯಾಗಿದೆ.

**ರಾಜಕೀಯ ಇತಿಹಾಸ**

ಹಂಪಿ ಪರಿಸರದ ಚಾರಿತ್ರಿಕ ಹಿನ್ನೆಲೆಯನ್ನು ಅವಲೋಕಿಸಿದಾಗ ನಮಗೆ ದೊರಕುವ ಆಧಾರಗಳೆಂದರೆ ಶಾಸನಗಳು. ಇವುಗಳಲ್ಲಿ ಪ್ರಮುಖವಾಗಿ ಕೊಪ್ಪಳ, ನಿಟ್ಟೂರು ಮತ್ತು ಉದಯಗೊಳಂನಲ್ಲಿ ದೊರಕಿರುವ ಮೌರ್ಯ ಅರಸ ಅಶೋಕನ ಧರ್ಮಶಾಸನಗಳು ಹಂಪಿಯ ಪ್ರಾಚೀನತೆಯನ್ನು ತಿಳಿದುಕೊಳ್ಳವಲ್ಲಿ ಸಹಾಯಕವಾಗಿವೆ. ಎರಡನೆಯ ಶತಮಾನಕ್ಕೆ ಸೇರಿದ ಅಮರಾವತಿಯ ಶೈಲಿಯ ಸುಣ್ಣದಕಲ್ಲಿನ ಬೌದ್ಧ ಶಿಲಾಫಲಕಗಳು ಹಂಪಿಯ

ಉತ್ಖನನದಲ್ಲಿ ದೊರೆತಿವೆ. ಇದರಿಂದ ಈ ಪರಿಸರದಲ್ಲಿ ಬೌದ್ಧಧರ್ಮವು ಪ್ರಚಲಿತದಲ್ಲಿತ್ತು ಎಂಬುದನ್ನು ಈ ಶಾಸನ ದೃಢಪಡಿಸುತ್ತವೆ.[೩೪] ಈ ಪ್ರದೇಶವನ್ನು ಆಳಿದ ಅರಸು ಮನೆತನಗಳಲ್ಲಿ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ದೇವಗಿರಿಯ ಯಾದವರು ಮತ್ತು ಇತರ ಅರಸು ಮನೆತನದವರು ಪ್ರಮುಖರು. ಅವರ ಕಾಲದ ಶಾಸನ ಮತ್ತು ಸ್ಮಾರಕಗಳ ನಿರ್ಮಾಣಗಳ ಇತಿಹಾಸದಿಂದ ಈ ಪ್ರದೇಶದ ಚರಿತ್ರೆಯನ್ನು ತಿಳಿಯಬಹುದು. ಕೆಲಕಾಲ ಈ ಪ್ರದೇಶದಲ್ಲಿ ಕಂಪ್ಲಿ ಮತ್ತು ಕುರುಗೋಡು ಅರಸರು ಕೂಡಾ ಆಳ್ವಿಕೆಯನ್ನು ನಡೆಸಿದ್ದಾರೆ ಎಂಬ ವಿಷಯಗಳು ಐತಿಹಾಸದಿಂದ ತಿಳಿದುಬರುತ್ತವೆ.[೩೫]

೧೩ನೆಯ ಶತಮಾನದ ಅಂತ್ಯದ ವೇಳೆಗೆ ದಕ್ಷಿಣ ಭಾರತದ ಸ್ಥಳೀಯ ರಾಜರ ಮೇಲೆ ಮುಸಲ್ಮಾನರು ಅಕ್ರಮಣಕಾರಿ ದಾಳಿಗಳನ್ನು ನಡೆಸುತ್ತಿದ್ದರು. ಅವರ ಆಕ್ರಮಣಗಳನ್ನು ಪ್ರಬಲವಾಗಿ ಎದುರಿಸಲು ವಿಜಯನಗರ ಸಾಮ್ರಾಜ್ಯವು ಸ್ಥಾಪನೆಯಾಯಿತು. ಮುಸಲ್ಮಾನರ ಆಕ್ರಮಣಗಳೆ ಇಂಥ ಸಾಮ್ರಾಜ್ಯದ ಸ್ಥಾಪನೆಗೆ ಕಾರಣವಾದ ಪ್ರಮುಖ ಅಂಶಗಳಾಗಿರುವುದನ್ನು ವಿದ್ವಾಂಸರು ಗುರುತಿಸುತ್ತಾರೆ. ಸಂಗಮ ವಂಶದ ಸಹೋದರಾದ ಹರಿಹರ ಮತ್ತು ಬುಕ್ಕರು ಕ್ರಿ.ಶ. ೧೩೩೬ರ ಭವ್ಯವಾದ ವಿಜಯನಗರ ಪಟ್ಟಣವನ್ನು ರಾಜಧಾನಿಯನ್ನಾಗಿಸಿಕೊಂಡು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಈ ರಾಜ್ಯವು ಬಲಶಾಲಿಯಾಗಿ ವರ್ಧಿಸಿ ಸಾಕಷ್ಟು ಸಮಯದವರೆಗೆ ಆಳ್ವಿಕೆಯನ್ನು ನಡೆಸಿತ್ತು. ಸಾಮ್ರಾಜ್ಯದ ಉತ್ತುಂಗ ಕಾಲದಲ್ಲಿ ಉತ್ತರದ ಕೃಷ್ಣಾ ನದಿಯವರೆಗೆ ದಕ್ಷಿಣದಲ್ಲಿ ಹಿಂದೂ ಮಹಾಸಾಗರದವರೆಗೆ ಮತ್ತು ಪೂರ್ವ, ಪಶ್ಚಿಮ ಕಡಲ ತೀರದವರೆಗೂ ವ್ಯಾಪಿಸಿತ್ತು.[೩೬]

ವಿಜಯನಗರದ ವಿವಿಧ ಅರಸುಮನೆತನಗಳಾದ ಸಂಗಮ, ಸಾಳುವ, ತುಳು ವಂಶಗಳಿಗೆ ಸೇರಿದ ಹಲವಾರು ಅರಸರುಗಳು ಎರಡು ಶತಮಾನಗಳಿಗಿಂತ ಅಧಿಕ ಕಾಲ ಆಳ್ವಿಕೆಯನ್ನು ನಡೆಸಿದರು.[೩೭] ಕ್ರಿ.ಶ. ೧೫೬೫ರಲ್ಲಿ ಜರುಗಿದ ರಕ್ಕಸ–ತಂಗಡಗಿ (ತಾಳಿಕೋಟೆ) ನಿರ್ಣಾಯಕ ಯುದ್ಧವು ರಾಜಧಾನಿ ಮತ್ತು ಸಾಮ್ರಾಜ್ಯದ ಮೇಲೆ ದುರಂತವನ್ನು ಉಂಟುಮಾಡಿತು. ಅದರ ತರುವಾಯ ಪೆನುಗೊಂಡ ಮತ್ತು ಚಂದ್ರಗಿರಿಯ ರಾಜಧಾನಿಯನ್ನಾಗಿಸಿಕೊಂಡು ಅರವೀಡು ವಂಶದ ಅರಸರ ಅಧೀನದಲ್ಲಿ ವಿಜಯನಗರ ಸಾಮ್ರಾಜ್ಯ ಒಂದು ನೂರು ವರ್ಷಗಳ ಕಾಲ ಉಳಿದು ಬಂದಿದೆ. ಆದರೆ ತಾನು ಕಳೆದುಕೊಂಡ ವೈಭವವನ್ನು ಮರಳಿ ಪಡೆಯಲಾಗಲಿಲ್ಲ. ವಿಜಯನಗರ ಸಾಮ್ರಾಜ್ಯದ ಅವನತಿ

ನಂತರ ವಿಜಾಪುರ ಸುಲ್ತಾನರು, ಮರಾಠರು, ಮೊಘಲರು, ಸ್ಥಳೀಯ ಪಾಳೇಗಾರರ ಹೈದರಾಲಿ ಮತ್ತು ಟಿಪ್ಪುಸುಲ್ತಾನನ ಕಾಲದಲ್ಲಿ ಆಳ್ವಿಕೆ ನಡೆಸಿದ್ದು ಗಮನಾರ್ಹ. ವಿಜಯನಗರದ ಕೊನೆಯ ಅರಸ ಪೆನುಗೊಂಡೆಯಲ್ಲಿದ್ದ ವೆಂಕಟಪತಿ ದೇವನು ಈ ಭಾಗವನ್ನು ಹರಪನಹಳ್ಳಿ ಪಾಳೆಯಗಾರರಿಗೆ ಬಿಟ್ಟುಕೊಟ್ಟನು. ಮುಂದೆ ಹಂಪಿ ಹಲವಾರು ಏಳುಬೀಳುಗಳನ್ನು ಕಂಡು ಬ್ರಿಟಿಷರ ಕೈವಶವಾಯಿತು. ಕ್ರಿ.ಶ. ೧೮೮೦ ಡಿಸೆಂಬರ್‌ನಲ್ಲಿ ನಿಜಾಮನು ಬಳ್ಳಾರಿಯನ್ನು ಬ್ರಿಟಿಷರಿಗೆ ಬಿಟ್ಟುಕೊಟ್ಟನು. ದತ್ತಿ ಮಂಡಲದಲ್ಲಿ ಬಳ್ಳಾರಿ ನಾಲ್ಕನೆಯದಾಗಿತ್ತು. ಆಂಗ್ಲರು ಇಲ್ಲಿಗೆ ೧೭೯೪ರಲ್ಲಿ ಬಂದರೂ ಅಧಿಕೃತವಾಗಿ ತಮ್ಮ ಆಡಳಿತವನ್ನು ಪ್ರಾರಂಭಿಸಿದ್ದು ಮಾತ್ರ ಕ್ರಿ.ಶ. ೧೮೦೦ರ ನಂತರವೆಂಬುದನ್ನು ದಾಖಲಿಸಲಾಗಿದೆ. ಅವರು ಬಳ್ಳಾರಿ ಪ್ರದೇಶದೊಂದಿಗೆ ಹಂಪಿಯ ಪರಿಸರವನ್ನು ಸಹ ತಮ್ಮ ಆಡಳಿತದ ವ್ಯಾಪ್ತಿಗೊಳಪಡಿಸಿದರು.

ಮದ್ರಾಸ್ ಸಂಸ್ಥಾನದ ವಾಯುವ್ಯ ದಿಕ್ಕಿಗಿರುವ ಬಳ್ಳಾರಿ ಜಿಲ್ಲೆಯು ತನ್ನದೇ ಆದ ಭೌಗೋಳಿಕ ಲಕ್ಷಣಗಳನ್ನು ಹೊಂದಿದೆ. ಈ ಜಿಲ್ಲೆಯನ್ನು ಉತ್ತರಭಾಗದಲ್ಲಿ ಹರಿಯುವ ತುಂಗಭದ್ರಾ ನದಿ, ಪಶ್ಚಿಮಕ್ಕೆ ಅವಿಭಜಿತ ಧಾರವಾಡ, ಉತ್ತರಕ್ಕೆ ರಾಯಚೂರು ಜಿಲ್ಲೆಗಳನ್ನು ಪ್ರತ್ಯೇಕಿಸಿತ್ತು. ದಕ್ಷಿಣಕ್ಕೆ ಮೈಸೂರು ಸಂಸ್ಥಾನದಲ್ಲಿದ್ದ ಚಿತ್ರದುರ್ಗ ಜಿಲ್ಲೆ ಗಡಿ ಪ್ರದೇಶವಾಗಿತ್ತು. ಹಂಪಿ ಒಳಗೊಂಡಂತೆ ಬಳ್ಳಾರಿ ಜಿಲ್ಲೆಯ ಈ ಪ್ರದೇಶವನ್ನು ಒಂದು ರೆವಿನ್ಯೂ ಜಿಲ್ಲೆಯಾಗಿ ವಿಭಾಗಿಸಿಕೊಂಡು ಅದರಲ್ಲಿ ಹಲವು ತಾಲೂಕು ಮತ್ತು ಫಿರ್ಕಾಗಳನ್ನಾಗಿ ವಿಂಗಡಿಸಿಕೊಂಡು ತಮ್ಮ ಆಡಳಿತ ಪ್ರಾರಂಭಿಸಿದರು. ಸರ್ ಥಾಮಸ್ ಮನ್ರೋ ಈ ಪ್ರದೇಶಗಳಿಗೆ ಪ್ರಥಮ ಕಲೆಕ್ಟರ್‌ನಾಗಿ ಬಂದರು. ಈ ರೀತಿ ಬಂದ ಹಲವಾರು ಕಲೆಕ್ಟರುಗಳು ಇವರನ್ನು ಒಳಗೊಂಡಂತೆ ವಿಶೇಷವಾಗಿ ಹಂಪಿ ಪರಿಸರದ ಸ್ಮಾರಕಗಳ ಜೀರ್ಣೋದ್ಧಾರಕ್ಕೆ ಆಡಳಿತಾತ್ಮಕವಾಗಿ ಸಹಾಯ ನೀಡುವುದರೊಂದಿಗೆ ತಾವು ಶ್ರಮಿಸಿದ್ದಾರೆ. ಪ್ರಸಿದ್ಧ ಅರಸರುಗಳ ಕಾಲದಲ್ಲಿ ಇಲ್ಲಿಗೆ ಭೇಟಿ ನೀಡಿದ ಅರೇಬಿಯಾ, ಇಟಲಿ, ಪರ್ಶಿಯಾ, ಪೋರ್ಚುಗಲ್ ಮತ್ತು ರಷ್ಯಾಗೆ ಸೇರಿದ ಪ್ರವಾಸಿಗರು ಮನತುಂಬಿ ಹೊಗಳಿದ್ದಾರೆ. ಮುಖ್ಯವಾಗಿ ಫೆರಿಸ್ತಾ, ನಿಕೊಲೊದೆಕೊಂಟಿ, ಅಬ್ದುಲ್ ರಜಾಕ್ ಹಾಗೂ ಫರ್ಡಿನಾಂಡ ನ್ಯೂನಿಜ್ ವಿಜಯನಗರದ ಅರಸರನ್ನು ಮತ್ತು ಸಾಮ್ರಾಜ್ಯದ ವೈಭವವನ್ನು ಕುರಿತು ಅತ್ಯಂತ ವಿವರವಾಗಿ ತಮ್ಮ ಪ್ರವಾಸ ಕಥನದಲ್ಲಿ ವಿವರಿಸಿದ್ದಾರೆ.[೩೮]

## ಹಂಪಿ ವಿಶ್ವಪಾರಂಪರಿಕ ಸಂರಕ್ಷಣಾ ಸ್ಮಾರಕಗಳು

ಕರ್ನಾಟಕದಲ್ಲಿ ಹಂಪಿ ಪ್ರಾಚೀನ ಕಾಲದಿಂದಲೂ ಪ್ರಖ್ಯಾತವಾದ ಪ್ರದೇಶವೆಂಬ ಖ್ಯಾತಿಯನ್ನು ಹೊಂದಿದೆ. ಪ್ರಾಗಿತಿಹಾಸ ಕಾಲದಿಂದ ಇಂದಿನವರೆಗೂ ಅವಿರತವಾಗಿ ಅನೇಕ ರಾಜ ಮನೆತನಗಳು ಇಲ್ಲಿ ಆಳಿ ಅಳಿದಿವೆ. ಭಾರತದ ಇತಿಹಾಸದಲ್ಲಿ ಹಂಪಿಯ ಪಾತ್ರ ಅವಿಸ್ಮರಣೀಯವಾದದ್ದು. ಮೌರ್ಯರು, ಶಾತವಾಹನರು, ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು ಮುಂತಾದ ರಾಜವಂಶಗಳು ಆಡಳಿತ ನಡೆಸಿ ಸಾಹಿತ್ಯ, ಸಂಗೀತ, ಕಲೆ, ವಾಸ್ತುಶಿಲ್ಪ ಕಲೆಗೆ ಪ್ರೋತ್ಸಾಹ ನೀಡಿವೆ. ಎಲ್ಲ ರಾಜಮನೆತನಗಳು ಅಂದರೆ ಮೌರ್ಯರಿಂದ ವಿಜಯನಗರದವರೆಗೆ ಹಂಪಿ ಹಾಗೂ ಅದರ ಪರಿಸರದಲ್ಲಿ ತಮ್ಮ ಛಾಪನ್ನು ಮೂಡಿಸಿವೆ. ಪ್ರಾಚೀನ ಪರಂಪರೆಯ ಕುರುಹುಗಳು ಹಂಪಿ ಹಾಗೂ ಸುತ್ತಲ ಪ್ರದೇಶದಲ್ಲಿ ಕಾಣಬಹುದಾಗಿದೆ. ಹಂಪಿಯ ಸ್ಮಾರಕಗಳು, ಅವಶೇಷಗಳು, ವಿಶ್ವಪರಂಪರೆ ಪಟ್ಟಿಯಲ್ಲಿ ಸಂರಕ್ಷಿತ ಸ್ಮಾರಕಗಳಾಗಿವೆ. ವಿಶ್ವಪರಂಪರೆ ಪಟ್ಟಿಯಲ್ಲಿ ಸೇರ್ಪಡೆಯಾಗಿರುವ ಸ್ಮಾರಕಗಳನ್ನು ಈ ಕೆಳಗಿನಂತೆ ಕಾಣಬಹುದು.

೧. ಅನಂತಶಯನಗುಡಿ ದೇವಾಲಯ
೨. ಹೇಮಕೂಟದ ದೇವಾಲಯಗಳ ಸಮೂಹ
೩. ಕಡಲೆಕಾಳು ಗಣೇಶನ ದೇವಾಲಯ
೪. ಏಕಶಿಲಾ ನಂದಿ
೫. ಸಾಸಿವೆಕಾಳು ಗಣೇಶನ ದೇವಾಲಯ
೬. ವಿಷ್ಣುಪಾದ ದೇವಾಲಯ
೭. ಸತಿಕಲ್ಲುಗಳು ಮತ್ತು ಚಂಡಿಕೇಶ್ವರ ದೇವಾಲಯ
೮. ಸರಸ್ವತಿ ದೇವಾಲಯ
೯. ಡಣ್ಣಾಯಕನ ಆವರಣದಲ್ಲಿನ ಕಹಳೆ ಗೋಪುರ
೧೦. ದೊಡ್ಡ ಕಟ್ಟಡದ ಅಧಿಷ್ಠಾನದ ಅವಶೇಷ (ಡಣ್ಣಾಯಕನ ಆವರಣದಲ್ಲಿ ನೈರುತ್ಯ ದಿಕ್ಕಿಗಿರುವ ಕಟ್ಟಡ)
೧೧. ಸರ್ವೆನಂಬರ್ ೩೫ರಲ್ಲಿನ ಅರಮನೆಯ ತಳಪಾಯ
೧೨. ಅರಮನೆಯ ಅಡಿಪಾಯ (ಡಣ್ಣಾಯಕನ ಆವರಣ)

೧೩. ಜನಾನ ಆವರಣದಲ್ಲಿರುವ ರಾಣಿಯ ಅರಮನೆಯ ಅಡಿಪಾಯ

೧೪. ಭೀಮನ ಬಾಗಿಲು

೧೫. ಭೋಜನಶಾಲೆ (ಷಟ್‌ಕೋನಾಕೃತಿ ಮಂಟಪದ ಹತ್ತಿರ)

೧೬. ಚಂದ್ರಶೇಖರ ದೇವಾಲಯ

೧೭. ಗುಮ್ಮಟದ್ವಾರ (ಕೋಟೆಯ ಪೂರ್ವಕ್ಕೆ)

೧೮. ಆನೆ ಕಟ್ಟುವ ಕಟ್ಟಡ

೧೯. ಕಾವಲುಗಾರರ ಮನೆ (ಆನೆ ಕಟ್ಟಡದ ಹತ್ತಿರ)

೨೦. ಹಜಾರ ರಾಮಚಂದ್ರ ದೇವಾಲಯ

೨೧. ರಾಜ ಸಭಾಗೃಹದ ಅಡಿಪಾಯ

೨೨. ಸಿಂಹಾಸನ ಕಟ್ಟೆ

೨೩. ಪಾರ್ಶ್ವನಾಥ ಜೈನಬಸದಿ ಮತ್ತು ಶಾಸನಗಳು

೨೪. ಕುಂತುನಾಥ (ಗಾಣಗಿತ್ತಿ ಜೈನಬಸದಿ)

೨೫. ಸಾರ್ವಜನಿಕ ದೊಡ್ಡ ಸ್ಥಳ

೨೬. ಕಲ್ಲಿನ ನೀರಿನ ದೋಣಿ

೨೭. ದೊಡ್ಡ ಕಲ್ಲಿನ ಬಾಗಿಲು

೨೮. ಕಲ್ಲಿನ ತೂಗು ಕಾಲುವೆ

೨೯. ಭೂಮಿ ಮಟ್ಟದ ಕಿರು ದೇವಾಲಯ

೩೦. ಭೂಮಿ ಮಟ್ಟದ ದೊಡ್ಡ ದೇವಾಲಯ

೩೧. ಕಮಲ್ ಮಹಲ್ ಮಂಟಪ

೩೨. ಡಣ್ಣಾಯಕನ ಆವರಣದಲ್ಲಿನ ಮಸೀದಿ

೩೩. ಮುಸಲ್ಮಾನ್ ಮಸೀದಿ ದರ್ಗಾ

೩೪. ಮುಸಲ್ಮಾನ ಕಾವಲು ಗೋಪುರ (ಡಣ್ಣಾಯಕನಪುರ)

೩೫. ಉತ್ತರದ ಕಾವಲು ಗೋಪುರ (ಜನಾನ ಆವರಣ)

೩೬. ಷಟ್‌ಕೋನಾಕೃತಿಯ ಸ್ನಾನಗೃಹ

೩೭. ಷಟ್‌ಕೋನಾಕೃತಿಯ ಜಲ ಮಂಟಪ

೩೮. ಪ್ರಾಚೀನ ನೀರು ಸರಬರಾಜು ವ್ಯವಸ್ಥೆ

೩೯. ಕಾವಲು ಮನೆ

೪೦. ಜನಾನ ಆವರಣದ ಗೋಡೆ ಮತ್ತು ಬಾಗಿಲುಗಳು

೪೧. ರಂಗ ದೇವಾಲಯ (ಮಾಧವ)

೪೨. ಜಲ ಗೋಪುರ( ವಿಜಯನಗರ ಶಹರ)

೪೩. ಕೃಷ್ಣ ದೇವಾಲಯ

೪೪. ಬಡವಿಲಿಂಗ ದೇವಾಲಯ

೪೫. ನರಸಿಂಹ ಶಿಲ್ಪ

೪೬. ಸೂಳೇಬಾವಿ

೪೭. ಸರಸ್ವತಿ ದೇವಾಲಯ

೪೮. ಗೋಪಾಲಕೃಷ್ಣ ದೇವಾಲಯ

೪೯. ಶಿವ ದೇವಾಲಯ

೫೦. ಅಚ್ಚುತ ದೇವಾಲಯ (ತಿರುವೆಂಗಳನಾಥ ದೇವಾಲಯ)

೫೧. ತಳವಾರಘಟ್ಟ ರಸ್ತೆಯ ಕೋಟೆಬಾಗಿಲು

೫೨. ಶಾಸನೋಕ್ತ ವಿಷ್ಣು ದೇವಾಲಯ(ವಿಠ್ಠಲ ದೇವಾಲಯದ ಹತ್ತಿರ)

೫೩. ಗುಡ್ಡ ಪಕ್ಕದಲ್ಲಿನ ಜೈನ ದೇವಾಲಯ (ವಿಷ್ಣು ದೇವಾಲಯ ಸಂಖ್ಯೆ- ೨ರ ಹತ್ತಿರ)

೫೪. ಮಂಟಪ (ತಳವಾರಘಟ್ಟ ರಸ್ತೆಯ ಸಮೀಪ)

೫೫. ರಘುನಾಥ ದೇವಾಲಯ (ಮಾಲ್ಯವಂತ ಗುಡ್ಡದಮೇಲೆ)

೫೬. ಪುಷ್ಕರಣಿ (ಸೂಳೆ ಬಜಾರ್ ಹತ್ತಿರ)

೫೭. ಎರಡಂತಸ್ತಿನ ಮಂಟಪ

೫೮. ವಿಷ್ಣು ದೇವಾಲಯ ಸಂಖ್ಯೆ – ೧

೫೯. ವಿಷ್ಣು ದೇವಾಲಯ ಸಂಖ್ಯೆ – ೨

೬೦. ವಿಷ್ಣು ದೇವಾಲಯ (ವಿಠ್ಠಲ ದೇವಾಲಯದ ದಕ್ಷಿಣ ದ್ವಾರಕ್ಕೆ ಅಭಿಮುಖವಾಗಿದೆ)

೬೧. ವಿಠ್ಠಲ ದೇವಾಲಯ

೬೨. ರಾಜನ ತುಲಾಭಾರ ಮಂಟಪ ಪ್ರಾಚೀನ ಶಿವದೇವಾಲಯ

೬೩. ಶಿಥಿಲವಾದ ದೊಡ್ಡ ದ್ವಾರ್ (ವಿಠ್ಠಲ ದೇವಾಲಯದ ಪಶ್ಚಿಮಕ್ಕೆ)

ಹಂಪಿಯಲ್ಲಿ ವಿಶ್ವಪರಂಪರೆಯ ರಕ್ಷಣೆಗೆ ಒಳಪಟ್ಟ ಸ್ಮಾರಕಗಳ ಸಮೂಹವಿದೆ, 'ಐಕೋಮಸ್' ಯುನೆಸ್ಕೋದ ಒಂದು ಅಂಗ. ಅದು ಫ್ರಾನ್ಸಿನಲ್ಲಿ ಇರುವುದರಿಂದ ಕಾಗದ ಪತ್ರಗಳು ಫ್ರೆಂಚ್ ಹಾಗೂ ಇಂಗ್ಲಿಷ್‌ನಲ್ಲಿ ಇರುವುದು ಸಹಜ. ಫ್ರೆಂಚ್ ಕರಾರು ಪತ್ರದ ಪ್ರಕಾರ ಸಂಪೂರ್ಣ ಹಂಪಿಯಲ್ಲದೆ ಪಂಪಾ ಸರೋವರ, ಮಾಧ್ವ ಸಂಪ್ರದಾಯದ ನವವೃಂದಾವನ, ಆನೆಗೊಂದಿ ಇವುಗಳೆಲ್ಲ ವಿಶ್ವಪರಂಪರೆಯ ರಕ್ಷಣೆಗೆ ಪಟ್ಟಿಗೆ ಸೇರುತ್ತವೆ.[೪೦] ಸ್ಮಾರಕಗಳೆಂದರೆ ಜ್ಞಾಪಕಾರ್ಥವಾಗಿಟ್ಟಿರುವ, ಕಟ್ಟಿಸಿರುವ, ವಸ್ತು, ಪ್ರತಿಮೆ, ದೇವಾಲಯದ ಕಟ್ಟಡ, ಕೋಟೆ, ಮುಂತಾದವುಗಳನ್ನು ಹೆಸರಿಸುತ್ತವೆ. ರಕ್ಷಣೆ ಎಂದರೆ ಕಾಪಾಡುವಿಕೆ, ಜೋಪಾನ, ಪಾಲನೆ, ಇರುವುದೆಂದು ತಿಳಿಸಲಾಗಿದೆ. ಇನ್ನೊಂದು ರೀತಿಯಲ್ಲಿ ಸುರಕ್ಷಿತ ಸಂರಕ್ಷಣೆ ಮುಂತಾದ ಅರ್ಥಗಳು ಎದುರಾಗುತ್ತವೆ. ಸ್ಮಾರಕಗಳು ಕೀರ್ತಿಸ್ತಂಭ, ಸ್ಮಾರಕ ಚಿಹ್ನೆಯಂಥ ಅರ್ಥ ಒಳಗೊಂಡಿದ್ದರೂ ಅವುಗಳು ಭವ್ಯ ಮತ್ತು ಅದ್ಭುತವಾದ ಚರಿತ್ರೆಯನ್ನು ಹೊಂದಿರುತ್ತವೆಂಬುದು ನಿಶ್ಚಿತ. ಇಂತಹವುಗಳೂ ಭಗ್ನಗೊಂಡಾಗ ಅವುಗಳಿಗೆ ರಕ್ಷಣಾ ಕಾರ್ಯಗಳನ್ನು ಕೈಗೊಂಡಿದ್ದು ಗಮನಾರ್ಹ.[೪೧] ಬಳ್ಳಾರಿ ಜಿಲ್ಲೆಯ ಚರಿತ್ರೆಯ ಎರಡು ಕಾಲಘಟ್ಟ ಎಂದರೆ ವಿಜಯನಗರ ಸಾಮ್ರಾಜ್ಯ ಮತ್ತೊಂದು ಬ್ರಿಟಿಷರ ಆಳ್ವಿಕೆ. ಇಲ್ಲಿ ಬ್ರಿಟಿಷರ ಆಳ್ವಿಕೆ ಎಂದರೆ ಕಲೆಕ್ಟರುಗಳ ಆಳ್ವಿಕೆ ಎಂದು ತಿಳಿಯಬೇಕು. ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಬಿಜಾಪುರ ಸುಲ್ತಾನರು, ಮರಾಠರು, ಮೊಘಲರು, ಸ್ಥಳೀಯ ಪಾಳೇಗಾರರ, ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಈ ಭಾಗವನ್ನು ಆಳ್ವಿಕೆಗೆ ಒಳಪಡಿಸಿಕೊಂಡಿದ್ದು ಗಮನಾರ್ಹ. ೧೭೯೨ರಲ್ಲಿ ಟಿಪ್ಪು ಸೋತಾಗ ಈ ಪ್ರದೇಶದ ಅರ್ಧಭಾಗ ಮರಾಠರಿಗೆ ಸೇರಿತ್ತು. ೧೭೯೯ರಲ್ಲಿ ಉಳಿದ ಭಾಗ ಹೈದರಾಬಾದಿನ ನಿಜಾಮನಿಗೆ ಸೇರಿತ್ತು. ಆಗ ನಿಜಾಮನು ಬ್ರಿಟಿಷರ ಸಹಾಯಕ ಸೈನ್ಯ ಪದ್ಧತಿಗೆ ಸಹಿ ಹಾಕಿ ೧೮೦೦ರಲ್ಲಿ ಬಳ್ಳಾರಿ ಭಾಗವನ್ನು ದತ್ತಿ ಜಿಲ್ಲೆಯಾಗಿ ಬಿಟ್ಟುಕೊಟ್ಟನು. ಅಂದು ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ ೨೨ ಜಿಲ್ಲೆಗಳಲ್ಲಿ ಬಳ್ಳಾರಿ ನಾಲ್ಕನೆಯದು. ೧೮೦೦ರಿಂದ ಕಲೆಕ್ಟರುಗಳ ಆಳ್ವಿಕೆ ಆರಂಭವಾಯಿತು. ಇವರು ಯುರೋಪಿನ ವಿವಿಧ ದೇಶಗಳಿಂದ ಬಂದವರೆಂದು ಕಲೆ ಮತ್ತು ಸ್ಮಾರಕಗಳ ಬಗ್ಗೆ ದೀರ್ಘಾಸಕ್ತಿಯುಳ್ಳವರಾಗಿದ್ದರೆಂಬುದು ಅವರು ಯೋಚಿಸಿದ ರಕ್ಷಣಾ ಕಾರ್ಯಗಳಿಂದ ಹಂಪಿಯು ಅಧುನಿಕ ಕಾಲಘಟ್ಟದಲ್ಲಿ ಹೆಚ್ಚಿನ ಪ್ರಸಿದ್ಧಿ ಪಡೆಯುವಂತಾಯಿತೆಂಬುದನ್ನು ನಿಸ್ಸಂಕೋಚವಾಗಿ ಅಭಿಪ್ರಾಯಿಸಬಹುದು. ೧೮೦೦-೧೯೫೩ರ ವರೆಗೆ ಸುಮಾರು ೧೧೨ ಜನ ಕಲೆಕ್ಟರುಗಳು ತಮ್ಮ ಆಡಳಿತಾವಧಿಯಲ್ಲಿ

ಅನುಕೂಲಕ್ಕೆ ತಕ್ಕಂತೆ ಹಂಪಿ ಸ್ಮಾರಕಗಳ ಕುರಿತು ರಕ್ಷಣಾ ಕಾರ್ಯ ಕೈಗೊಂಡಿದ್ದಾರೆ ಎಂದು ತಿಳಿದುಬರುತ್ತದೆ.

ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶ ಸರ್. ವಿಲಿಯಂ ಜೋನ್ಸ್ ಜನವರಿ ೧೫, ೧೭೮೪ ರಂದು 'ರಾಯಲ್ ಏಷಿಯಾಟಿಕ್ ಸೊಸೈಟಿ'ಯನ್ನು ಸ್ಥಾಪಿಸಿದರು. ಅಂದಿನಿಂದ ಪ್ರಾಚ್ಯಾವಶೇಷಗಳ ರಕ್ಷಣೆ ಬಗೆಗೆ ಈ ದೇಶದಲ್ಲಿ ಹೆಚ್ಚಿನ ಆಸಕ್ತಿ ಉದಯಿಸಿತು. ೧೮೦೦ರಲ್ಲಿ ಫ್ರಾನ್ಸಿಸ್ ಬುಕಾನನ್‌ನ ಸರ್ವೇಕ್ಷಣೆ ಕನ್ನಿಂಗ್‌ಹ್ಯಾಂ, ರಾಬರ್ಟ್ ಬ್ರೂಸ್ ಫೂಟ್, ಜೇಮ್ಸ್ ಪ್ರಿನ್ಸೆಪ್, ಜಾನ್. ಎಫ್. ಫ್ಲೀಟರು ಶಾಸನ ಸ್ಮಾರಕಗಳ ಸರ್ವೇಕ್ಷಣೆಯಿಂದ ಕಲೆಕ್ಟರುಗಳ ಅತ್ಯಾಸಕ್ತಿ ಈ ದಿಸೆಗೆ ತಿರುಗಿತು. ಬ್ರಿಟಿಷರ ಆಡಳಿತ ವೈಖರಿ ಬಗೆಗೆ ಏನೆಲ್ಲಾ ಟೀಕೆ–ವಿಮರ್ಶೆಗಳಿದ್ದರೂ ಭಾರತೀಯ ಪ್ರಾಚೀನ ಕಾಲದ ಸಾಂಸ್ಕೃತಿಕ ಆಯಾಮಗಳಲ್ಲಿ ಹೆಚ್ಚಿನ ಆಸಕ್ತಿವಹಿಸಿ ಪ್ರಚಾರಗೊಳಿಸಿದರು ಎಂಬುದು ನಿರ್ವಿವಾದ. ಅವರು ವಿವಿಧ ವಲಯಗಳಲ್ಲಿ ಏರಿಳಿತಗಳನ್ನು ಸೃಷ್ಟಿಸಿ ಹೊಸ ಪರಿಣಾಮಗಳನ್ನುಂಟು ಮಾಡಿದರು ಎಂಬುದು ಹೇಳಬಹುದು. ಒಟ್ಟಾರೆ ಭಗ್ನಗೊಂಡ ಸ್ಮಾರಕಗಳ ರಕ್ಷಣೆ ಯಾವಾಗ ಯಾರಿಂದ ಜೀರ್ಣೋದ್ಧಾರವಾಯಿತು ಎಂದು ತಿಳಿಯುವುದು ಕಷ್ಟ. ಅದೇ ರೀತಿ ಬಳ್ಳಾರಿ ಜಿಲ್ಲೆಯಲ್ಲಿ ಕಲೆಕ್ಟರುಗಳು ಆಳ್ವಿಕೆ ನಡೆಸದಿದ್ದರೆ ಪ್ರಾಯಶಃ ಹಂಪಿ ಇಷ್ಟೊಂದು ವ್ಯಾಪಕ ಖ್ಯಾತಿ ಪಡೆಯುತ್ತಿರಲಿಲ್ಲ ಎನ್ನಬಹುದು. ಇದಕ್ಕೆ ಅವರು ಕೈಗೊಂಡ ಕಾರ್ಯಯೋಜನೆ ಕಳಕಳಿಯು ಕಾರಣವಾಗಿದೆ. ರಾಬರ್ಟ್ ಸಿವೆಲ್ ೧೮೭೭ ರಿಂದ ಅಮರಾವತಿ, ವಿಜಯವಾಡ, ಜಗ್ಗಯ್ಯಪೇಟೆ ಮತ್ತು ಧಾರವಾಡಗಳಲ್ಲಿ ಸಂಚರಿಸಿ ಪ್ರಾಚ್ಯಾವಶೇಷಗಳ ಬಗ್ಗೆ ಅಧ್ಯಯನ ಮಾಡಿದನು. ನಂತರ ಹಂಪಿಯ ಅವಶೇಷಗಳ ಕುರಿತು ವಿದೇಶಿ ಯಾತ್ರಿಕರು ಈಗಾಗಲೇ ದಾಖಲಿಸಿರುವ ಮಾಹಿತಿಗಳ ಸಹಾಯದಿಂದ A Forgotton Empire ಎಂಬ ಕೃತಿ ರಚಿಸಿ(೧೯೦೦) ಪ್ರಕಟಿಸಿದನು. ಇದು ಲಕ್ಷಾಂತರ ವಿದೇಶಿಯರು ಹಂಪಿಗೆ ಬರಲು ಕಾರಣವಾಯಿತು. ಅಲ್ಲದೆ ವಿಶ್ವಮಟ್ಟಕ್ಕೆ ಹಂಪಿಯನ್ನು ಪರಿಚಯ ಮಾಡಿಕೊಡುವುದರ ಜೊತೆಗೆ ಹಂಪಿಗೆ ಹೆಚ್ಚಿನ ಮಹತ್ವ ಅಥವಾ ಸ್ಥಾನಗಿಟ್ಟಿಸಿಕೊಳ್ಳಲು ಸಹಾಯವಾಯಿತು. ಆಧುನಿಕ ಕಾಲದಲ್ಲಿ ಹಂಪಿಯನ್ನು ವಿದೇಶಿಯರು ಮತ್ತೊಮ್ಮೆ ತಿರುಗಿ ನೋಡುವಂತೆ ಮಾಡಿದವನು ರಾಬರ್ಟ್ ಸಿವೆಲ್[೪೨] ಎಂದರೆ ತಪ್ಪಿಲ್ಲ. ಹಂಪಿಯ ಸ್ಮಾರಕಗಳನ್ನು ರಕ್ಷಣೆ ಮಾಡಿದಂತಹ ಕಾರ್ಯಗಳು ಸುಮಾರು ಮೂರು ಕಾಲಘಟ್ಟದಲ್ಲಿ ಕಂಡುಬರುತ್ತವೆ.

- ವಿಜಯನಗರದ ಅರಸರು ಕೈಗೊಂಡ ರಕ್ಷಣಾಕಾರ್ಯಗಳು ಅಥವಾ ಜೀರ್ಣೋದ್ಧಾರ ಕಾರ್ಯಗಳು.
- ಸ್ಥಳೀಯ ಅರಸರು ಹಾಗೂ ಬ್ರಿಟಿಷರ ಆಳ್ವಿಕೆಯಲ್ಲಿ ಕೈಗೊಂಡ ರಕ್ಷಣಾ ಕಾರ್ಯಗಳು.
- ಸ್ವಾತಂತ್ರ್ಯೋತ್ತರದಲ್ಲಿ ಭಾರತ ಹಾಗೂ ಕರ್ನಾಟಕ ಸರ್ಕಾರಗಳು ಮತ್ತು ವಿಶ್ವಸಂಸ್ಥೆಯ ಅಂಗಸಂಸ್ಥೆಗಳಲ್ಲೊಂದಾದ ಯುನೆಸ್ಕೋ ಇತರ ಸಂಘ ಸಂಸ್ಥೆಗಳು ಕೈಗೊಂಡ ರಕ್ಷಣಾ ಕಾರ್ಯಗಳು ಎಂದು ತಿಳಿಯಬಹುದಾಗಿದೆ.

ವಿಜಯನಗರದ ಅರಸರು ಕೈಗೊಂಡ ರಕ್ಷಣಾತ್ಮಕ ಕಾರ್ಯಚಟುವಟಿಕೆಗಳು ಅಪಾರ. ಅವುಗಳಲ್ಲಿ ಪ್ರಮುಖವಾದುದೆಂದರೆ ಶ್ರೀಕೃಷ್ಣದೇವರಾಯನು ಬಿಷ್ಟಪ್ಪಯ್ಯನ ಗೋಪುರ ಅಥವಾ ಹಿರೇಗೋಪುರಕ್ಕೆ ಸಂಬಂಧಿಸಿದಂತೆ ಜೀರ್ಣೋದ್ಧಾರ ಕಾರ್ಯನೆರವೇರಿಸಿ ಇತರೆ ಕಲ್ಯಾಣ ಮಂಟಪ, ಉತ್ಸವ ಮಂಟಪಗಳನ್ನು ಕಟ್ಟಿಸಿದ್ದು ಮಹತ್ವವೆನಿಸಿದೆ.[೮೩] ನಗರಗಳು, ಅಣೆಕಟ್ಟುಗಳು, ಕಾಲುವೆಗಳು, ಕೆರೆಗಳು, ದೇವಾಲಯಗಳು ಮತ್ತು ಜನೋಪಯುಕ್ತ ಹಾಗೂ ಧಾರ್ಮಿಕ ಕಟ್ಟಡಗಳ ರಚನೆಯ ಪರಾಕಾಷ್ಠತೆ ವಿಜಯನಗರ ಸಾಮ್ರಾಜ್ಯದಲ್ಲಿ ಕಾಣಬರುತ್ತದೆ. ಈ ರೀತಿ ಕಟ್ಟಿಸಿದ ಕಟ್ಟಡಗಳು ಕೇವಲ ೩೦೦ ವರ್ಷಗಳ ಅವಧಿಯಲ್ಲಿ ವಿನಾಶಗೊಂಡಿದ್ದು ಅವುಗಳನ್ನು ಬ್ರಿಟಿಷರು ರಕ್ಷಿಸಿದ್ದು ಗಮನಾರ್ಹವಾದ ಅಂಶವಾಗಿದೆ. ಕಲೆಕ್ಟರುಗಳು ಹಂಪಿಯಲ್ಲಿ ಹೊಸದಾಗಿ ಕಟ್ಟಡಗಳನ್ನು ಕಟ್ಟದಿದ್ದರೂ ದುರಸ್ತಿ ಕೆಲಸ ಮಾಡಿಸಿದ್ದು ಗಮನಾರ್ಹ. ಮದ್ರಾಸ ಸರ್ಕಾರ ಪುರಾತತ್ವ ಇಲಾಖೆ ಕೇಂದ್ರದ ಮೂಲಕ ರಕ್ಷಣಾ ಕಾರ್ಯಗಳನ್ನು ನೆರವೇರಿಸಿತು. ನಮ್ಮಲ್ಲಿ ನಿಜವಾಗಿ ಸ್ಮಾರಕಗಳ ಬಗ್ಗೆ ರಕ್ಷಣಾ ಮನೋಭಾವ ಆಸಕ್ತಿ ಬೆಳೆಸಿದವರು ಬ್ರಿಟಿಷರು ಎಂಬುದು ಸತ್ಯ. ಇಲ್ಲಿನ ಸ್ಮಾರಕಗಳ ವಿನಾಶಕ್ಕೆ ಕಾರಣ ಕೊಡುತ್ತಾ ಅವರು ಭೌಗೋಳಿಕ, ಭೂಗರ್ಭ ಸಮ್ಮತ ವಾಸ್ತವ ಸ್ಥಿತಿ ಧಾರ್ಮಿಕ ಸಾಮಾಜಿಕ ರಾಜಕೀಯ ಮತ್ತು ಐತಿಹಾಸಿಕ ನಿರ್ಲಕ್ಷ್ಯಗಳೇ ಕಾರಣವೆಂದು ಆಂಗ್ಲ ಅಧಿಕಾರಿಗಳು ಅಭಿಪ್ರಾಯಪಡುತ್ತಾರೆ.

ಹಂಪಿಯ ಸ್ಮಾರಕಗಳಿಗೆ ರಕ್ಷಣಾ ಕಾರ್ಯಗಳನ್ನು ಬ್ರಿಟಿಷರು ಕೈಗೊಂಡಿರುವುದು ಹೆಚ್ಚಾಗಿ ದೇವಾಲಯಗಳಿಗೆ ಮಾತ್ರ. ಉಳಿದ ಕಟ್ಟಡಗಳನ್ನು ದುರಸ್ತಿ ಕಾರ್ಯಕ್ಕೆ ಮಾತ್ರ ಸೀಮಿತಗೊಳಿಸಿದರು. ಇಲ್ಲಿ ಹೆಚ್ಚಾಗಿ ವಿನಾಶಗೊಂಡಿರುವುದು ನಾಗರೀಕ ಕಟ್ಟಡಗಳಾದರೂ ಹೆಚ್ಚಿನ ಆಸಕ್ತಿ ದೇವಾಲಯಗಳಿಗೆ ತೋರಿಸಿದ್ದು ವಿಶಿಷ್ಟವೆನಿಸಿದೆ. ಹಂಪಿಯಲ್ಲಿ ಕಲೆಕ್ಟರುಗಳೂ

ರಕ್ಷಣಾ ಕೆಲಸಗಳನ್ನು ಹೆಚ್ಚಾಗಿ ದೇವಾಲಯಗಳು, ಗೋಪುರಗಳು, ಗೋಡೆಗಳಿಗೆ ಸಂಬಂಧಿಸಿದಂತೆಯೇ ಹಮ್ಮಿಕೊಂಡಿದ್ದಾರೆ.

ಪಂಪಾ ವಿರೂಪಾಕ್ಷ ದೇವಾಲಯವೆಂದೇ ಖ್ಯಾತಿ ಪಡೆದ ಈ ದೇವಾಲಯ ಹಂಪಿಯಲ್ಲಿದ್ದ ಅತ್ಯಂತ ಹಳೆಯದಾದ ದೇವಾಲಯಗಳಲ್ಲಿ ಒಂದೆನಿಸಿದೆ. ಈ ದೇವಾಲಯವು ಆರಂಭದಲ್ಲಿ ಚಿಕ್ಕ ಗುಡಿಯಾಗಿದ್ದು ಇಂದು ನಮಗೆ ಕಾಣಸಿಗುವ ದೇವಾಲಯ ಸಂಕೀರ್ಣದ ಬಹುಭಾಗಗಳನ್ನು ಕ್ರಿ.ಶ. ೧೬ನೇ ಶತಮಾನದ ಆದಿಭಾಗದಲ್ಲಿ ವಿಸ್ತರಿಸಿ ರಚಿಸಲಾಯಿತು.[೪೪] ಈ ದೇವಾಲಯದ ರಂಗಮಂಟಪ ರಾಯಗೋಪುರವನ್ನು ಕೃಷ್ಣದೇವರಾಯ ಕಟ್ಟಿಸಿ ಇದೇ ಗೋಪುರಕ್ಕೆ ಜೀರ್ಣೋದ್ಧಾರ ಮಾಡಿಸಿದನು. ಕಲೆಕ್ಟರ್ ಸರ್. ಥಾಮಸ್ ಮನ್ರೋ ೧೮೦೦ ರಿಂದ ೧೮೦೭ರ ವರೆಗೆ ಈ ಭಾಗದಲ್ಲಿ ಸಂದರ್ಶಿಸಿದರು. ಅವನ ಉದ್ದೇಶ ಆನೆಗೊಂದಿ ಮತ್ತು ಹರಪನಹಳ್ಳಿಯ ಪಾಳೆಯಗಾರರನ್ನು ಕುರಿತದ್ದಾಗಿತ್ತು.[೪೫] ಅನಂತರ ಬಂದ ಕಲೆಕ್ಟರುಗಳ ಗಮನ ಇತ್ತ ಸೆಳೆದುದು ಅಪೂರ್ವವೆನಿಸಿದೆ. ಇಲ್ಲಿರುವ ಗೋಪುರಗಳಿಗೆ ೧೮೩೭ರಲ್ಲಿ ಬಳ್ಳಾರಿ ಜಿಲ್ಲೆ ಕಲೆಕ್ಟರ್ ಮಿಸ್ಟರ್ ರಾಬರ್ಟ್‌ಸನ್‌ನ ನೇತೃತ್ವದಲ್ಲಿ ರಕ್ಷಣಾತ್ಮಕ ಕಾರ್ಯಗಳನ್ನು ಕೈಗೊಂಡಿದ್ದು ತಿಳಿದುಬರುತ್ತದೆ.

೧೮೨೪ ರಿಂದ ೧೮೩೮ರವರೆಗೆ ಕಲೆಕ್ಟರನಾಗಿದ್ದ ಜನಪ್ರಿಯ ಅಧಿಕಾರಿಯಾದ ಎಫ್.ಡಬ್ಲ್ಯೂ ರಾಬರ್ಟ್‌ಸನ್‌ನ ಕಾಲದಲ್ಲಿ 'ಬಳ್ಳಾರಿ ದಂಗೆ' ನಡೆದ ಪರಿಣಾಮವಾಗಿ ಕಾಲುವೆ ನೀರಿನ ವ್ಯವಸ್ಥೆ, ಸ್ಮಾರಕಗಳ ರಕ್ಷಣೆಗೆ ಪ್ರೋತ್ಸಾಹ ನೀಡಿದನು. ಇವನ ಅವಧಿಯಲ್ಲಿ ಗ್ರಾಮಧಿಕಾರಿಗಳು ಸಂಪೂರ್ಣ ಸರ್ಕಾರದ ನಿಯಂತ್ರಣಕ್ಕೊಳಪಟ್ಟರಲ್ಲದೆ ಕೆಲವು ನಿರ್ಬಂಧಗಳನ್ನು ಸಹ ವಿಧಿಸಲಾಯಿತೆಂದು ತಿಳಿದುಬರುತ್ತದೆ. ರಾಬರ್ಟ್‌ಸನ್ ಹಂಪಿ ಸ್ಮಾರಕಗಳಿಗೆ ತನ್ನ ಶಕ್ತಾನುಸಾರ ರಕ್ಷಣೆ ಕಾರ್ಯಗಳನ್ನು ಮಾಡಿಸಿದನೆಂಬುದರಲ್ಲಿ ಸಂಶಯವಿಲ್ಲ. ಇವನು ವಿರೂಪಾಕ್ಷ ದೇವಾಲಯಕ್ಕೆ ತನ್ನ ಆಸಕ್ತಿ ಮೀಸಲಾಗಿಟ್ಟಿದ್ದವಾದರೂ ಇತರ ದೇವಾಲಯಗಳಿಗೆ ದುರಸ್ತಿ ಕೆಲಸ ಮಾಡಿಸಿದ್ದನ್ನು ಗಮನಿಸಬಹುದು.[೪೬] ಇದೇ ದೇವಾಲಯದ ಉತ್ತರ ದಿಕ್ಕಿಗಿರುವ ಕನಕಗಿರಿ ಗೋಪುರವನ್ನು ನಿರ್ಮಿಸಿದವರು ಯಾರೆಂಬುದು ತಿಳಿದಿಲ್ಲ. ಆದರೆ ಹೈದರಾಬಾದಿನ ನಿಜಾಮ ಇದನ್ನು ಕಟ್ಟಿಸಿದನೆಂದು ಪ್ರತೀತಿ ಇದೆ. ಇದನ್ನು ಸಹ ರಾಬರ್ಟ್‌ಸನ್‌ನು ಇಟ್ಟಿಗೆ ಮತ್ತು ಗಾರೆಯನು ಬಳಸಿ ರಕ್ಷಣೆಗೊಳಿಸಿದ್ದಲ್ಲದೆ ಇತರ ಕಾರ್ಯಗಳನ್ನು ಕೈಗೊಂಡಿದ್ದು ಗಮನಾರ್ಹವಾಗಿದೆ.[೪೭]

೧೮೫೭ರ ನಂತರ ದೇವಾಲಯದಲ್ಲಿ ಕೆಲವು ವಿಗ್ರಹಗಳನ್ನು ಸ್ಥಾನಪಲ್ಲಟಗೊಳಿಸಲಾಗಿದೆ. ಈ ವಿಚಾರವನ್ನು ಅಲೆಕ್ಸಾಂಡರ್ ಗ್ರೀನ್ ಲಾ ಮತ್ತು ಗಾಲಿಂಗ್‌ರವರ ಫೋಟೋಗ್ರಾಫಿಂಯಿಂದ ತಿಳಿಯಬಹುದು. ರಾಯಗೋಪುರದ ಬಲಭಾಗದ ಮಂಟಪವನ್ನು ತೆಗೆಯದೇ ಅದಕ್ಕೆ ಹಾಗೆಯೇ ಗೋಡೆಯನ್ನು ನಿರ್ಮಿಸಲಾಗಿದೆ. ಈಗ ಗೃಹದೋಪಾದಿಯಲ್ಲಿ ಇರುವುದು ಕುತೂಹಲಕಾರಿ ಅಂಶವಾಗಿದೆ. ೧೮೮೪-೧೮೯೪ ರವರೆಗೆ ಕಲೆಕ್ಟರ್ ಆಗಿದ್ದ ರಾಬರ್ಟ್ ಸಿವೆಲ್‌ನ ಆಡಳಿತದಲ್ಲಿ ರಾಜಕೀಯ ಸಾಮಾಜಿಕ ಶೈಕ್ಷಣಿಕ ಮತ್ತು ಸಂಸ್ಕೃತಿಗಳಿಗೆ ತನ್ನ ಪ್ರೋತ್ಸಾಹವನ್ನು ನೀಡಿರುವುದು ಪ್ರಶಂಸನೀಯ ಸಂಗತಿಯಾಗಿದೆ. ಇವನ ಅವಧಿಯಲ್ಲಿ ಕೈಗೊಂಡ ರಕ್ಷಣಾ ಕಾರ್ಯಗಳೆಂದರೆ ಹಂಪಿ ವಿರೂಪಾಕ್ಷ ದೇವಾಲಯದ ಗೋಪುರದ ಮುಂಭಾಗ ಮತ್ತು ಪಶ್ಚಿಮ ಭಾಗದ ನಾಲ್ಕು ಕಬ್ಬಿಣದ ಪಟ್ಟಿಗಳನ್ನು ಪೂರ್ವ ಮಹಾದ್ವಾರದ ಕಮಾನಿಗೆ ತೊಡಿಸಲಾಗಿದೆ. ಇದು ಗೋಪುರದ ಭಾರವನ್ನು ಎರಡು ಗೋಡೆಗಳಲ್ಲಿ ಬೇರ್ಪಡಿಸುತ್ತದೆ. ಅದೇ ಗೋಪುರದ ಪಶ್ಚಿಮದ ದ್ವಾರಕ್ಕೆ ನಾಲ್ಕು ಕಬ್ಬಿಣದ ಕಂಬಗಳನ್ನು ನಿಲ್ಲಿಸಿ ಎರಡು ತೊಲೆಗಳನ್ನು ಅಡ್ಡಲಾಗಿ ಎರಡು ಬೋದಿಗೆಗಳನ್ನು ಪೂರ್ವಪಶ್ಚಿಮವಾಗಿ ಇಡಲಾಗಿದೆ. ಇದರ ಕಾಲಮಾನ ೧೮೮೪ ರಿಂದ ೧೮೮೭ರಲ್ಲಿ ಆಗಿದೆ ಎನ್ನಬಹುದು. ಇವುಗಳನ್ನು ಇಂಗ್ಲೆಂಡಿನಿಂದ ಆಮದು ಮಾಡಿಕೊಂಡಿರುವುದು ತಿಳಿದುಬರುತ್ತದೆ. ರಾಬರ್ಟ್ ಸಿವೆಲ್‌ನ ನಂತರ ಕಲೆಕ್ಟರ್‌ನಾಗಿದ್ದ ಸಿ.ಎ. ಗಾಲ್ಟನ್ ಈ ಮೇಲಿನಂತೆ ವ್ಯವಸ್ಥೆಯನ್ನು ಉದಾರಿಕರಣಗೊಳಿಸಿದ್ದು ಅವನ ಉದಾತ್ತ ಮನಸ್ಸನ್ನು ಪ್ರತಿನಿಧಿಸುತ್ತದೆ. ಸ್ವಾತಂತ್ರ್ಯೋತ್ತರದಲ್ಲಿ ಇನ್ನಷ್ಟು ರಕ್ಷಣಾ ಕಾರ್ಯಗಳನ್ನು ಕೈಗೊಳ್ಳಲಾಯಿತು.

ವಿಠ್ಠಲ ದೇವಾಲಯ ವಿಶಾಲ ಮತ್ತು ದೊಡ್ಡ ಆವರಣದಲ್ಲಿ ಉತ್ತರ-ದಕ್ಷಿಣ ಮತ್ತು ಪೂರ್ವದಲ್ಲಿ ಭವ್ಯ ಗೋಪುರ ಪ್ರವೇಶ ದ್ವಾರಗಳನ್ನು ಹೊಂದಿರುವ ಈ ದೇವಾಲಯವನ್ನು ವಿಠ್ಠಲ ಅಥವಾ ವಿಠ್ಠಲೇಶ್ವರ ಎಂದು ಶಾಸನಗಳು ತಿಳಿಸುತ್ತವೆ. ವಿಜಯನಗರ ಕಾಲದ ವಾಸ್ತು ಮತ್ತು ಶಿಲ್ಪಕಲೆಯ ಪ್ರೌಢಿಮೆಯ ಉದಾಹರಣೆಯೆಂದರೆ ತಪ್ಪಾಗಲಾರದು. ಮೂಲ ದೇವಾಲಯವು ಇಮ್ಮಡಿ ದೇವರಾಯನ ಕಾಲದಲ್ಲಿ ಅಸ್ತಿತ್ವದಲಿತ್ತು. ಅದಕ್ಕೆ ಕೃಷ್ಣದೇವರಾಯನು ಸಾಕಷ್ಟು ಹೊಸ ಸೇರ್ಪಡೆಗಳನ್ನು ಮಾಡಿದನು.[೪೮] ಈ ದೇವಾಲಯದ ಪೂರ್ವದ್ವಾರ ದಕ್ಷಿಣದ್ವಾರಗಳ ಮೇಲ್ಭಾಗ ಕುಸಿದು ಬೀಳುವ ಸಂಭವವಿದ್ದರಿಂದ ಒಳಭಾಗಕ್ಕೆ ಕಬ್ಬಿಣ ಸಲಾಕೆಗಳಿಂದ ಮತ್ತು ಕಲ್ಲಿನ ತೊಲೆಗಳನ್ನು ಗೋಡೆಗೆ ಸೇರಿಸಿದ್ದಾರೆ. ವಿಠ್ಠಲ ದೇವಾಲಯದ ಒಂಭಾಗದಲ್ಲಿ ಪ್ರತ್ಯೇಕ ಮಂಟಪಕ್ಕೆ ಒತ್ತುಗೋಡೆಯನ್ನು ಮತ್ತು ಮಂಟಪದ ಅರ್ಧ ಗೋಡೆ

ಭಗ್ನಗೊಂಡಿದ್ದರಿಂದ ಪೂರ್ಣಗೊಳಿಸಲಾಗಿದೆ. ಇದು ಆರಂಭದ ಕಲೆಕ್ಟರುಗಳು ಮಾಡಿದ ಕೆಲಸವಲ್ಲ. ಇದೇ ದೇವಾಲಯದ ಪೂರ್ವದ ಮಹಾದ್ವಾರಕ್ಕೆ ೧೮೫೬ರ ನಂತರ ಕಲ್ಲಿನಿಂದ ಮೂರು ಕಂಬಗಳನ್ನು ನಿರ್ಮಿಸಲಾಗಿದೆ. ಆಧಾರ ಕಂಬಗಳನ್ನು ಕಲ್ಯಾಣಮಂಟಪದಲ್ಲಿ ಎರಡು ದ್ವಾರಗಳಿಗೆ ಎರಡು ಕಂಬಗಳನ್ನು ನಿಲ್ಲಿಸಲಾಗಿದೆ. ಉತ್ತರಕ್ಕೆ ದೊಡ್ಡ ಗಾತ್ರದ ಗೋಡೆ ನಿರ್ಮಾಣ ಮಾಡಿರುವುದುಂಟು. ಇಡೀ ವಿಠ್ಠಲ ದೇವಾಲಯದಲ್ಲಿ ಹಲವಾರು ಕಂಬಗಳನ್ನು ನಿಲ್ಲಿಸಲಾಗಿದೆ. ಇಲ್ಲಿನ ಬಿಡಿಭಾಗಗಳು ಬಿದ್ದು ನಾಶ ಹೊಂದುವ ಹಂತದಲ್ಲಿದ್ದಾಗ ರಾಬರ್ಟ್ ಸಿವೆಲ್ ೧೮೫೬ರ ನಂತರ ಅವುಗಳನ್ನು ಈ ದೇವಾಲಯದ ಆವರಣದಲ್ಲಿದ್ದ ಕಲ್ಲಿನ ರಥದ ಪಕ್ಕದಲ್ಲಿ ಇರಿಸಿದನೆಂದು ತಿಳಿದುಬರುತ್ತದೆ. ಗ್ರಿಬಲ್‌ರವರು ವಿಠ್ಠಲ ದೇವಾಲಯದ ಕಂಬಗಳನ್ನು ಇತರ ಬಿಡಿಭಾಗಗಳನ್ನು ದುರಸ್ತಿಗೊಳಿಸಿರುವುದಕ್ಕೆ ಮತ್ತು ವಿನಾಶಗೊಳಿಸಲು ಕಾರಣಗಳನ್ನು ಸಲ್ಲಿಸಿರುತ್ತಾರೆ. ರಥದ ಪಕ್ಕದಲ್ಲಿರುವ ಮಂಟಪಕ್ಕೆ ಎರಡು ಸಹಾಯಕ ಕಂಬಗಳನ್ನು ನಿರ್ಮಿಸಲಾಗಿದೆ.[೪೯] ಇದರ ಪೂರ್ವಮಂಟಪದ ಕಂಬಗಳಿಗೆ ಒತ್ತು ಕಂಬದ ಗೋಡೆಯನ್ನು ಕಟ್ಟಿಸಲಾಗಿದೆ. ಪಿ.ಡಬ್ಲ್ಯೂಡಿ. ಸಂಸ್ಥೆಯಿಂದ ಇದನ್ನು ಕಲ್ಲಿನಿಂದ ನಿರ್ಮಿಸಲಾಗಿದೆ.

ಯಾವುದೇ ಒಂದು ದೇವಾಲಯ ನಿರ್ಮಿಸುವಾಗ ಅದಕ್ಕಿರುವ ಭೌಗೋಳಿಕ ವಾತಾವರಣವನ್ನು ಸೃಷ್ಟಿಸಿ ರಸ್ತೆ ಸಂಪರ್ಕವನ್ನು ಕಲ್ಪಿಸುತ್ತಿದ್ದರು. ಇದಕ್ಕೆ ಅತ್ಯುತ್ತಮ ಉದಾಹರಣೆಯೆಂದರೆ ಕಮಲಾಪುರದ ಪೂರ್ವದಿಕ್ಕಿಗಿರುವ ಪಟ್ಟಾಭಿರಾಮ ದೇವಾಲಯ. ಈ ದೇವಾಲಯಕ್ಕೆ ಆವರಣ ನಿರ್ಮಿಸಿ ರಕ್ಷಣೆ ಮಾಡಿದ್ದು ಇದರಲ್ಲಿ ಕಲ್ಯಾಣ ಮಂಟಪ ಮಹಾ ಮಂಟಪಗಳಿದ್ದು ಅವುಗಳಲ್ಲಿ ಆಗ್ನೇಯ ದಿಕ್ಕಿಗಿರುವ ಕಲ್ಯಾಣಮಂಟಪಕ್ಕೆ ಎರಡು ಒತ್ತು ಗೋಡೆಯನ್ನು ನಿರ್ಮಿಸಿದ್ದಾರೆ. ಈಶಾನ್ಯ ದಿಕ್ಕಿಗಿರುವ ಬಾವಿಗೆ ಸುತ್ತಲೂ ಕಟ್ಟೆಯನ್ನು ಮೇಲ್ಭಾಗದಲ್ಲಿ ಕಟ್ಟಿಸಿ ಗಾರೆಯನ್ನು ಮೆತ್ತಲಾಗಿದೆ. ದೇವಾಲಯದ ಪ್ರವೇಶದ್ವಾರಕ್ಕೆ ಗೋಲಾಕಾರದ ದ್ವಾರಬಾಗಿಲು ಎಂತಲೂ ಕರೆಯುತ್ತಾರೆ. ದೇವಾಲಯದ ಪೂರ್ವಭಾಗದಲ್ಲಿ ಇದರಿಂದ ಒಳಭಾಗದಲ್ಲಿ ದೇವಾಲಯದ ಹಿಂಭಾಗದಲ್ಲಿ ದೊಡ್ಡ ಗಾತ್ರದ ಒತ್ತುಗೋಡೆಯನ್ನು ನಿರ್ಮಿಸಲಾಗಿದೆ. ಇದನ್ನು ಪುನಃ ೧೯೬೪-೬೫ರಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯು ದುರಸ್ತಿ ಕಾರ್ಯವನ್ನು ಕೈಗೊಳ್ಳುವುದರ ಮೂಲಕ ಇನ್ನಷ್ಟು ಸಂರಕ್ಷಿತಗೊಳಿಸಿತು.[೫೦]

ವಿಠ್ಠಲ ದೇವಾಲಯದ ಉತ್ತರಕ್ಕಿರುವ ಶಿವದೇವಾಲಯ ಭಗ್ನಗೊಂಡಿರುವ ಕಟ್ಟಡಗಳಲ್ಲಿ ಒಂದಾಗಿದೆ. ಪ್ರವೇಶ ದ್ವಾರದ ಮೇಲ್ಭಾಗದಲ್ಲಿ ಇದಕ್ಕೆ ಸಹಾಯಕ ಗೋಡೆಯನ್ನು ಕಟ್ಟಲಾಗಿದೆ. ದೇವಾಲಯದ ಮಂಟಪದಲ್ಲಿ ಒತ್ತು ಕಂಬಗಳನ್ನು ಸುಮಾರು ೫೬ ಕಡೆ ನಿರ್ಮಿಸಿದ್ದಾರೆ. ೧೯೦೪ರಲ್ಲಿ ಪ್ರಾಚೀನ ಸ್ಮಾರಕಗಳ ಸಂರಕ್ಷಣಾ ಕಾಯ್ದೆಯ ನಂತರ ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಗರ್ಭಗೃಹ ಇತರ ಮಂಟಪಗಳಿಗೆ ನಾಲ್ಕು ಗೋಡೆಗಳಿಗೆ ಒತ್ತು ಗೋಡೆಗಳನ್ನು ನಿರ್ಮಿಸಲಾಗಿದೆ. ಚಂಡಿಕೇಶ್ವರ ದೇವಾಲಯವು ವೀರಭದ್ರ ದೇವಾಲಯದ ಉತ್ತರಕ್ಕಿದೆ. ಈ ದೇವಾಲಯದ ಅವಶೇಷಗಳು ಸ್ಥಳಾಂತರಗೊಂಡಿದ್ದರಿಂದ ಗರ್ಭಗೃಹದ ಬಲಭಾಗಕ್ಕೆ ಮತ್ತು ಗೋಡೆಯನ್ನು ಕಟ್ಟಡದ ಮೇಲ್ಭಾಗಕ್ಕೆ ಕುಂಚಿಗೆ ಕಲ್ಲಿನ ಕಿರುಗೋಡೆಯನ್ನು ನಿರ್ಮಿಸಿದ್ದು ಕಂಡುಬರುತ್ತದೆ. ಅಲ್ಲದೆ ೧೯೫೩ಕ್ಕಿಂತ ಮೊದಲು ನಿರ್ಮಾಣ ಕಾರ್ಯ ಆಗಿದೆ ಎಂದು ಹೇಳಬಹುದು.

ಕಮಲಾಪುರದ ಉತ್ತರಕ್ಕಿರುವ ಚಂದ್ರಶೇಖರ ದೇವಾಲಯದ ಮೂರುಕಡೆಯಲ್ಲಿರುವ ಸುತ್ತುಗೋಡೆಯನ್ನು ಪುನಃ ಕಟ್ಟಡ ಕಟ್ಟಿಸಿ ಇತರ ಭಾಗಗಳನ್ನು ಜೀರ್ಣೋದ್ಧಾರ ಮಾಡುವ ಸಲುವಾಗಿ ಕಲ್ಲು, ಇಟ್ಟಿಗೆ ಮತ್ತು ಗಾರೆ ಬಳಕೆ ಮಾಡಿರುವುದು ಔಚಿತ್ಯ ಪೂರ್ಣವಾಗಿದೆ. ಇದರ ಪಶ್ಚಿಮ ಭಾಗದ ಪ್ರಕಾರ ಗೋಡೆ ಬಿದ್ದುದರಿಂದ ಇದಕ್ಕೆ ಪುನಃ ಕಟ್ಟಡವನ್ನು ಅದೇ ಜಾಗದಲ್ಲಿ ನಿರ್ಮಿಸಿದ್ದಾರೆ. ಇತ್ತೀಚಿಗೆ ಅನುಕೂಲಕ್ಕೆ ತಕ್ಕಂತೆ ಪ್ರಾಕಾರ ಗೋಡೆಯನ್ನು ಕಿರಿದಾಗಿ ಮಾಡಿಕೊಂಡು ಮಹಾದ್ವಾರದ ಬಳಕೆ ಕಡಿಮೆಯಾಗಿದೆ. ಈ ದೇವಾಲಯದ ಉತ್ತರ ದಿಕ್ಕಿಗಿರುವ ಸರಸ್ವತಿ ದೇವಾಲಯಕ್ಕೆ ಬ್ರಿಟಿಷರ ಕಾಲದಲ್ಲಿ ಬಲಭಾಗಕ್ಕೆ ಗೋಡೆಯನ್ನು ನಿರ್ಮಿಸಿದ್ದಾರೆ. ಆಧುನಿಕ ವಿಧಾನವನ್ನು ಅನುಸರಿಸಿ ಮೆಟ್ಟಿಲುಗಳನ್ನು ಮಾಡಲಾಗಿದೆ. ಇದನ್ನು ರಕ್ಷಣೆ ಮಾಡಿದ ಕಾಲಮಾನ ನಿಖರವಾಗಿ ತಿಳಿದುಬಂದಿಲ್ಲ. ಇದಲ್ಲದೆ ಪಶ್ಚಿಮ ಭಾಗದ ಗೋಡೆ ಬಿದ್ದಿದ್ದರಿಂದ ಅದನ್ನು ಪೂರ್ಣಗೊಳಿಸಲಾಗಿದೆ. ಇದನ್ನು ದುರಸ್ತಿ ಮಾಡಿಸಿದ ವ್ಯಕ್ತಿಯ ಮಾಹಿತಿಗಳು ಕಣ್ಮರೆಯಾಗಿವೆ.[೫೧]

ಹಜಾರರಾಮ ದೇವಾಲಯ ಮಹಾನವಮಿ ದಿಬ್ಬದ ವಾಯುವ್ಯ ಭಾಗಕ್ಕಿದೆ. ಈ ದೇವಾಲಯದ ಪಶ್ಚಿಮಕ್ಕೆ ಗೋಳಾಕಾರದ ಕಮಾನಿನ ದ್ವಾರವಿದ್ದು ೧೮೫೬ರಲ್ಲಿ ವಿನಾಶದ ಹಂತದಲ್ಲಿತ್ತು. ಸುತ್ತು ಗೋಡೆಗೆ ಮತ್ತು ಅದರ ಕಮಾನು ದ್ವಾರಕ್ಕೆ ಸಹಾಯಕ ಕೋಣೆಗಳನ್ನು ನಿರ್ಮಿಸಲಾಗಿದೆ. ಈ ಪ್ರಾಕಾರ ಗೋಡೆಗೆ ಒತ್ತು ಗೋಡೆಯನ್ನು ಮತ್ತು ಮೇಲ್ಛಾವಣಿ ಭಗ್ನಗೊಂಡಿದ್ದಕ್ಕೆ ಕಟ್ಟಡವನ್ನು ಪೂರ್ಣಗೊಳಿಸಲಾಗಿದೆ. ಆನೆಗಳು, ಕುದುರೆಗಳು,

ಕಾಲಾಳುಗಳು, ಕುದುರೆ ಆಳುಗಳು ಇನ್ನಿತರೆ ಶಿಲ್ಪಗಳು ಮಣ್ಣಿನಲ್ಲಿ ಮರೆಯಾಗಿದ್ದ ಅವಶೇಷಗಳು ಆಂಗ್ಲ ಅಧಿಕಾರಗಳು ಕೈಗೊಂಡ ದುರಸ್ತಿ ಕಾರ್ಯಗಳಿಂದ ಬೆಳಕಿಗೆ ಬಂದಿವೆ. ಹಜಾರರಾಮ ದೇವಾಲಯ ಕುರಿತು ಲಾಂಗ್ ಹರ್ಟ್ಸ್ ಈ ರೀತಿ ಅಭಿಪ್ರಾಯಿಸಿದ್ದಾರೆ. “ಈ ದೇವಾಲಯದ ಆವರಣ ಗೋಡೆಯನ್ನು ಪೂರ್ಣಗೊಳಿಸಿ ಹೊರಗೋಡೆಗೆ ಮತ್ತು ಗೋಡೆಯ ಮಂಟಪಕ್ಕೆ ಸಹಾಯಕ ಕಂಬಗಳನ್ನು ನಿರ್ಮಿಸಲಾಗಿದೆ. ಈ ಕಾರ್ಯವು ಅಂದಿನ ಲೋಕೋಪಯೋಗಿ ಇಲಾಖೆಯಿಂದ ನೆರವೇರಿತ್ತು ಎಂದು ದಾಖಲಿಸಿದ್ದಾರೆ.”[೫೨] ಈ ದೇವಾಲಯದಿಂದ ಕಿರುದಾರಿ ಮೂಲಕ ಹೋದರೆ ಪಾನ ಸುಪಾರಿ ಬಜಾರಿನಲ್ಲಿ ಪಟ್ಟಣದ ಯಲ್ಲಮ್ಮ ದೇವಾಲಯ ಕಾಣಬರುತ್ತದೆ. ಈ ದೇವತೆ ಹಿಂದಿನ ಕಾಲದಲ್ಲಿ ನಗರದ ಆರಾಧ್ಯ ದೇವತೆಯಾಗಿತ್ತು. ಸುಮಾರು ೭ ತಲೆಮಾರಿನಿಂದ ಇಂದಿನವರೆಗೆ ಕುರುಬರು ಪೂಜಾರಿಗಳಾಗಿ ಕರ್ತವ್ಯವನ್ನು ಮುಂದುವರಿಸುತ್ತಾರೆ. ಇದಕ್ಕೆ ಬ್ರಿಟಿಷರು ಯಾವ ರೀತಿಯ ರಕ್ಷಣೆಯನ್ನು ಕೊಟ್ಟರೆಂಬುದು ತಿಳಿದುಬಂದಿಲ್ಲ. ಗಾರೆ ಮತ್ತು ಇಟ್ಟಿಗೆಯಿಂದ ಮೇಲ್ಭಾವಣಿಯ ಗೋಡೆ ಭಾಗವನ್ನು ಸರಿಪಡಿಸಲಾಗಿದೆ. ಇದರ ಬಾಗಿಲುಗಳನ್ನು ಆಧುನಿಕ ಉಪಕರಣಗಳನ್ನು ಬಳಸಿ ಮಾಡಲಾಗಿದೆ. ಈ ದೇವಾಲಯದ ಪಕ್ಕದಲ್ಲಿರುವ ಮಾಧವ ದೇವಾಲಯ ವಿನಾಶ ಹೊಂದಿದ್ದು ಅದರ ಹತ್ತಿರ ಅಷ್ಟಕೋನಾಕೃತಿಯ ಕಾವಲು ಗೋಪರವಿದೆ. ಇದರ ದಕ್ಷಿಣ ಭಾಗಕ್ಕಿರುವ ಭಗ್ನಗೊಂಡ  ಗೋಡೆಯನ್ನು ಪುನಃ ನವೀಕರಿಸಲಾಗಿದೆ.

ಮಾತಂಗ ಪರ್ವತಕ್ಕೆ ಹತ್ತಲು ಇರುವ ಮೆಟ್ಟಿಲುಗಳು ರಿಪೇರಿ ಮಾಡಿ ಹವಾಮಾನದ ದೃಷ್ಟಿಯಿಂದ ಮೇಲ್ಭಾಗದ ವೀರಭದ್ರ ದೇವಾಲಯಕ್ಕೆ ಸುತ್ತು ಗೋಡೆಯನ್ನು ನಿರ್ಮಿಸಲಾಗಿದೆ. ಅಪಾಯವನ್ನು ತಪ್ಪಿಸುವ ಉದ್ದೇಶದಿಂದ ಇಂತಹ ಸ್ತುತ್ಯಾರ್ಹ ಕೆಲಸಗಳನ್ನು ಕಲೆಕ್ಟರುಗಳ ಮಾಡಿರುವುದು ಅಭಿನಂದನಾರ್ಹ. ಅಷ್ಟಕೋನಾಕೃತಿಯ ನೀರಿನ ತೊಟ್ಟಿ ಕಮಲಾಪುರದಿಂದ ಹಂಪಿಗೆ ಹೋಗುವ ದಾರಿಯಲ್ಲಿ ಕಂಡುಬರುತ್ತದೆ. ಇದು ಅಷ್ಟಭುಜಾಕೃತಿಯ ನೀರಿನ ಚಿಲುಮೆ. ಇದಕ್ಕೆ ದೊಡ್ಡ ಗಾತ್ರದ ಮೂರು ಒತ್ತು ಗೋಡೆಗಳನ್ನು ತೆರೆದ ಕಮಾನು ದ್ವಾರಗಳನ್ನು ನಿರ್ಮಿಸಲಾಗಿದೆ. ಈ ಕಟ್ಟಡ ಶಾಶ್ವತವಾಗಿ ಈವರೆಗೂ ಉಳಿದುಕೊಳ್ಳಲು ಇದರ ಸುತ್ತಲೂ ಮೂರು ಕಡೆ ನಿರ್ಮಿಸಿದ ಒತ್ತು ಗೋಡೆಗಳೇ ಕಾರಣವೆನ್ನಬಹುದು. ಬ್ರಿಟಿಷ್ ಇಂಜಿನಿಯರುಗಳು ಲೋಕೋಪಯೋಗಿ ಇಲಾಖೆ ವತಿಯಿಂದ ಸ್ವತಂತ್ರಪೂರ್ವದಲ್ಲಿ ಈ ಕಾರ್ಯವನ್ನು ಯಶಸ್ವಿಗೊಳಿಸಿದ್ದಾರೆ. ೧೮೯೩ರಲ್ಲಿ ಬಳ್ಳಾರಿ ಜಿಲ್ಲಾ ಕಲೆಕ್ಟರ್ ರಾಬರ್ಟ್ ಸಿವೆಲ್ ಮಹಾನವಮಿ ದಿಬ್ಬದಲ್ಲಿ ಮಣ್ಣಿನಿಂದ ಆವೃತ್ತವಾಗಿದ್ದ ಅಥವಾ ಹೂತು

ಮರೆಯಾಗಿದ್ದ ಶಿಲ್ಪವನ್ನು ಶೋಧಿಸಿ ಬೆಳಕಿಗೆ ತಂದರಲ್ಲದೆ ಅದಕ್ಕೆ ರಕ್ಷಣೆಯನ್ನು ಒದಗಿಸಲಾಗಿದೆ. ಈಗ ಅದು ಮಹಾನವಮಿ ದಿಬ್ಬದ ವಾಯುವ್ಯ ಭಾಗಕ್ಕಿದೆ. ಮನಮೋಹಕವಾಗಿರುವ ಈ ಶಿಲ್ಪವನ್ನು ಮಲ್ಲಸೇನಾ ಮಲದಾರಿ ದೇವನು (ಜೈನ ಶಿಕ್ಷಕ) ಚಿತ್ರಿಸಿ ಶಾಸನ[೫೩] ಬರೆದನೆಂದು ತಿಳಿದುಬರುತ್ತದೆ.

ಚಂದ್ರಶೇಖರ ದೇವಾಲಯದ ಪಕ್ಕದಲ್ಲಿರುವ ನೀರಿನ ಬುರುಜು ಚಿಕ್ಕದಾಗಿದ್ದು ಆದರೆ ಈಗ ಅದರ ಅವಶೇಷಗಳು ಮಾತ್ರ ಕಂಡುಬರುತ್ತವೆ. ಬಿರುಕು ಬಿಟ್ಟಿರುವ ಕಡೆ ಗಾರೆಯಿಂದ ನಯವಾಗಿ ಮೆತ್ತಿದ್ದಾರೆ. ಇನ್ನು ಉಳಿದ ಭಾಗ ತೆರೆದಿದ್ದು ನಿಶ್ಚಲವಾಗಿದೆ. ಇದನ್ನು ಲೋಕೋಪಯೋಗಿ ಇಲಾಖೆ ಇಪ್ಪತ್ತನೇ ಶತಮಾನದ ಮೊದಲಾರ್ಧದಲ್ಲಿ ಮಾಡಿಸಿರಬಹುದೆಂದು ಅಭಿಪ್ರಾಯಿಸಲಾಗಿದೆ.[೫೪] ಹಾಗೆಯೆ ಅಷ್ಟಭುಜಾಕೃತಿಯ ಸ್ನಾನದ ಗೃಹ ಸರಸ್ವತಿ ದೇವಾಲಯದ ಹತ್ತಿರವಿದೆ. ತೆರೆದ ಮಂಟಪ ಕಂಬಗಳಿಂದ ಸುತ್ತುವರೆದಿದ್ದು, ಸುತ್ತಲೂ ಅಲ್ಲಲ್ಲಿ ಕಂಡಿ ಕೊರೆದಿರುವ ಕಲ್ಲಿನ ಕಂಬಗಳನ್ನು ನಿಲ್ಲಿಸಲಾಗಿದೆ. ಬಹುಶಃ ಇದು ಸುತ್ತಲೂ ಆವರಿಸಿದ ವಸ್ತ್ರಗಳಿಂದ ಅದನ್ನು ಮರೆಮಾಡುವುದಿರಬೇಕು. ಈ ವಿಧಾನ ಒಳಗೆ ಸ್ನಾನ ಮಾಡುವವರು ಹೊರಗಿನ ಜನಕ್ಕೆ ಕಾಣಬಾರದೆಂದು ಈ ರೀತಿ ಮಾಡಿರಬಹುದೇ ಎಂಬುದನ್ನು ಊಹಿಸಬಹುದಾಗಿದೆ. ೧೮೫೭ರಲ್ಲಿ ಕಲೆಕ್ಟರ್ ಎ. ಹ್ಯಾಥವೇ ತುಂಗಭದ್ರಾ ಕಾಲುವೆಗಳನ್ನು ದುರಸ್ತಿ ಮಾಡಿಸಿದ್ದಲ್ಲದೆ ಅವುಗಳ ಕಾರ್ಯಗಳ ಬಗೆಗೆ ಬಳ್ಳಾರಿ ಜಿಲ್ಲಾ ಡೆಪ್ಯೂಟಿ ಚೀಫ್ ಇಂಜಿನಿಯರ್ ಪಿ.ಡಬ್ಲ್ಯೂ.ಡಿ. ವತಿಯಿಂದ ಕಾರ್ಯವನ್ನು ನೆರವೇರಿಸಿದರು. ಕಡ್ಡಿರಾಂಪುರ, ಕಮಲಾಪುರ, ಚಿತ್ತವಾಡಗಿ, ತಳವಾರಘಟ್ಟ, ಢಣಾಪುರ, ಬುಕ್ಕಸಾಗರ, ವೆಂಕಟಾಪುರ, ಹಂಪಿ, ರಾಮಸಾಗರ, ಕಂಪ್ಲಿ, ಸಿರುಗುಪ್ಪ ಈ ನದಿಯ ಕಾಲುವೆಗಳಿಗೆ ನೀರುಗಂಟೆಗಳನ್ನು ನೇಮಿಸಿದ್ದು ಆಡಳಿತದ ವರದಿಗಳಿಂದ[೫೫] ತಿಳಿದುಬರುತ್ತದೆ. ಅಂದಿನಿಂದ ಸ್ವದೇಶಿಯರಲ್ಲಿಯು ಕೂಡಾ ತಾವು ಮರೆತು ಹೋಗಿದ್ದ ಕೆರೆ–ಕಟ್ಟೆಗಳ, ಪ್ರಾಚೀನ ಸ್ಮಾರಕಗಳ ಬಗೆಗಿನ ಆಸಕ್ತಿಗಳೂ ಹೆಚ್ಚಿನ ಪ್ರಮಾಣದಲ್ಲಿ ಬೆಳೆದು ಬಂದವೆಂದು ಅಭಿಪ್ರಾಯಿಸಬಹುದು.

ಹಂಪಿ ಪರಿಸರದಲ್ಲಿ ಭಗ್ನಗೊಂಡ ಮತ್ತು ಶಾಶ್ವತವಾಗಿರುವ ಐದಾರು ಕೋಟೆಗಳು ಕಂಡುಬರುತ್ತವೆ. ಜಿಲ್ಲಾ ಕಲೆಕ್ಟರುಗಳು ಈ ಕಡೆ ಹೆಚ್ಚಿನ ಗಮನ ಕೊಡಲಾಗದಿದ್ದರೂ ಸಾಧಾರಣವಾಗಿ ನಿರ್ಮಿಸಿದ ಕೋಟೆಗಳ ಉಲ್ಲೇಖ ದುರಸ್ತಿ ಕಾರ್ಯಗಳನ್ನು ಕೈಗೊಂಡಿರುವುದು ಕಂಡುಬರುತ್ತದೆ. ಜನಾನ ಮತ್ತು ಆವರಣದ ಪಶ್ಚಿಮದ್ವಾರ ಮತ್ತು ಪೂರ್ವಗಳ ಮೇಲ್ಭಾಗದ ಗೋಡೆಗೆ ಕಲ್ಲಿನಿಂದ ಗೋಡೆಯನ್ನು ಪೂರ್ಣಗೊಳಿಸಿದ್ದಲ್ಲದೆ,

ಆವರಣದ ಗೋಡೆಗೆ ನಾಲ್ಕಾರು ಒತ್ತುಗೋಡೆಗಳನ್ನು ಕಟ್ಟಿಸಿದ್ದಾರೆ.. ಮೊದಲು ಕಮಾನು ದ್ವಾರವಿದ್ದು ಈಗ ಟ್ರಾಬಿಯೆಟ್ ವಿಧಾನದಲ್ಲಿದೆ. ಇದು ೧೯೮೦ರ ದಶಕದಲ್ಲಿ ಪಿ.ಡಬ್ಲೂ.ಡಿ. ವತಿಯಿಂದ ಮತ್ತು ಆನಂತರ ಕೇಂದ್ರದಿಂದ ಹಾಗೂ ರಾಜ್ಯ ಸರ್ಕಾರಗಳ ಸಹಯೋಗದಿಂದ ಪುರಾತತ್ವ ಇಲಾಖೆಯವರು ರಕ್ಷಣಾ ಕಾರ್ಯಗಳನ್ನು ಕೈಗೊಂಡಿರುವುದು ಸ್ಮರಣೀಯ. ಆಂಗ್ಲ ಅಧಿಕಾರಿಗಳ ಹಾಗೂ ವಿದೇಶಿ ಯಾತ್ರಿಕರ ಹಿತದೃಷ್ಟಿಯಿಂದ ಲೋಕೋಪಯೋಗಿ ಇಲಾಖೆಯವರು ಪೂರ್ವ, ಪಶ್ಚಿಮ ಹಾಗೂ ದಕ್ಷಿಣ ಗೋಡೆಗಳಿಗೆ ಒತ್ತು ಗೋಡೆಗಳನ್ನು ನಿರ್ಮಿಸಿದ್ದು ಕಂಡುಬರುತ್ತದೆ.[೫೬]

ಹಂಪಿಯ ಸ್ಮಾರಕಗಳು ವಿಜಯನಗರದ ಪೂರ್ವದಲ್ಲೂ ಹಾಗೂ ಇನ್ನುಳಿದ ಕೆಲವು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ನಂತರ ನಿರ್ಮಾಣಗೊಂಡಿದ್ದು ನಿಶ್ಚಿತ. ವಿಜಯನಗರೋತ್ತರ ಕಾಲದಲ್ಲಿಯೂ ಸಾಕಷ್ಟು ನಿರ್ಮಾಣದ ಕಾರ್ಯಗಳಾಗಿದ್ದರೂ ಅವು ಸಹ ರಿಪೇರಿ ಅಥವಾ ದುರಸ್ತಿ ಕಾರ್ಯಗಳಿಗೆ ಒಳಗಾಗಿವೆಯೆಂದು ಹೇಳಬಹುದು. ಇತಿಹಾಸದ ಆರಂಭದಿಂದ ಇಂದಿನವರೆಗೆ ಈ ಭಾಗದಲ್ಲಿ ಎಷ್ಟೊಂದು ಕ್ಷಾಮ ಅಥವಾ ಬರಗಾಲಗಳು ಉದ್ಭವವಾಗಿವೆಂಬುದನ್ನು ಹಾಗೂ ವಿಜಯನಗರೋತ್ತರ ಕಾಲದಿಂದ ಇಂದಿನವರೆಗೆ ಆದಂತ ಅತೀವೃಷ್ಠಿ ಮತ್ತು ಅನಾವೃಷ್ಠಿ ಚಿತ್ರಣಗಳು ಆಂಗ್ಲರ ಆಡಳಿತ ಕಾಲದಲ್ಲಿ ಸಿದ್ಧಗೊಂಡ ವರದಿ ಹಾಗೂ ಗ್ಯಾಜೇಟಿಯರ್‌ಗಳಿಂದ ತಿಳಿದು ಬರುತ್ತದೆ.[೫೭] ೧೮೭೭ರಲ್ಲಿ ಕ್ಷಾಮ ಬಂದಾಗ ಪರಿಹಾರ ಕಾರ್ಯಕ್ರಮಗಳನ್ನು ಸರ್ಕಾರ ಹೆಚ್ಚಿನ ಮುತುವರ್ಜಿವಹಿಸಿ ನಿರ್ವಹಿಸಿತ್ತು. ಅಲ್ಲದೇ ಜನರಿಗೆ ಕೆಲಸ ನೀಡುವ ಸಲುವಾಗಿ ಆಗ ಕೋಟೆಗೋಡೆಗೆ ಕಂದಕಗಳನ್ನು ನಿರ್ಮಿಸುವುದರ ಮೂಲಕ ಜನರ ಬದುಕಿನ ನಿರ್ವಹಣೆಗೆ ನೆರವಾಗಿದ್ದರೆಂದು ತಿಳಿದುಬರುತ್ತದೆ.[೫೮] ಖ್ಯಾತ ಸ್ಥಪತಿಗಳು ಸಹ ವಿದೇಶದಿಂದ ಬಂದಿರುವುದು ತಿಳಿಯುತ್ತದೆ. 'Jaoodeua ponte' ಎಂಬ ವ್ಯಕ್ತಿ ಪೋರ್ಚುಗೀಸ್ ಗವರ್ನರ್‌ನಿಂದ ಆಜ್ಞೆ ಪಡೆದು ಗೋವಾದಿಂದ ವಿಜಯನಗರಕ್ಕೂ ಬಂದಿದ್ದನು. ಇಲ್ಲಿ ಕೆರೆ-ಕಟ್ಟೆ ನಿರ್ಮಿಸುವಾಗ ಬ್ರಿಟಿಷರು ಕೆಲಸ ನಿರ್ವಹಿಸಿದ ಶ್ರಮಿಕನಿಗೆ ಪರಿಹಾರವನ್ನು ನೀಡುವುದರ ಮೂಲಕ ಕೂಲಿ ನೀಡುತ್ತಿದ್ದರು. ಪ್ರವಾಸಿಗರಿಗೆ ಮತ್ತು ಕೃಷಿಕರಿಗೆ ಇತರ ರೈತ ವರ್ಗದವರಿಗೆ ಅನುಕೂಲವಾಗುವಂತೆ ನೀರಿನ ಬಾವಿಗಳನ್ನು ತೊಡಿಸಿದ್ದು ಇರುವ ಬಾವಿಗಳನ್ನು ದುರಸ್ತಿಗೊಳಿಸಿದ್ದುಲ್ಲದೆ ಕೆರೆಗಳಲ್ಲಿ ಹೂಳೆತ್ತಲು ಮತ್ತು ಭತ್ತದ ಗದ್ದೆಗಳಿಗೆ ಮತ್ತು ತೋಟಗಳಿಗೆ ಹೊಸಪೇಟೆಯ ದಕ್ಷಿಣಕ್ಕಿರುವ ರಾಯರ ಕೆರೆಯಲ್ಲಿ ಹೂಳೆತ್ತಲು ಸಾಪಿರ ಜನ ಕೆಲಸ

ಮಾಡಿದರೆಂಬುದು ತಿಳಿದುಬರುತ್ತದೆ. ಬ್ರಿಟಿಷರು ಮಾಡಿದ ನಾಗರಿಕ ಸೇವಾ ಕಾರ್ಯಗಳು ಹೆಚ್ಚಿನ ಮನ್ನಣೆಗಳಿಸಿದ್ದವು. ಹಂಪಿಗೆ ಬರುವ ಯಾತ್ರಿಕರಿಗೆ ಕಮಲಾಪುರದಲ್ಲಿ ಕ್ರಿ.ಶ. ೧೮೯೦ರಲ್ಲಿ ಒಂದು ಬಂಗಲೆಯನ್ನು ನಿರ್ಮಿಸಿದರಲ್ಲದೆ ಕಲೆಕ್ಟರುಗಳ ವಾಸ ಮಂದಿರವು ಕೂಡಾ ಆಗಿತ್ತು. ಇದಕ್ಕಿಂತ ಮೊದಲು ಕಲೆಕ್ಟರುಗಳು ೧೮೫೦ರಲ್ಲಿ ಛತ್ರವನ್ನು ನಿರ್ಮಾಣ ಮಾಡಿದ್ದರು.[೫೯] ಈ ಮೇಲಿನಂತೆ ತುರ್ತು ಕ್ರಮ ಕೈಗೊಳ್ಳಲು ೧೮೩೮ರಲ್ಲಿ ಹಂಪಿಯ ಸ್ಮಾರಕಗಳನ್ನು ನೋಡಲು ಬರುವ ಯಾತ್ರಿಕರಿಗೆ ಉತ್ತಮ ಮಾರ್ಗ ಹಾಗೂ ಕಿರುದಾರಿಗಳನ್ನು ಮಾಡಲಾಯಿತು.

ಬ್ರಿಟಿಷ್ ಆಡಳಿತವು ೧೮೭೯ರಲ್ಲಿ ಹಂಪಿ ಅವಶೇಷಗಳಿರುವ ಸ್ಥಳಗಳಿಗೆ ದಾರಿಗಳನ್ನು ಮತ್ತು ರಕ್ಷಣಾ ಕೆಲಸಗಳನ್ನು ಮಾಡಿಸಿದರು. ಸರ್ಕಾರ ನೀಡಿದಷ್ಟು ಮೊತ್ತಕ್ಕೆ ಕಾಯ್ದೆಗಳ ಪ್ರಕಾರ ರಕ್ಷಣಾತ್ಮಕ ಕಾರ್ಯಗಳನ್ನು ಕೈಗೊಂಡು ಅದರ ವರದಿಯನ್ನು ಪ್ರಕಟಿಸುತ್ತಿದ್ದರು. ಸುಮಾರು ೧೫೩ ವರ್ಷಗಳ ಕಾಲ ಕಲೆಕ್ಟರುಗಳ ಆಳ್ವಿಕೆಯಲ್ಲಿ ಗಮನಾರ್ಹವಾದ ಕಾರ್ಯಗಳು ಜರುಗಿವೆ. ೧೮೮೫ರಲ್ಲಿ ಹಂಪಿ ಪಂಪಾ ವಿರೂಪಾಕ್ಷ ರಥೋತ್ಸವಕ್ಕೆ ಮಾರ್ಚ್ ತಿಂಗಳಲ್ಲಿ ಸರಕಾರ ಅನುಮತಿಸಿತ್ತಲ್ಲದೆ ಎಲ್ಲ ವ್ಯವಸ್ಥೆಯನ್ನು ಮಾಡುವ ಭರವಸೆ ಕೊಟ್ಟಿತು. ಹಂಪಿಯಲ್ಲಿರುವ ಕೆಲ ದೇವಾಲಯಗಳನ್ನು ಉಲ್ಲೇಖಿಸಲಾಗಿದೆ. ಹಂಪಿ ಪರಿಸರದಿಂದ ತುಸು ದೂರದಲ್ಲಿರುವ ಅನಂತಶಯನಗುಡಿ ಹಾಗೂ ಮಾಲ್ಯವಂತ ರಘುನಾಥ ದೇವಾಲಯಗಳಿಗೂ ಕೂಡಾ ಬ್ರಿಟಿಷರ ರಕ್ಷಣಾ ಕಾರ್ಯಗಳಿಗೆ ಒಳಗಾಗಿದ್ದವು. ತಳವಾರು ಘಟ್ಟದ ಹೆಬ್ಬಾಗಿಲು ಸಹ ರಕ್ಷಣಾಕಾರ್ಯ ಕಟ್ಟಡಗಳ ಪಟ್ಟಿಯಲ್ಲಿ ಸೇರಿವೆ. ಈಗಲೂ ಹಂಪಿಯಲ್ಲಿರುವ ದೇವಾಲಯಗಳನ್ನು ಯುನೆಸ್ಕೋದ ಅನುದಾನದಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ ಹಂಪಿಯು ತನ್ನ ಪ್ರಾಧಿಕಾರದ ವತಿಯಿಂದ ರಕ್ಷಣಾ ಕಾರ್ಯವನ್ನು ಮುಂದುವರೆಸಿದೆ.

ಕರ್ನಾಟಕ ಸರ್ಕಾರ ಹಂಪಿ ಸ್ಮಾರಕಗಳ ಸಂರಕ್ಷಣೆ ಹಾಗೂ ಅಭಿವೃದ್ಧಿಗಾಗಿ ಕೈಗೊಂಡಿರುವ ಕ್ರಮಗಳಲ್ಲಿ ಪ್ರಮುಖವಾಗಿ 'ಹಂಪಿ ಅಭಿವೃದ್ಧಿ ಪ್ರಾಧಿಕಾರ' ವನ್ನು ಸ್ಥಾಪಿಸಲು ಮುಂದಾಗಿರುವುದು ಗಮನೀಯ ಅಂಶವಾಗಿದೆ. ಹಂಪೆಯ ಎಲ್ಲಾ ಪುರಾತತ್ವ ಅವಶೇಷಗಳ ಮತ್ತು ನೈಸರ್ಗಿಕ ಪರಿಸರಗಳೊಂದಿಗೆ ಅದರ ಸಾಂಸ್ಕೃತಿಕ ಪರಂಪರೆಯನ್ನು ಸಂರಕ್ಷಿಸುವುದಕ್ಕಾಗಿ ಕರ್ನಾಟಕ ರಾಜ್ಯದಲ್ಲಿ ಅದರ ಸಾಂಸ್ಕೃತಿಕ ಸಮಗ್ರತೆಯನ್ನು ರಕ್ಷಿಸುವುದಕ್ಕಾಗಿ ಮತ್ತು ಹಂಪಿ ವಿಶ್ವಪರಂಪರೆಯ ಪ್ರದೇಶದ ಸಮರ್ಥ ಅಭಿವೃದ್ಧಿಯನ್ನು

ಚರ್ಚೆಗೊಳಪಡಿಸುವುದಕ್ಕಾಗಿ ಮತ್ತು ಹಂಪಿ ವಿಶ್ವಪರಂಪರಾ ಪ್ರದೇಶ ನಿರ್ವಹಣಾ ಪ್ರಾಧಿಕಾರವನ್ನು ೨೦೦೨ರಲ್ಲಿ ರಚಿಸಿದೆ.[೬೦] ಬಳ್ಳಾರಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚನೆಯಾಗಿರುವ ಈ ಪ್ರಾಧಿಕಾರದಲ್ಲಿ ಕೊಪ್ಪಳ ಜಿಲ್ಲಾಧಿಕಾರಿಗಳು ಉಪಾಧ್ಯಕ್ಷರಾಗಿಯೂ ಹಾಗೂ ಹೊಸಪೇಟೆ ಸಹಾಯಕ ಆಯುಕ್ತರು ಹಂಪಿ ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರಾಗಿಯೂ ಕಾರ್ಯನಿರ್ವಹಿಸುತ್ತಾರೆ. ಇವರಲ್ಲದೇ ಹಲವು ವಿಷಯ ತಜ್ಞರನ್ನು ಸಮಿತಿ ಸದಸ್ಯರನ್ನಾಗಿ ಒಳಗೊಂಡಿದೆ. ಪ್ರಾಧಿಕಾರ ರಚನೆಯ ನಂತರ ಹಂಪೆಯ ಮುಖ್ಯ ಬಜಾರ್‌ನಲ್ಲಿ ಇದ್ದ ಅನೇಕ ಅಕ್ರಮ ಒತ್ತುವರಿಗಳನ್ನು ತೆರುವುಗೊಳಿಸಿದೆ. ತುಂಗಭದ್ರಾ ನದಿಯ ಸ್ನಾನಘಟ್ಟದಲ್ಲಿ ಗಿಡಗಂಟೆಗಳನ್ನು ಸ್ವಚ್ಛಗೊಳಿಸಿ ಹುಲ್ಲುಗಾವಲು ಬೆಳೆಸಿ ಮೆಟ್ಟಿಲುಗಳನ್ನು ನಿರ್ಮಿಸಿ ತುಂಗಭದ್ರಾ ನದಿಯನ್ನು ನಯನ ಮನೋಹರವಾಗಿ ಪರಿವರ್ತಿಸಲಾಗಿದೆ. ಅಲ್ಲಲ್ಲಿ ಶೌಚಾಯಲಗಳನ್ನು ನಿರ್ಮಿಸಿ ಪ್ರವಾಸಿಗರಿಗೆ ಸೌಲಭ್ಯ ಕಲ್ಪಿಸಲಾಗಿದೆ. ವಿರೂಪಾಕ್ಷ ದೇವಾಲಯದ ಮುಂದಿನ ಬಜಾರ್‌ನ ಅಕ್ಕಪಕ್ಕ ಇರುವ ಕಲ್ಲಿನ ಮಂಟಪಗಳ ಪೈಕಿ ಕೆಲವನ್ನು ತೆರವುಗೊಳಿಸಿ ಯಥಾಸ್ಥಿತಿ ಕಾಪಾಡಲಾಗಿದೆ.

ಭಾರತ ಪ್ರಾಚ್ಯವಸ್ತು ಇಲಾಖೆಯ ವತಿಯಿಂದ ಸ್ಮಾರಕಗಳ ಸುತ್ತ ತಂತಿಬೇಲಿಯನ್ನು ನಿರ್ಮಿಸಿ ಒಳಭಾಗದಲ್ಲಿ ಹುಲ್ಲುಗಾವಲು ಬೆಳೆಸಿ ನೋಡುಗರ ಕಣ್ಣಿಗೆ ತಂಪು ನೀಡುವಂತೆ ಮಾಡಲಾಗಿದೆ. ಅಲ್ಲದೇ ಪ್ರಾಚ್ಯವಸ್ತು ಇಲಾಖೆಯ ವತಿಯಿಂದ ವಿಜಯವಿಠ್ಠಲ ದೇವಾಲಯದ ಸಪ್ತಸ್ವರ ಹೊರಡಿಸುವ ಕಂಬಗಳಿಗೆ ಸುತ್ತಲಿನ ಮಂಟಪಗಳಿಗೆ, ಕಲ್ಲಿನ ರಥಕ್ಕೆ ದೀಪಾಲಂಕಾರ ಮಾಡಿ ಹೊಸ ಮೆರಗು ನೀಡಲಾಗಿದೆ. ೪೦ ಲಕ್ಷ ರೂ ವೆಚ್ಚದಲ್ಲಿ ಡೋಲೋತ್ಸವ ಮಂಟಪ, ಕಲ್ಲಿನರಥ, ವೃಂದಾವನ, ನವರಂಗಗಳನ್ನು ವಿದ್ಯುದೀಕರಣ[೬೧] ಮಾಡಿದೆ. ಯಾವೊಂದು ನೆಲೆ ವಿಶ್ವ ಪಾರಂಪರಿಕ ಪಟ್ಟಿಯಲ್ಲಿ ಇದೆಯೆಂದರೆ ವರ್ಷಕ್ಕೆ ಸುಮಾರು ೫೦ ಕೋಟಿ ರೂಪಾಯಿ ಖರ್ಚು ಮಾಡಿ ರಾಷ್ಟ್ರೀಯ ಅಂತಾರಾಷ್ಟ್ರೀಯ ಪತ್ರಿಕೆಗಳಲ್ಲಿ ನಿಯತಕಾಲಿಕೆಗಳಲ್ಲಿ ಆ ಸ್ಥಳದ ಬಗ್ಗೆ ಜಾಹೀರಾತು ನೀಡಿ ಪಡೆಯುವ ಪ್ರಚಾರಕ್ಕಿಂತ ಅಧಿಕ ಎಂದು ಹೇಳಬಹುದು. ಬಹುತೇಕ ಜನರು ತಿಳಿದಿರುವಂತೆ ಯುನೆಸ್ಕೋ ಅಥವಾ ವಿಶ್ವಪರಂಪರಾ ಸಮಿತಿ ಹಣ ನೀಡುವ ಸಂಸ್ಥೆಯಲ್ಲ. ಆದರೆ ಅದು ಹಣವನ್ನು ಕ್ರೋಢೀಕರಿಸುವ ಮಾರ್ಗವನ್ನು ಸೂಚ್ಯವಾಗಿ ನಿರ್ಮಾಣ ಮಾಡುತ್ತದೆಂದರೆ ತಪ್ಪಾಗಲಾರದು. ಸಮಿತಿಯ ಸಲಹೆಯ ಮೇರೆಗೆ ಅಂತಾರಾಷ್ಟ್ರೀಯ ಸಂಸ್ಥೆಗಳು ಇಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಮುಂದಾಗಬಹುದು. ಹಂಪಿಗೆ ಭೇಟಿ ನೀಡಿದ ತಂಡದ ಮುಖ್ಯಸ್ಥ ಫೆಂಗ್ ಜಿಂಗ್ ಪ್ರಕಾರ

ಯುನೆಸ್ಕೋ ಇದುವರೆಗೆ ಬೇರೆ ಬೇರೆ ಮೂಲಗಳಿಂದ ಹಂಪಿಗೆ ೨೫ ಸಾವಿರ ಅಮೆರಿಕನ್ ಡಾಲರ್ ನೆರವು ನೀಡಿದೆ. ಈ ಹಣವನ್ನು ಭಾರತದ ಪ್ರಾಚ್ಯವಸ್ತು ಇಲಾಖೆಯ ಮೂಲಕ ನೀಡಲಾಗಿದೆ ಎಂದು ತಿಳಿಸಿದ್ದಾರೆ.

**ವಿಜಯನಗರ ವಾಸ್ತುಶಿಲ್ಪಗಳ ವಿಶಿಷ್ಟತೆ**

೧. ಇಲ್ಲಿ ದೊರೆವ ಅಧಿಕ ಗ್ರಾನೈಟ್ ಶಿಲೆಯ ಗುಣದಿಂದ ಕಠಿಣವಾಗಿರುವುದರಿಂದ ಸೂಕ್ಷ್ಮ ಸುಂದರ ಕೆತ್ತನೆಗೆ ಆಸ್ಪದ ಸಿಕ್ಕಿಲ್ಲ

೨. ಈ ಶಿಲೆ ಕಠಿಣವಾದದರಿಂದ ಒಂದು ತರಹದ ವರದಾನವೂ ಆಗಿದೆ. ಎತ್ತರವಾದ ಕಂಬಗಳು ಛತ್ತಿನ ಹರವಾದ ಹಾಸಗಲ್ಲುಗಳು ಎತ್ತರವಾದ ಮಂಟಪಗಳು, ಗೋಪುರಗಳು, ಮಹಲ್‌ಗಳು, ಕಲ್ಲಿನಲ್ಲಿ ಕೊರೆದ ನೀರು ಹರಿಸುವ ಕಾಲುವೆಗಳು, ಪುಷ್ಕರಣಿಗಳು, ಸ್ನಾನಗೃಹಗಳು, ಕೋಟೆಯ ಗೋಪುರಗಳು ಹಾಗೂ ಕೋಟೆಯ ದ್ವಾರಗಳು ಮುಂತಾದ ಸರಳ ರೇಖೆಯಲ್ಲಿ ಚಲಿಸುವ ಕಟ್ಟಡಗಳನ್ನು ಕಟ್ಟಲು ಬಹಳ ಅನುಕೂಲ.

೩. ಗಟ್ಟಿ ಗುಣಧರ್ಮದ ಗ್ರಾನೈಟ್‌ನಿಂದ ಎತ್ತರ ಹಾಗೂ ಭವ್ಯ ಮೂರ್ತಿಗಳನ್ನು ಕಡಲೆಕಾಳು ಗಣೇಶ, ಸಾಸಿವೆಕಾಳು ಗಣೇಶ, ಉದ್ದಾನ ವೀರಭದ್ರ, ಲಕ್ಷ್ಮಿನರಸಿಂಹ ಶಿಲ್ಪಗಳನ್ನು ಕೆತ್ತಲು ಅನುಕೂಲವಾಯಿತು. ಇಂತಹ ಮೂರ್ತಿಗಳ ನಿರ್ಮಾಣ ವಿಜಯನಗರ ಶಿಲ್ಪಕಲೆಗೆ ವಿಶಾಲತೆಯನ್ನು ನೀಡಿದೆ.

೪. ಗ್ರಾನೈಟ್ ಶಿಲೆಯು ಸರಳರೇಖೆ ಮಾದರಿಯ ವಾಸ್ತುಶಿಲ್ಪಕ್ಕೆ ಅತ್ಯುತ್ತಮವಾಗಿದ್ದು, ವರ್ತುಲ, ಅರ್ಧವರ್ತುಲ, ವಕ್ರಗಳಿಗೆ ಕಠಿಣವಾಗಿದೆ. ವಿಜಯನಗರ ಕಂಬಗಳ ಶೈಲಿ ಎತ್ತರ ಹಾಗೂ ಸರಳ ಮೂರ್ತಿಗಳಾಗಿದ್ದು, ಬಳ್ಳಿಗಳು, ಮುಂತಾದವುಗಳಿಗೆ ಆಸ್ಪದವಿಲ್ಲ.

೫. ವಿಜಯನಗರದ ಕಟ್ಟಡಗಳು ಸಾಮಾನ್ಯವಾಗಿ ಎಲ್ಲವೂ ಎತ್ತರವಾದ ಗೋಡೆಗಳಿಂದ ಆವೃತವಾಗಿ, ರಕ್ಷಣಾ ದೃಷ್ಟಿಯಿಂದ ಎತ್ತರವಾಗಿವೆಯಲ್ಲದೆ ಪ್ರಾಕಾರಗಳಿಂದ ಕೂಡಿವೆ.

೬. ದೇವಾಲಯಗಳು ವಿಶಾಲವಾಗಿದ್ದು, ಮುಖಮಂಟಪ, ಸಭಾಮಂಟಪ, ರಂಗಮಂಟಪ, ಅಂತರಾಳ, ಪ್ರದಕ್ಷಿಣಾಪಥವಿರುವ ಗರ್ಭಗೃಹಗಳಿಂದ ಕೂಡಿವೆ. ದೇವಾಲಯಗಳ ಬಲಭಾಗದಲ್ಲಿ ಕಲ್ಯಾಣ ಮಂಟಪಗಳಿವೆ, ಸಭೆ ಸಮಾರಂಭ ಮದುವೆಗಳಿಗಾಗಿ ಇವುಗಳ ಉಪಯೋಗ ನಡೆಯುತ್ತಿದೆ.

೭. ತುಂಗಭದ್ರ ನದಿಯು ವಿಜಯನಗರಕ್ಕೆ ಬೇಕಾದ ನೀರಿನ ಸರಬರಾಜಿಗಾಗಿ ವರದಾನವಾಗಿದೆ. ನೀರಿನ ಏರಿಯಲ್ಲಿ ಅಣೆಕಟ್ಟು ಕಟ್ಟಿ, ಕಲ್ಲಿನಲ್ಲಿ ಕಾಲುವೆಗಳನ್ನು ಕೊರೆದು ನೀರನ್ನು ಸರಬರಾಜು ಮಾಡಿದ್ದಾರೆ.[೬೨] ಅರಮನೆಗಳು, ರಾಣಿವಾಸಗಳು, ದೇವಾಲಯಗಳು, ರಾಣಿಸ್ನಾನಗೃಹಗಳು, ಸಾರ್ವಜನಿಕ ಸ್ನಾನದ ಗೃಹಗಳು, ಪುಷ್ಕರಣಿಗಳು ಇಂಥ ನೀರಿನ ಸರಬರಾಜಿಗೆ ಒಳಪಟ್ಟಿವೆ ಹಾಗೂ ತುಂಗಭದ್ರ ನದಿಯು ನಗರಕ್ಕೆ ಪ್ರಾಕೃತಿಕ ಸೌಂದರ್ಯ ನೀಡಿದೆ.

೮. ಕ್ರಿ.ಶ. ೧೩೩೬–೧೫೬೫ ರವರೆಗಿನ ಸುಮಾರು ಎರಡು ಶತಮಾನಗಳ ದೀರ್ಘಾವಧಿಯಲ್ಲಿ ಇಲ್ಲಿನ ರಾಜರುಗಳು ವಿವಿಧ ಕಟ್ಟಡಗಳನ್ನು ಕಟ್ಟಿಸಿ, ಅವುಗಳ ಸಂಖ್ಯೆಯನ್ನು ಸಾವಿರಕ್ಕೂ ಹೆಚ್ಚಾಗುವಂತೆ ಮಾಡಿದ್ದಾರೆ.

೯. ವಿಜಯನಗರ 'ಸ್ಕೂಲ್ ಆಫ್ ಆರ್ಟ್ ಆರ್ಕಿಟೆಕ್ಚರ್'[೬೩] ಎಂದು ವಿಶೇಷ ಕೈಚಳಕದ ರೂವಾರಿಗಳು ತಮ್ಮ ಹೆಗ್ಗುರುತನ್ನು ಈ ಸ್ಮಾರಕಗಳ ಮೂಲಕ ನೀಡಿದ್ದಾರೆ. ದಕ್ಷಿಣ ಭಾರತದಲ್ಲಿಯೇ ವಿಜಯನಗರದ ವಾಸ್ತುಶಿಲ್ಪಗಳನ್ನು ಅವರು ಸಾಧಿಸಿರುವ ಹೆಗ್ಗುರುತುಗಳಿಂದಲೇ ಕಂಡುಹಿಡಿಯಬಹುದು.

೧೦. ಸುತ್ತು-ಸುತ್ತುಗಳುಳ್ಳ ಬಲಾಢ್ಯ ಕೋಟೆ ಕೊತ್ತಲಗಳನ್ನು ಕಟ್ಟಿಸಿ ರಕ್ಷಣಾ ವಸ್ತುವಿನಲ್ಲಿ ವಿಶೇಷತೆಯನ್ನು ಮೆರೆದಿರುವುದನ್ನು ಇಲ್ಲಿ ಕಾಣಬಹುದು.

೧೧. ವಿಜಯನಗರ ಸಾಮ್ರಾಜ್ಯದ ಸ್ಮಾರಕಗಳಲ್ಲಿ ದೇವಾಲಯಗಳ ಗೋಡೆಯ ಎತ್ತರಗಳು ಹಾಗೂ ಚಿತ್ರಗಳು ಕಲ್ಲಿನಲ್ಲಿ ಕಟ್ಟಲ್ಪಟ್ಟು ಅವುಗಳ ಮೇಲಿನ ಭಾಗಗಳಾದ ಶಿಖರ ಪಟ್ಟಿಕೆಗಳು, ಶಿಖರಗಳು, ಮೂರ್ತಿಗಳ ಕೃತಿಗಳಿಂದ ಸೌಂದರೀಕರಿಸಲಾಗಿದೆ. ಮಹಲ್ ಮತ್ತು ಗೃಹಗಳನ್ನು ಕಟ್ಟಿಗೆಯಿಂದಲೂ ಸಹ ಪೂರ್ತಿ ಗೊಳಿಸಲಾಗಿದೆ

**ವಿದೇಶಿ ಯಾತ್ರಿಕರ ದೃಷ್ಟಿಯಲ್ಲಿ ಹಂಪಿ**

ವಿಜಯನಗರಕ್ಕೆ ಭೇಟಿ ನೀಡಿದ ಪ್ರಮುಖ ವಿದೇಶಿ ಪ್ರವಾಸಿಗರಲ್ಲಿ ಅಬ್ದುಲ್ ರಜಾಕ್, ನಿಕೋಲೋ ಕೊಂಟಿ ಮೊದಲಾದವರು ಪ್ರಮುಖರು ಇವರು ಹಂಪಿ ಮತ್ತು ಅದರ ಸುತ್ತಲಿನ ಪರಿಸರದಲ್ಲಿ ತಾವು ಕಣ್ಣಾರೆ ಕಂಡ ಹಲವಾರು ಘಟನೆಗಳನ್ನು ಮತ್ತು ವಿದ್ಯಮಾನಗಳನ್ನು ತಮ್ಮ ಪ್ರವಾಸ ಕಥನಗಳಲ್ಲಿ ಮತ್ತು ತಮ್ಮ ಪ್ರವಾಸ ವರದಿಗಳಲ್ಲಿ ವಿಶ್ಲೇಷಿಸಿದ್ದಾರೆ.[೬೪] ವಿದೇಶಿ ವಿದ್ವಾಂಸರು ಇಲ್ಲಿನ ವಿವಿಧ ಆಯಾಮಗಳ ಕುರಿತ ತಮ್ಮ ಕೃತಿ ಮತ್ತು ಸಂಶೋಧನಾ ವರದಿಗಳಲ್ಲಿ ವಿಶೇಷವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯವಸ್ಥಿತವಾಗಿ ದಾಖಲಿಸಿದ್ದಾರೆ.

ಹಂಪಿಗೆ ವಿದೇಶಗಳಿಂದ ಬಂದು ಹೋದವರ ಸಂಖ್ಯೆ ಅಪರಿಮಿತ. ಕ್ರಿ.ಶ. ೧೫ನೇ ಶತಮಾನದ ಪೂರ್ವಾರ್ಧದಿಂದ ಈ ಯಾತ್ರೆ ಆರಂಭವಾಗಿ ಕಳೆದ ಶತಮಾನದವರೆಗೂ ವಿದೇಶಿ ಪ್ರವಾಸಿಗರು ಬಂದು ಹೋಗಿದ್ದಾರೆ. ಬಂದು ಹೋದವರಲ್ಲಿ ಕೆಲವರು ಪ್ರವಾಸ ಕಥನಗಳನ್ನು ಬರೆದಿಟ್ಟಿದ್ದಾರೆ. ಇನ್ನೂ ಎಷ್ಟೋ ಪ್ರವಾಸಕಥನಗಳು ಕಾಲಗರ್ಭದಲ್ಲಿ ಅಡಗಿಹೋಗಿರುವುದು ತಿಳಿಯದಾಗಿದೆ. ಕೆಲವು ಪ್ರವಾಸಿಗರು ಬರೆದಿಟ್ಟುಕೊಂಡ ದಿನಚರಿಗಳು ಕನ್ನಡಕ್ಕೆ ಬಾರದೆ ಹಾಗೇ ಉಳಿದುಬಿಟ್ಟಿವೆ. ಹೀಗೆ ಉಳಿದುಕೊಂಡ ಪ್ರವಾಸಿಗರ ಪ್ರವಾಸ ಕಥನಗಳಲ್ಲಿ ವಿಜಯನಗರದ ಸಾಂಸ್ಕೃತಿಕ ಅನನ್ಯತೆಗಳು ನಮ್ಮ ಕಣ್ಮುಂದೆ ಅಪೂರ್ವ ಸಂಗತಿಗಳನ್ನು ಪ್ರದರ್ಶಿಸುತ್ತಿವೆ. ಇಲ್ಲಿಗೆ ಬಂದು ಹೋದ ಅಬ್ದುಲ್ ರಜಾಕ್, ಡೋಮಿಂಗೊ ಪ್ಯಾಸ್, ನಿಕೊಲೋ ಕೊಂಟಿ, ಫರ್ನಾವೂ ನ್ಯೂನಿಜ್, ಇಬ್ನಬಟೂಟ, ದುಆರ್ತೆ ಬಾರ್ಬೊಸಾ, ಅಥನೇಕ್ಷಿಯಸ್ ನಿಕಿಟಿನ್, ಸೀಸರ್ ಫ್ರೆಡರಿಕ್, ಬ್ಯಾರಡಸ್, ಲೆಫ್ಟಿನೆಂಟ್ ಎಮಿಟ್[೬೫] ಅಲ್ಲದೇ ಇವರಂಥೇ ಪ್ರಸಿದ್ಧರಲ್ಲದ ಪ್ರವಾಸಿಗರೂ ಕೂಡಾ ಹಂಪಿಗೆ ಭೇಟಿ ನೀಡಿದ್ದಾರೆ.

ವಿಜಯನಗರದ ಕುರಿತು ಆ ಅವಧಿಯಲ್ಲಿ ಬರೆದವರ ಸಂಖ್ಯೆ ೧೨ ಎಂದು ವಿದ್ವಾಂಸರು ಹೇಳಿರುವುವರು, ಸಂಖ್ಯಾ ದೃಷ್ಟಿಯಿಂದ ವಿಶೇಷವಲ್ಲ, ಆದರೆ ನ್ಯೂನಿಜ್, ಬಾರ್ಬೊಸಾ, ಅಬ್ದುಲ್ ರಜಾಕ್, ಡೋಮಿಂಗೋ ಪಯಾಸ್ ಈ ವಿದೇಶಿ ವಿದ್ವಾಂಸರ ಬರಹಗಳು ಬಹು ದೂರವಾಗಿವೆ. ಹಾಗೂ ಅವು ಮಹತ್ವದ ದಾಖಲೆಗಳಾಗಿವೆ. ಅವು ಕೊಡುವ ಚಾರಿತ್ರಿಕ ವಿವರಗಳು ಇತಿಹಾಸಕಾರರನ್ನು ಇತಿಹಾಸಕ್ಕೆ ತೆರೆದುಕೊಳ್ಳುವಂತೆ ಮಾಡುತ್ತವೆ. ಈ ವಿವರಗಳಲ್ಲಿ ರಾಜನ ಅಂತಃಪುರದ ಚಿತ್ರಗಳು ಸಾಮಾಜಿಕ ಆಚರಣೆಗಳು, ವಿವಿಧ ಜಾತಿಗಳ ವಿವರಗಳು ಹಲವು ಜ್ಞಾನ ಶಾಖೆಗಳು ವಿದ್ವಾಂಸರಿಗೆ ಬಹು ಉಪಯುಕ್ತವಾಗಿವೆ. ಕೆಲವೊಂದು ವಿದೇಶಿಯರು, ಬರೆದ ಕಥನಗಳನ್ನು ಬರೆದಿದ್ದಾರೆ. ಪೋರ್ಚುಗೀಸ್ ಭಾಷೆಯಲ್ಲಿರುವ ಪ್ಯಾಸ್ ಮತ್ತು ನ್ಯೂನಿಜರ ಮೂಲ ಗ್ರಂಥಗಳನ್ನು ಅರಬ್ಬಿ ವಿದ್ವಾಂಸರಾದ ಡೇವಿಡ್ ಲೋಪ್ ಅವರು ಪ್ರಕಟಿಸಿದ್ದಾರೆ. ಇವರು ಕ್ರಿ.ಶ. ೧೮೯೭ರಲ್ಲಿ ಪ್ರಕಟಿಸಿದ 'ಡೋಸ್ ರೈಸ್ ಡೆಬಿಸ್ನಾಗ' ಎಂಬ ಪುಸ್ತಕದಲ್ಲಿ ಮೇಲೆ ಹೇಳಿದ ಪ್ರವಾಸಿಗರ ಪೂರ್ಣ ವರ್ಣನೆಯನ್ನು ಕೊಟ್ಟಿದ್ದಾರೆ. ಆ ಪುಸ್ತಕಕ್ಕೆ ಬರೆದ ಮುನ್ನಡಿಯಲ್ಲೂ ಹೀಗೆ ಹೇಳಿದ್ದಾರೆ. ಇವರು ಬರೆದಿರುವುದು ಚರಿತ್ರಾ ದೃಷ್ಟಿಯಿಂದಾಗಲಿ ಅಥವಾ ಆ ದೇಶದ ಅದರಲ್ಲಿಯೂ ರಾಜಧಾನಿಯ ಅದರ ಉತ್ಪನ್ನ ವಸ್ತುಗಳ, ಅಲ್ಲಿಯ ಪದ್ಧತಿಗಳ ಮತ್ತು ಇತರ ಸಂಗತಿಗಳ ವರ್ಣನೆಯ ದೃಷ್ಟಿಯಿಂದಾಗಲಿ ಯಾವ ಭಾಷೆಯಲ್ಲಿ ಬರೆದಿರುವುದನ್ನಾದರೂ

ಮೀರಿಸುತ್ತದೆ. ಇಟಲಿ ದೇಶದ ಪ್ರವಾಸಿಗಳಾದ ನಿಕೋಲೋ ಕೊಂಟಿ, ವರ್ತೆಮಾ ಮತ್ತು ಫ್ರೆಡರಿಕ್ ಇವರುಗಳು ಕಂಡು ಬರೆದ ಚಿತ್ರ ಇವುಗಳಷ್ಟು ವಿವರವಾಗಿಲ್ಲ. ಈ ಕಾರಣಗಳಿಂದ ಪ್ಯಾಸ್ ಮತ್ತು ನ್ಯೂನಿಜ್ ವೃತ್ತಾಂತಗಳು ವಿಜಯನಗರ ಸಾಮ್ರಾಜ್ಯ ಸ್ಥಿತಿಗತಿಗಳನ್ನು ಅರಿಯಲು ಸಹಾಯಕವಾಗಿವೆ[೬೬] ಎನ್ನುತ್ತಾರೆ.

**ಅಬ್ದುಲ್ ರಜಾಕ್**

ಅಬ್ದುಲ್ ರಜಾಕ್ ಮೂಲತಃ ಪರ್ಶಿಯಾ ದೇಶದವನು. ಕ್ರಿ.ಶ. ೧೪೩೭ರಲ್ಲಿ ರಜಾಕನು ರುಖ್‌ಷಾನ ಸೇವೆಗೆ ಸೇರಿಕೊಂಡನು. ಕ್ರಿ.ಶ. ೧೪೪೧ರಲ್ಲಿ ಅಬ್ದುಲ್ ರಜಾಕ್‌ನನ್ನು ರುಖ್‌ಷಾ ವಿಜಯನಗರದ ರಾಜನಾದ ಎರಡನೇ ದೇವರಾಯನ ಬಳಿಗೆ ತನ್ನ ರಾಯಭಾರಿಯನ್ನಾಗಿ ಕಳುಹಿಸಿಕೊಟ್ಟನು. ಆತನು ಕ್ರಿ.ಶ. ೧೪೪೨ರಲ್ಲಿ ಹೆರಾತಿನಿಂದ ಇಂಡಿಯಾ ದೇಶಕ್ಕೆ ಹೊರಟು. ಕ್ರಿ.ಶ. ೧೪೪೩ರಲ್ಲಿ ವಿಜಯನಗರದ ಅರಸನಾದ ಇಮ್ಮಡಿ ದೇವರಾಯನ ಆಸ್ಥಾನಕ್ಕೆ ರಾಯಭಾರಿಯಾಗಿ ಬಂದನು. ಆತ ಈ ದೇಶದಲ್ಲಿ ಎರಡು ವರ್ಷಗಳ ಕಾಲ ಇದ್ದು ನಂತರ ತನ್ನ ದೇಶಕ್ಕೆ ಹಿಂದಿರುಗಿದ್ದಾನೆ. ರಜಾಕನು ತನ್ನ ಪ್ರವಾಸ ಕಥನವನ್ನಷ್ಟೇ ಅಲ್ಲದೆ ಷಾರುಖ್‌ನ ಮತ್ತು ತೈಮೂರನ ಇತರೆ ಉತ್ತರಾಧಿಕಾರಿಗಳ ಚರಿತ್ರೆಯನ್ನು ಬರೆದಿದ್ದಾನೆ.[೬೭] ಅಬ್ದುಲ್ ರಜಾಕ್‌ನು 'ಹಿಸ್ಟರಿ ಆಫ್ ಪರ್ಷಿಯಾ' ಎಂಬ ಕೃತಿಯನ್ನು ರಚಿಸಿ ಅದರಲ್ಲಿ ವಿಜಯನಗರ ಸಾಮ್ರಾಜ್ಯದ ವಿಚಾರಗಳನ್ನು ವ್ಯಕ್ತಪಡಿಸಿರುವನು. ಅವನು ವಿಜಯನಗರದಂತಹ ಪಟ್ಟಣವನ್ನು ಕಣ್ಣಿಂದ ನೋಡಿಲ್ಲ ಕಿವಿಯಿಂದ ಕೇಳಿಲ್ಲ ಎರಡನೇ ದೇವರಾಯನಂತಹ ಸಮರ್ಥ, ಬಲಿಷ್ಠ ಅರಸನು ಭಾರತದಲ್ಲಿಲ್ಲ ಎಂದು ದಾಖಲಿಸಿದ್ದಾನೆ. ಅಲ್ಲದೆ ಆತನಿಗೆ ೭೦೦ ರಾಣಿಯರಿದ್ದರೆಂದು, ಇಲ್ಲಿ ಸಂಪತ್ತಿನ ಹೊಳೆ ಹರಿಯುತ್ತಿದೆ. ಗುಲಾಬಿ ಹೂಗಳು, ಮುತ್ತುಗಳ ಮಾರಾಟ ವಿಶೇಷವಿದೆ. ಇಲ್ಲಿನ ಜನರು ಗುಲಾಬಿ ಪ್ರಿಯರು ಅವರಿಗೆ ಆಹಾರದಷ್ಟೇ ಅವಶ್ಯಕವೆನಿಸಿದ್ದವು. ರತ್ನ, ವಜ್ರ, ವೈಢೂರ್ಯಗಳನ್ನು ಇಲ್ಲಿಯ ಪೇಟೆಯ ಬೀದಿಗಳಲ್ಲಿ ಯಾವ ಭಯ ಭೀತಿಯಿಲ್ಲದೆ ಬಹಿರಂಗವಾಗಿ ಮಾರುತ್ತಾರೆ ಎಂದು ಮುಂದುವರೆದು ಆತ ವಿಜಯನಗರಕ್ಕೆ ಏಳು ಸುತ್ತಿನ ಕೋಟೆಯಿದೆ ಅದನ್ನು ಕಾಯಲು ೧೨೦೦೦ ಸೈನಿಕರಿದ್ದರು. ಇಲ್ಲಿ ೩೦೦ ಬಂದರುಗಳು ಅನೇಕ ಅರಮನೆ ದೇವಾಲಯಗಳು ಉದ್ಯಾನವನಗಳು ಮುಂತಾದ ಸ್ಮಾರಕಗಳಿವೆ ಎಂದು ತಿಳಿಸಿದ್ದಾನೆ. ರಾಜನು ಹಸಿರು ಬಣ್ಣದ ಸ್ಯಾಟಿನ ಬಟ್ಟೆಯ ಕವಚ ಧರಿಸುತ್ತಿದ್ದನು. ಮುತ್ತು ರತ್ನ ಮುಂತಾದ ಅಮೂಲ್ಯವಾದ ಮಣಿಗಳಿಂದ ಪ್ರಜ್ವಲಿಸುವ ಕೊರಳು ಪಟ್ಟಿಯನ್ನು

ಧರಿಸುತ್ತಿದ್ದನು. ಅರಸ ತೆಳ್ಳಗೆ ಮತ್ತು ಎತ್ತರವಾಗಿದ್ದು ಗಡ್ಡವಿಲ್ಲದೆ ಮುಖ ಅಂದವಾಗಿ ಕಾಣುತ್ತಿತ್ತು. ನಾನು(ರಜಾಕ್) ದೊರೆಯನ್ನು ಸಂದರ್ಶಿಸಿದಾಗ ಆತ ಅಪಾರವಾದ ಘನತೆ ಗೌರವಗಳಿಂದ ಸಿಂಹಾಸನವನ್ನು ಅಲಂಕರಿಸಿದ್ದನು. ರಾಜನ ಸಿಂಹಾಸನವು ಅಸಾಮಾನ್ಯ ಬೆಲೆಯುಳ್ಳ ಮುತ್ತುರತ್ನಗಳಿಂದ ಶೋಭಿಸುತ್ತಿತ್ತು. ಅಂದಿನ ಕಾಲದಲ್ಲಿ ಜನಸಾಮಾನ್ಯರು ಸಹ ಆಭರಣಗಳನ್ನು ಹೆಚ್ಚಾಗಿ ಧರಿಸುತ್ತಿದ್ದರು. ಕುಶಲಕಾರ್ಮಿಕರು, ವ್ಯಾಪಾರಿಗಳು ತಮ್ಮದೇ ಆದ ವೃತ್ತಿ ಸಂಘಗಳನ್ನು ಸ್ಥಾಪಿಸಿಕೊಂಡಿದ್ದರು. ರಾಜನ ಸಾಮ್ರಾಜ್ಯದ ವಿಸ್ತಾರವು ಸಿಲೋನಿನ ಗಡಿಯಿಂದ ಗುಲ್ಬರ್ಗಾದವರೆಗೆ, ಒರಿಸ್ಸಾದಿಂದ ಮಲಬಾರಿನವರೆಗೆ ಹರಡಿತ್ತು. ಅರಸನು ನಗರದಲ್ಲಿ ಸುವ್ಯವಸ್ಥೆ ಕಲ್ಪಿಸಿಸಲು ೧೨೦೦೦ ರಕ್ಷಣಾ ಸೈನಿಕರನ್ನು ಹೊಂದಿದ್ದನು ಎಂದು ದಾಖಲಿಸುತ್ತಾನೆ.

**ದು ಆರ್ತೆ ಬಾರ್ಬೋಸಾ**

ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗರಲ್ಲಿ ದು ಆರ್ತೆ ಬಾರ್ಬೋಸಾ ಮುಖ್ಯನಾಗಿದ್ದಾನೆ. ಕ್ರಿ.ಶ. ೧೫೦೧ರಲ್ಲಿ ಭಾರತಕ್ಕೆ ಬಂದನು. ಈತನು ಲಿಸ್ಬೆನ್ನಿನ್ನಲ್ಲಿ ೧೫ನೇ ಶತಮಾನದ ಉತ್ತರಾರ್ಧದಲ್ಲಿ ಹುಟ್ಟಿದನು. ಪೋರ್ಚುಗಲ್ ದೇಶದವನಾದ ಈತ ಕ್ರಿ.ಶ. ೧೫೧೫ರಲ್ಲಿ ವಿಜಯನಗರದ ಅರಸ ಶ್ರೀಕೃಷ್ಣದೇವರಾಯನ ಆಸ್ಥಾನಕ್ಕೆ ಬಂದಿದ್ದನು. ಶ್ರೀಕೃಷ್ಣದೇವರಾಯನ ವಿದೇಶಾಂಗ ನೀತಿಗೆ ಉತ್ತೇಜಿಸಿದನು. ಮುತ್ತು, ರತ್ನ, ಕುದುರೆ, ಮುಂತಾದ ವಸ್ತುಗಳನ್ನು ವಿದೇಶದಿಂದ ಆಮದು ಮಾಡಿಕೊಂಡು ಔಷಧ, ಕಬ್ಬಿಣ, ಸಾಂಬರ್ ಪದಾರ್ಥಗಳನ್ನು ರಫ್ತು ಮಾಡುತ್ತಿದ್ದರು. ಭಟ್ಕಳ ಇವರ ಬಂದರವಾಗಿತ್ತು. ಈ ಬಂದರಿನ ಮೂಲಕ ವಿದೇಶಿ ವ್ಯಾಪಾರ ಮಾಡುತ್ತಿದ್ದರು. ರಾಜನು ಪ್ರಜೆಗಳ ಬಗ್ಗೆ ಕರುಣೆಯುಳ್ಳವನಾಗಿದ್ದನು. ಅಂದು ವಿಜಯನಗರದ ಸಾಮ್ರಾಜ್ಯವು ಅರಮನೆ ಭವನ, ಉದ್ಯಾನವನಗಳಿಂದ, ದೇವಾಲಯಗಳಿಂದ ಕಂಗೊಳಿಸುತ್ತಿತ್ತು. ರಾಜಧಾನಿಯಲ್ಲಿ ಅವಿರತವಾಗಿ ವ್ಯಾಪಾರ ನಡೆಯುತ್ತಿತ್ತು. ರಾಜ್ಯದಲ್ಲಿ ಅನೇಕ ವಜ್ರಗಳು ಕಾಣಸಿಗುತ್ತವೆ. ಏಕೆಂದರೆ ನರಸಿಂಗನ ರಾಜ್ಯದಲ್ಲಿ ವಜ್ರದ ಗಣಿಯೊಂದಿದೆ. ಇನ್ನೊಂದು ದಖ್ಖನ್ ರಾಜ್ಯದಲ್ಲಿದೆ. ಸಿಲೋನ್ ಹಾಗೂ ಸೆನೆಗಲ್ ಮುಂತಾದ ದೇಶಗಳಿಂದ ಮುತ್ತು ರತ್ನಗಳ ಆಮದಾಗುತ್ತಿದ್ದವು. ಮಲಬಾರಿನಿಂದ ಅನೇಕ ಹಡಗುಗಳು ಅಕ್ಕಿಯನ್ನು ತುಂಬಿಕೊಳ್ಳಲು ಇಲ್ಲಿಗೆ ಬರುತ್ತವೆ. ಅವು ಕ್ಯಾಂಬೆಯಿಂದ ಅನೇಕ ಪದಾರ್ಥಗಳನ್ನು ತರುತ್ತವೆ. ತಾಮ್ರ, ಪಾದರಸ, ಕುಂಕುಮ, ಮೆಣಸು, ಔಷಧಿ ಕುಂಕುಮ ಮತ್ತಿತರ ವಸ್ತುಗಳು ಈ ಕೋರಮಂಡಲ ತೀರದುದ್ದಕ್ಕೂ ವಿಸ್ತರಿಸಿಕೊಂಡಿರುವ

ಬಂದರಗಳ ಮೂಲಕ ವಹಿವಾಟು ನಡೆಯುತ್ತಿತ್ತು. ಅಲ್ಲದೇ ಬಹುಪಾಲು ಸಾಂಬಾರ್ ವಸ್ತುಗಳು ಮತ್ತು ಔಷಧಿಗಳು ಮಲೇಷ್ಯಾ, ಚೀನಾ ಮತ್ತು ಬಂಗಾಳದಿಂದ ವಿವಿಧ ಪದಾರ್ಥಗಳು ಬೇರೆಬೇರೆ ದೇಶಗಳಿಂದ ನೂರಾರು ಹಡಗುಗಳಲ್ಲಿ ಇಲ್ಲಿಗೆ ಬರುತ್ತವೆ ಎಂದು ತಿಳಿಸಿದ್ದಾನೆ.

ಕೃಷ್ಣದೇವರಾಯ ತೀರಿಕೊಂಡಾಗ ೫೦೦ ಸ್ತ್ರೀಯರ ದಹನವಾಯಿತು. ವಿಜಯನಗರ ಕಾಲದ ಹಿಂದೂಗಳಲ್ಲಿ ಕೆಲವು ಒಳ ಪಂಗಡಗಳಿದ್ದು ಒಳಪಂಗಡಗಳ ಎಂದರೆ ಕ್ಷತ್ರಿಯರು, ಬ್ರಾಹ್ಮಣರು ಹಾಗೂ ವೀರಶೈವರು. ಕ್ಷತ್ರಿಯರು ಪ್ರಭುಗಳ ಅಥವಾ ಆಡಳಿತಗಾರರಾಗಿದ್ದರು, ಬ್ರಾಹ್ಮಣರು ಪುರೋಹಿತರಾಗಿದ್ದುಕೊಂಡು ದೇವಾಲಯಗಳ ಮೇಲ್ವಿಚಾರಣೆ ಮಾಡುತ್ತಿದ್ದರು. ಸಸ್ಯಹಾರಿಗಳು, ಪಾವಿತ್ರ್ಯತೆಯಿಂದ ಜೀವನವನ್ನು ಸ್ವೀಕರಿಸುವವರಾಗಿದ್ದರು. ವೀರಶೈವರು ಕೊರಳಲ್ಲಿ ತಮ್ಮ ಇಷ್ಟ ದೇವರ ಸಂಕೇತವನ್ನು ಹಾಕಿಕೊಳ್ಳುತ್ತಿದ್ದರು. ಇವರಿಗೆ ಸಮಾಜದಲ್ಲಿ ವಿಶೇಷ ಸ್ಥಾನವಿತ್ತು. ಇವರು ಬ್ರಾಹ್ಮಣರ ಹಾಗೆಯೇ ಸಸ್ಯಹಾರಿಗಳು ಏಕ ಪತ್ನಿ ವ್ರತಸ್ಥರೂ ಆಗಿದ್ದರು. ಇಲ್ಲಿಯ ಸ್ತ್ರೀ–ಪುರುಷರ ಉಡುಗೆ–ತೊಡುಗೆ ಅವರ ಅಲಂಕಾರ, ಸುಗಂಧ ದ್ರವ್ಯಗಳನ್ನು ಬಳಸುತ್ತಿದ್ದನ್ನು ತಿಳಿಸಿದ್ದಾನೆ.

**ಡೊಮಿಂಗೊ ಪೇಸ್**

ಈತ ಪೋರ್ಚುಗಲ್ ದೇಶದ ಪ್ರವಾಸಿಗ. ಕ್ರಿ.ಶ. ೧೫೨೦ರಲ್ಲಿ ಶ್ರೀಕೃಷ್ಣದೇವರಾಯನ ಆಸ್ಥಾನಕ್ಕೆ ಭೇಟಿಯಿತ್ತನು. ಈತ ಪೋರ್ಚುಗೀಸ್ ಭಾಷೆಯಲ್ಲಿ ತನ್ನ ಪ್ರವಾಸ ಕಥನವನ್ನು ಬರೆದಿದ್ದಾನೆ. ವಿಜಯನಗರದ ರಾಜಧಾನಿಯ ವರ್ಣನೆ. ಅಲ್ಲಿ ಉತ್ಪನ್ನಗೊಳ್ಳುವ ವಸ್ತುಗಳ ಬಗೆಗೆ ಅಲ್ಲಿ ಆಚರಿಸಲಾಗುತ್ತಿದ್ದ ಆಚರಣೆಗಳ ಬಗ್ಗೆ ಅನೇಕ ಕುತೂಹಲಕರ ವರ್ಣನೆಗಳು ಅವನ ಬರಹಗಳಲ್ಲಿ ಇವೆ. ರಾಜನು ಸುಂದರವಾದ ಹಾಗೂ ದೊಡ್ಡದಾದ ಅರಮನೆಗಳನ್ನು ಕಟ್ಟಿಸಿದ್ದಾನೆ. ಅನೇಕ ಅಂಗಳಗಳಿವೆ. ಆ ಅಂಗಳಗಳಲ್ಲಿ ಅನೇಕ ದಿಬ್ಬಗಳೂ, ಕೊಳಗಳೂ, ಹೂಗಿಡಗಳು ಇವೆ. ಮರಗಳಿಂದಲೂ, ಹೂಗಿಡಗಳಿಂದ ತುಂಬಿದ ತೋಟಗಳಿವೆ. ಅರಮನೆಯ ಎಲ್ಲ ಕೆಲಸವೂ ಸ್ತ್ರೀಯರಿಂದಲೇ ನಡೆಯಬೇಕಾದ್ದರಿಂದ ಇವರಿಗೆ ಅರಮನೆಯೊಳಗೆ ಅವರಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸುತ್ತಾರೆ. ಹಿಂದೆ ನಾನು ಹೇಳಿದ ಕೊಳಗಳಲ್ಲಿ ಸ್ತ್ರೀಯರು ನಿತ್ಯವೂ ಸ್ನಾನಮಾಡಿ, ವಾದ್ಯ ಬಾರಿಸಿ ಹಾಡಿ ನಲಿಯುತ್ತಾರೆ. ರಾಜನು ಪ್ರತ್ಯೇಕವಾದ ಓಲಗಶಾಲೆಯಲ್ಲಿ ತನ್ನ ಶ್ರೀಮಂತ ಸರದಾರರು ಮತ್ತು ಅಧಿಕಾರಿಗಳೊಡನೆ

ಕುರಿತು ರಾಜ್ಯ ವ್ಯವಹಾರಗಳನ್ನು ಪರಿಶೀಲಿಸುತ್ತಾನೆ. ಅರಮನೆಯ ಪಾಕಗೃಹಗಳು ದೊಡ್ಡದಾಗಿವೆ.[೬೮] ಕೃಷ್ಣದೇವರಾಯನ ದಿನಚರಿ ತಿಳಿಯಲು ಪ್ಯಾಸ್‌ನ ಬರಹ ಆಧಾರವಾಗಿದೆ.

ಪ್ಯಾಸನು ಅಂದಿನ ನಗರವನ್ನು ಕುರಿತು ಹೀಗೆ ಹೇಳಿದ್ದಾನೆ. ದರ್ಚ ನಗರದಿಂದ ೧೮ ರಹದಾರ ದೂರವಿರುವ ನರಸಿಂಗ ರಾಜ್ಯದ ಹಾಗೂ ರಾಜ ಯಾವಾಗಲೂ ಅಲ್ಲಿ ವಾಸಿಸುವ ಬೀಸ್ನಗ ನಗರದ ಕಡೆಗೆ ಹೋಗುವಾಗ ಅನೇಕ ನಗರಗಳು ಮತ್ತು ಗೋಡೆಯುಳ್ಳ ಹಳ್ಳಿಗಳಿವೆ. ಮತ್ತು ಬೀಸ್ನಗ ನಗರ ತಲುಪುವ ಎರಡು ಹರದಾರಿ ಮುಂಚೆ ನಗರವನ್ನು ಪ್ರವೇಶಿಸಲು ಕಣಿವೆ ಮಾರ್ಗಗಳುಳ್ಳ ಉನ್ನತ ಬೆಟ್ಟ ಸಾಲುಗಳಿವೆ. ಇವುಗಳನ್ನು ಹೆಬ್ಬಾಗಿಲುಗಳೆಂದು ಕರೆಯಲಾಗುತ್ತಿದೆ. ಇವುಗಳ ಮೂಲಕವೇ ಪ್ರವೇಶಿಸಬೇಕು ಏಕೆಂದರೆ ಇವುಗಳ ಮೂಲಕವಲ್ಲದೆ ಬೇರೆ ದಾರಿಯಿಲ್ಲ. ಈ ಬೆಟ್ಟಸಾಲು ೨೫ ರಹದಾರಗಳ ಆವರ್ತನದಿಂದ ನಗರವನ್ನು ಸುತ್ತುವರಿಯುತ್ತದೆ. ಈ ಬೆಟ್ಟ ಸಾಲುಗಳಿಗೆ ಯಾವುದೇ ಸಮತಲ ಭೂಮಿ ಹತ್ತುವಲ್ಲೆಲ್ಲ ಅವು ಅದನ್ನು ಬಲಭದ್ರ ಗೋಡೆಯೊಂದಿಗೆ. ಅಡ್ಡಹಾಯುತ್ತವೆ. ಇದರಿಂದಾಗಿ ಮೊದಲ ಸಾಲಿನಲ್ಲಿರುವ ಮತ್ತು ನಗರಕ್ಕೆ ಪ್ರವೇಶ ಮಾರ್ಗಗಳಾಗಿರುವ ದ್ವಾರಗಳ ಮೂಲಕ ದಾರಿಗಳು ಹಾಯುವ ಸ್ಥಳಗಳನ್ನು ಹೊರತುಪಡಿಸಿ ಗುಡ್ಡಗಳು ಪೂರ್ತಿ ಮುಚ್ಚಿವೆ. ಇಂತಹ ಸ್ಥಳಗಳಲ್ಲಿ ಕೆಲವು ಮಂದಿ ಸುರಕ್ಷಿತವಿರಬಹುದಾದ ಸಣ್ಣ ಗುಹೆಗಳು ಇವೆ. ಈ ಬೆಟ್ಟ ಸಾಲುಗಳ ನಗರದ ಒಳಭಾಗದವರೆಗೆ ಸಾಗುತ್ತವೆ. ಇದೆಲ್ಲ ಸುತ್ತುಗಟ್ಟುಳ್ಳ ಪ್ರದೇಶಗಳ ನಡುವೆ ಭತ್ತ ಬೆಳೆಯುವ ಬಯಲುಗಳು ಕಣಿವೆಗಳು ಇವೆ ಎಂಬುದಾಗಿ ಹೇಳಿದ್ದಾನೆ.[೬೯]

**ಫರ್ನಾಒ ನ್ಯೂನಿಜ್**

ಪೋರ್ಚುಗಲ್ ದೇಶದವನಾದ ಈತ ವಿಜಯನಗರದ ಅರಸ ಅಚ್ಯುತರಾಯನ ಆಸ್ಥಾನಕ್ಕೆ ಭೇಟಿ ನೀಡಿದ್ದನು. ಅವನು ವಿಜಯನಗರವನ್ನು ಕುರಿತು ಒಂದು ಕೃತಿಯನ್ನು ರಚಿಸಿದ್ದಾನೆ. ಆ ಕೃತಿಯಲ್ಲಿ ಹಲವಾರು ವಿಚಾರಗಳನ್ನು ಚರ್ಚಿಸಿದ್ದಾನೆ. ವಿದೇಶಿ ಪ್ರವಾಸಿಗರಲ್ಲಿ ೧೬ನೇ ಶತಮಾನದ ಪೂರ್ವಾರ್ಧದಲ್ಲಿ ಬಂದ ನ್ಯೂನಿಜ್ ಪ್ರವಾಸಿ ಬರೆದ ಪ್ರವಾಸ ಕಥನವು ಅಬ್ದುಲ್ ರಜಾಕ್, ಬಾರ್ಬೋಸಾ, ಪ್ಯಾಸ್ ಇವರೆಲ್ಲರ ಬರಹಗಳಿಗಿಂತ ದೀರ್ಘವಾಗಿದೆ. ಅವನು ರಾಜನ ಆಡಳಿತ, ಸುತ್ತಮುತ್ತಣ ಜನಜೀವನ ಸಾಂಸ್ಕೃತಿಕ, ಸಂಗತಿಗಳನ್ನು ವಿವರವಾಗಿ ನೀಡಿದ್ದಾನೆ. ವಿಜಯನಗರದ ಸಮಕಾಲೀನ ಸಮಾಜೋ–ರಾಜಕೀಯ ಸಂಗತಿಗಳನ್ನು ಕುರಿತು ಇವರು ನೀಡಿರುವ ವಿವರಗಳು ಬೇರೆ ಯಾವ ಪ್ರವಾಸಿಗನೂ ನೀಡಿಲ್ಲದಿರುವುದು ಅವನ ವೈಶಿಷ್ಟ್ಯವಾಗಿದೆ. ಈತನು ಕುಶಲ ರಾಜತಾಂತ್ರಿಕ, ಅವನ ಬರಹಗಳಲ್ಲಿ ಕಾಣಿಸುವ

ರಾಜತಾಂತ್ರಿಕ ವಿವರಗಳು ನ್ಯೂನಿಜ್ ಮನೋಭಾವನೆಯನ್ನು ಪ್ರತಿಬಿಂಬಿಸುತ್ತವೆ. ಅವನು ೨೨ ಅಧ್ಯಾಯಗಳಲ್ಲಿ ವಿಜಯನಗರದ ವಿವರಗಳನ್ನು ನೀಡಿದ್ದಾನೆ. ಅರಮನೆಯಲ್ಲಿ ನಡೆಯುತ್ತಿದ್ದ ದುಷ್ಟಕೂಟಗಳು, ಕುಟಿಲೋಪಾಯಗಳು, ಮಂತ್ರಿ, ಸಾಮಂತ, ಡಣ್ಣಾಯಕರ, ಮನೋಭಾವನೆಗಳನ್ನು ಬಹು ವಿವರವಾಗಿ ನ್ಯೂನಿಜ್ ವರ್ಣಿಸಿದ್ದಾನೆ. ಅವನು ನೀಡಿರುವ ವಿವರಗಳು ಚಾರಿತ್ರಿಕ ಸಂಗತಿಗಳಾಗಿರುವುದನ್ನು ವಿದ್ವಾಂಸರು ಒಪ್ಪಿದ್ದಾರೆ. ಒಂದು ಉದಾಹರಣೆಯನ್ನು ನೋಡಬಹುದು. ಅದು ರಾಜನ ಊಟದ ವಿವರ ಕುತೂಹಲಕಾರಿಯಾಗಿದೆ.

ತನ್ನ ಸ್ವಂತ ಸೇವೆಗಾಗಿ ಅವನು ಹತ್ತು ಜನ ಅಡುಗೆಯ ಸ್ತ್ರೀಯರನ್ನು ಮತ್ತು ತಾನು ಔತಣ ಕೂಟ ಸಂದರ್ಭಗಳಿಗಾಗಿ ಕಾಯ್ದಿಟ್ಟ ಇತರರನ್ನು ಹೊಂದಿದ್ದಾನೆ. ಈ ಹತ್ತು ಜನ ರಾಜನಿಗೆ ಬಿಟ್ಟು ಬೇರಾರಿಗೂ ಅಡುಗೆ ಮಾಡುವುದಿಲ್ಲ. ರಾಜ ಉಣ್ಣ ಬಯಸಿದಾಗ ಪ್ರತಿ ವ್ಯಕ್ತಿ ಹೊರಟುಹೋಗುತ್ತಾನೆ. ಮತ್ತು ತಮ್ಮ ಕರ್ತವ್ಯವಾಗಿದ್ದ ಕೆಲವು ಸ್ತ್ರೀಯರು ಬರುತ್ತಾರೆ ಮತ್ತು ಊಟಕ್ಕೆ ಸಿದ್ಧಗೊಳಿಸುತ್ತಾರೆ. ಅವರು ಅವನಿಗಾಗಿ ಬಂಗಾರದಿಂದ ಮಾಡಿದ, ದುಂಡಗಿನ, ಮೂರು ಕಾಲಿನ ಸ್ಟೂಲನ್ನು ಇಟ್ಟು ಅದರ ಮೇಲೆ ಭಕ್ಷಗಳನ್ನು ಇಡುತ್ತಾರೆ. ಇವುಗಳನ್ನು ದೊಡ್ಡ ಬಂಗಾರದ ಪಾತ್ರೆಗಳಲ್ಲಿ ತರಲಾಗುತ್ತದೆ. ಮತ್ತು ಚಿಕ್ಕ ಭಕ್ಷ್ಯಗಳನ್ನು ಬಂಗಾರದ ಬೋಗಸೆಗಳಲ್ಲಿ ತರಲಾಗುತ್ತದೆ. ಅವುಗಳಲ್ಲಿ ಕೆಲವೊಂದನ್ನು ಬೆಲೆಯುಳ್ಳ ಹರಳುಗಳಿಂದ ಅಲಂಕರಿಸಲಾಗುತ್ತದೆ. ಮೇಜಿನ ಮೇಲೆ ಅರಿವೆ ಇರುವುದಿಲ್ಲ. ರಾಜ ಊಟ ಮುಗಿಸಿದಾಗ ಒಂದು ತಟ್ಟೆ ತರಲಾಗುತ್ತದೆ ಮತ್ತು ಅವನು ತನ್ನ ಕೈಗಳನ್ನು ಬಾಯಿಯನ್ನು ತೊಳೆದುಕೊಳ್ಳುತ್ತಾನೆ. ಸ್ತ್ರೀಯರು ಮತ್ತು ಪುರುಷರು ಅವನಿಗೆ ಊಟ ಬಡಿಸುತ್ತಾರೆ.[೭೦]

### ನಿಕೊಲೊ-ದೆ-ಕೊಂಟಿ

ಈತ ವೆನಿಸ್ ನಗರದಲ್ಲಿದ್ದ ಗಣ್ಯ ಮನೆತನಕ್ಕೆ ಸೇರಿದವನು. ಚಿಕ್ಕವನಿದ್ದಾಗಲೆ ಸಿರಿಯಾ ದೇಶದ ಡಮಾಸ್ಕಸ್ ನಗರದಲ್ಲಿ ವರ್ತಕನಾಗಿ ತನ್ನ ವೃತ್ತಿಯನ್ನು ಪ್ರಾರಂಭಿಸಿ. ಅಲ್ಲಿ ಅರಬ್ಬಿ ಭಾಷೆಯನ್ನು ಕಲಿತು. ಬಹುಶಃ ಅಲ್ಲಿಯೇ ಮದುವೆಯಾಗಿ ತನ್ನ ಹೆಂಡತಿಯ ಸಮೇತ ಪೂರ್ವ ದೇಶಕ್ಕೆ ಪ್ರಯಾಣ ಹೊರಟ, ಸಂಸಾರ ಸಮೇತ ಇಂಡಿಯಾಕ್ಕೆ ಬಂದ ಪ್ರವಾಸಿ ಇವನೊಬ್ಬನೆ ಎಂದು ಕಾಣುತ್ತದೆ. ೬೦೦ ಇತರ ವರ್ತಕರ ತಂಡವನ್ನು ಕೂಡಿಕೊಂಡು ವ್ಯಾಪಾರದ ಸಾಮಾನುಗಳ ಸಮೇತ ಈತ ಪ್ರಯಾಣವನ್ನು ಆರಂಭಿಸಿದನು. ಯಾವ ವರ್ಷ

ಪ್ರಯಾಣ ಹೊರಟನೆಂದು ಖಚಿತ ದಾಖಲೆಗಳಿಲ್ಲ. ಇಟಲಿ ದೇಶದವನಾದ ಒಂದನೇ ದೇವರಾಯನ ಆಸ್ಥಾನಕ್ಕೆ ಭೇಟಿಯಿತ್ತು. ತನ್ನ ಪ್ರವಾಸಿ ಕಥನಗಳಲ್ಲಿ ಆ ಕಾಲದ ಹಲವಾರು ವಿಚಾರಗಳನ್ನು ದಾಖಲಿಸಿದ್ದಾನೆ. ಇವನು 'ವಿಜಯನಗರ ೬೦ ಮೈಲು ಸುತ್ತಳತೆಯನ್ನು ಹೊಂದಿದೆ ಮತ್ತು ಅದರ ಸುತ್ತಲು ಕಾಯಲು ೬೦,೦೦೦ ಸೈನಿಕರಿದ್ದರು. ಅದು ೫ ಲಕ್ಷ ಜನಸಂಖ್ಯೆ ಹೊಂದಿದೆ' ಎಂದು ವರ್ಣಿಸಿದ್ದಾನೆ. ಹಂಪಿಯು ಗುಡ್ಡದ ಪಕ್ಕದಲ್ಲಿದೆ. ರಾಜನಿಗೆ ೧೨.೦೦೦ ರಾಣಿಯರಿದ್ದರು. ಇಲ್ಲಿ ಹಬ್ಬಗಳನ್ನು ವೈಭವದಿಂದ ಆಚರಿಸುತ್ತಿದ್ದರು. ಸಮಾಜದಲ್ಲಿ ಜನರ ರೀತಿ ನೀತಿ ಉಡುಗೆ–ತೊಡುಗೆ, ಸಂಪ್ರದಾಯ, ಸಂಸ್ಕೃತಿಗಳ ಬಗ್ಗೆ ಈತ ಅತ್ಯಂತ ನಿಷ್ಪಕ್ಷಪಾತವಾಗಿ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ. ಈತ ವಿಜಯನಗರವನ್ನು ಬಿಜನೆಗಾಲಿಯ ಎಂದು ಹೆಸರಿಸುತ್ತಾನೆ. ಇಲ್ಲಿ ಸತಿ ಪದ್ಧತಿಯ ಆಚರಣೆಯಿದೆ. ಈ ಪ್ರದೇಶದ ಜನರು ತಮಗೆ ಇಷ್ಟ ಬಂದಷ್ಟು ಜನ ಪತ್ನಿಯರನ್ನು ಹೊಂದಲು ಅವಕಾಶವಿತ್ತು. ಪತಿ ಸತ್ತು ಹೋದರೆ ಅವರನ್ನು ಪತಿಯ ದೇಹದೊಂದಿಗೆ ಸುಟ್ಟುಬಿಡುತ್ತಾರೆ. ಈತ ಇಲ್ಲಿನ ಕೃಷಿ ಸಂಪತ್ತು ಕೈಗಾರಿಕೆಯ ಸಾಮಾಜಿಕ ಸೌಹಾರ್ದತೆ, ದೇಶಿಯ ವ್ಯಾಪಾರ, ರಾಜನ ಧಾರ್ಮಿಕ ಸಹಿಷ್ಣತಾ ನೀತಿ ರಾಜರು ಮಾಡಿದ ಯುದ್ಧಗಳು ಮತ್ತು ರಾಜ್ಯದ ವಿಸ್ತಾರ ಮುಂತಾದ ಸಂಗತಿಗಳನ್ನು ತಿಳಿಸಿರುವನು. ಆದ್ದರಿಂದ ಈತನು ನೀಡಿದ ಸತ್ಯಾಸತ್ಯತೆಯ ವಿಚಾರಗಳನ್ನು ಆಧರಿಸಿ ನಾವು ವಿಜಯನಗರ ರಾಜಮನೆತನದ ಸಾಮಾಜಿಕ ಜೀವನದ ಸ್ಪಷ್ಟ ಬದುಕನ್ನು ಅರ್ಥೈಸಿಕೊಳ್ಳಬಹುದು.

ಇಲ್ಲಿಯ ರಾಜನು ಇಂಡಿಯಾ ದೇಶದಲ್ಲಿದ್ದ ಉಳಿದೆಲ್ಲ ರಾಜರೆಲ್ಲರಿಗಿಂತ ಬಹಳ ಬಲಾಢ್ಯನಾಗಿದ್ದಾನೆ. ಇವನಿಗೆ ೧೨೦೦೦[೨೧] ಹೆಂಡತಿಯರಿದ್ದಾರೆ. ಇದರಲ್ಲಿ ನಾಲ್ಕು ಸಾವಿರ ಜನ ಅವನು ಹೋದೆಡೆಯಲ್ಲೆಲ್ಲಾ ಕಾಲ್ನಡಿಗೆಯಲ್ಲಿ ಹೋಗುತ್ತಾರೆ. ಇವರದು ಮುಖ್ಯವಾಗಿ ಅಡುಗೆ ಕೆಲಸ. ಇವರಿಗಿಂತಲೂ ಹೆಚ್ಚು ರೂಪವತಿಯರಾದ ೪೦೦೦ ಹೆಂಡತಿಯರು ಕುದುರೆಗಳ ಮೇಲೆ ಸವಾರಿ ಮಾಡುತ್ತಾ ಹೋಗುತ್ತಾರೆ. ಉಳಿದವರನ್ನು ಪಲ್ಲಕ್ಕಿಗಳ ಮೇಲೆ ಗಂಡಸರು ಹೊತ್ತುಕೊಂಡು ಹೋಗುತ್ತಾರೆ. ಇವರಲ್ಲಿ ಎರಡು ಮೂರು ಸಾವಿರ ಹೆಂಡತಿಯರು ರಾಜನು ಸತ್ತಾಗ ತಮ್ಮ ಆತ್ಮ ಸಂತೋಷದಿಂದ ಚಿತೆಯೊಳಗೆ ಬಿದ್ದು ಪ್ರಾಣ ತ್ಯಾಗ ಮಾಡುತ್ತೇವೆಂಬ ವಾಗ್ದಾನ ಮಾಡಿ ರಾಜನ ಕೈ ಹಿಡಿದಿರುತ್ತಾರೆ. ಬಿಜೆನೆಗೇಲಿಯಾದಿಂದ ಎಂಟು ದಿವಸ ಪ್ರಯಾಣ ಮಾಡಿದರೆ ಪೆಲಗೊಂಡ (ಪೆನುಗೊಂಡ) ಎಂಬ ಬಹು ಭವ್ಯವಾದ ನಗರ ಸಿಗುತ್ತದೆ. ಇದು ಮೇಲೆ ಹೇಳಿದ ರಾಜನ ಅಧೀನಕ್ಕೆ ಒಳಪಟ್ಟಿದೆ. ಇದರ ಸುತ್ತಳತೆ ೧೦

ಮೈಲಿಗಳು. ಇಲ್ಲಿಂದ ಭೂಮಾರ್ಗವಾಗಿ ೨೦ ದಿವಸಗಳು ಪ್ರಯಾಣ ಮಾಡಿದರೆ ರೇವು ಪಟ್ಟಣದ ಪೆಡಿಯಾ ಘಟಾನಿಯಃ ಎಂಬ ಸ್ಥಳ ಸಿಗುತ್ತದೆ. ಹೋಗುವಾಗ ದಾರಿಯಲ್ಲಿ ಒಡೆಘೇರಿಯಾ (ಉದಯಗಿರಿ) ಮತ್ತು ಸೆಂಡರ್ ಘೇರಿಯಾ (ಚಂದ್ರಗಿರಿ) ಎಂಬ ಪಟ್ಟಣಗಳು ಸಿಕ್ಕುತ್ತವೆ ಎಂದು ತಿಳಿಸಿದ್ದಾನೆ.

**ಅಥನೇಷಿಯಸ್ ನಿಕಿಟಿನ್**

ಈತನು ರಷ್ಯಾ ದೇಶದವನು ಕ್ರಿ.ಶ. ೧೪೭೦ರಲ್ಲಿ ವ್ಯಾಪಾರಕ್ಕಾಗಿ ಭಾರತಕ್ಕೆ ಬಂದಿದ್ದನು. ಆಗ ಇಲ್ಲಿ ಆಳ್ವಿಕೆ ನಡೆಸುತ್ತಿದ್ದ ವಿಜಯನಗರ ಮತ್ತು ಬಹಮನಿ ರಾಜ ಮನೆತನದ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ. ನಿಕಿಟಿನ್ ರಷ್ಯಾ ದೇಶದ ತೈರ್ ಎಂಬ ಊರಿನವನು. ರಷ್ಯಾ ದೇಶದಿಂದ ಇಂಡಿಯಾ ದೇಶಕ್ಕೆ ಬಂದ ಪ್ರವಾಸಿಗರಲ್ಲಿ ಬಹುಶಃ ಮೊದಲನೆಯವನು. ವಿಜಯನಗರ ಕುರಿತು ಅಷ್ಟು ಆಳವಾಗಿ ಈ ದೇಶದ ಸ್ಥಿತಿಗತಿಗಳನ್ನು ನೋಡಿಯಾಗಲಿ ಅಥವಾ ತಿಳಿದಾಗಲೀ ಬರೆಯದಿದ್ದರೂ ಇವನು ಹೇಳಿರುವ ವಿಚಾರಗಳು ಗಮನಾರ್ಹವಾಗಿವೆ. ಅವನು ನೀಡಿದ ಪ್ರಮುಖ ವಿವರಗಳು ವಿಜಯನಗರದ ಸೈನ್ಯ ೧ಲಕ್ಷ ಕಾಲ್ದಳ, ೫೦ ಸಾವಿರ ಅಶ್ವದಳವಿತ್ತೆಂದು ತಿಳಿಸಿದ್ದಾನೆ. ಈತ ವಿಜಯನಗರ ಸಾಮ್ರಾಜ್ಯಕ್ಕಿಂತ ಹೆಚ್ಚು ಮಾಹಿತಿಯನ್ನು ಬಹುಮನಿ ರಾಜ್ಯದ ಬಗ್ಗೆ ತಿಳಿಸಿದ್ದಾನೆ. ಗೋಧಿ, ಅಕ್ಕಿ, ಧಾನ್ಯ ಮತ್ತಿತ್ತರ ಆಹಾರ ವಸ್ತುಗಳನ್ನು ಸಾಮ್ರಾಜ್ಯದಲ್ಲಿ ಬೆಳೆಯುತ್ತಿರುವುದನ್ನು ಕಂಡನು ಹಾಗಾಗಿ ಇಲ್ಲಿಯ ಭೂಮಿ ಫಲವತ್ತಾಗಿದೆ. ಬೇಸಾಯಕ್ಕೆ ಯೋಗ್ಯ ಭೂಮಿಯಾಗಿದೆ. ಜೋಳ ತುಂಬಾ ಅಗ್ಗದ ದರದಲ್ಲಿ ದೊರಕುತ್ತಿತ್ತು. ದ್ವಿದಳ ಧಾನ್ಯಗಳು ಹೇರಳವಾಗಿದ್ದವು ಎಂದನು. ಬಹುಮನಿಗಳ ಸೇನೆ ವಿಜಯನಗರದ ಮೇಲೆ ದಾಳಿ ಮಾಡಿ ರಾಜಧಾನಿಯಾವರೆಗೂ ಬಂದವು ಆದರೆ ಯಶಸ್ವಿಯಾಗಿ ಅವುಗಳನ್ನು ಹಿಮ್ಮೆಟ್ಟಿಸಲಾಯಿತು. ವಿಜಯನಗರದ ಮೂರು ಕಡೆ ಬೆಟ್ಟಗಳಿಂದ ಆವೃತವಾಗಿದೆ ಒಂದು ಕಡೆ ನದಿ ಹರಿಯುತ್ತಿದೆ ಎಂದಿದ್ದಾರೆ.

**ಸೀಜರ್ ಫ್ರೆಡೆರಿಕ್**

ವೆನೆಸಿನ ಪ್ರವಾಸಿಗನಾದ ಈತ ೧೫೬೭–೧೫೮೧ರ ವೇಳೆಯಲ್ಲಿ ವಿಜಯನಗರಕ್ಕೆ ಬಂದಿದ್ದನು. ಸೀಸರ್ ಪ್ರೆಡೆರಿಕ್ ಇಟಾಲಿಯ ವೆನಿಸ್ ಪಟ್ಟಣದ ನಿವಾಸಿ. ಕ್ರಿ.ಶ. ೧೫೬೭ರಲ್ಲಿ ಬಿಜೇನಗರಕ್ಕೆ (ವಿಜಯನಗರ) ಬಂದ ಅದಕ್ಕೆ ಪ್ರವಾಸಿಗ ಫ್ರೆಡರಿಕ್ ಹೀಗೆ ಹೇಳುತ್ತಾನೆ. "ನಾನು ಕ್ರಿ.ಶ. ೧೫೬೭ರಲ್ಲಿ ಗೋವಾದಿಂದ ಬಿಜೇನಗರ್ ಎಂಬ ನಗರಕ್ಕೆ ಹೋದೆ. ಇದು ನರಸಿಂಗ ರಾಜ್ಯದ ರಾಜಧಾನಿ ಗೋವಾದಿಂದ ಎಂಟು ದಿನಗಳ ಪ್ರಯಾಣ. ೩೦೦ ಅರೇಬಿಯಾ

ಕುದುರೆಗಳನ್ನು ಹೊಡೆದುಕೊಂಡು ಹೊರಟ್ಟಿದ್ದ ಇನ್ನಿಬ್ಬರ ವರ್ತಕರ ಜೊತೆ ಪ್ರಯಾಣ ಹೊರಟೆ ಬಿಜೇನಗರದ ಕುದುರೆಗಳು ಸಣ್ಣ. ಈ ಕಾರಣ ಅರೇಬಿಯಾ ಕುದುರೆಗಳಿಗೆ ಒಳ್ಳೆ ಗಿರಾಕಿಗಳಿವೆ. ಹಾಗಾಗಿ ಅರೇಬಿಯಾದ ಕುದುರೆಗಳಿಗೆ ಹೆಚ್ಚು ಬೆಲೆ ಬರುವಂತೆ ಮಾಡಬೇಕು. ಏಕೆಂದರೆ ಇದನ್ನು ಪರ್ಶಿಯಾದಿಂದ ಓರ್ಮಾಸಿಗೆ ಸಾಗಿಸಿ, ಅಲ್ಲಿಂದ ಗೋವಕ್ಕೆ ತಂದು ಗೋವದಲ್ಲಿ ಪ್ರತಿ ಕುದುರೆಗೆ ೨೪೦ ಪಗೋಡಾ ಸುಂಕ ಕೊಟ್ಟು ವಿಜೇನಗರಕ್ಕೆ ತರಬೇಕು. ಇಲ್ಲಿ ಒಂದೊಂದು ಕುದುರೆ ೩೦೦,೪೦೦,೫೦೦ ಹಾಗೂ ಕೆಲವು ವೇಳೆ ೧೦೦೦ ಪಗೋಡಾ ಬೆಲೆಗೆ ಸಿಗುತ್ತವೆ ಎಂದು ತಿಳಿಸಿದ್ದಾನೆ. ಅವನು ತಾಳಿಕೋಟೆ ಯುದ್ಧ ಕುರಿತು ಹಾಗೂ ನಗರದಲ್ಲಿದ್ದ ಹುಲಿ ಮತ್ತು ಇತರೆ ಕಾಡು ವಿವಿಧ ವಸ್ತುಗಳು, ಅರೇಬಿಯಾದ ಕುದುರೆಗಳು ವೆಲ್ವೆಟ್, ದಮಾಸ್ ಮತ್ತು ಸ್ಯಾಟಿನ ಬಟ್ಟೆಗಳು ಚೀನಾದಿಂದ ಬಟ್ಟೆಗಳು, ಕೇಸರಿ ಮತ್ತು ಕೆಂಪುರತ್ನಗಳು ಬಿಜೇನಗರಕ್ಕೆ ಆಮದಾಗುತ್ತಿದ್ದವು. ಬಿಜೇನಗರದಿಂದ ಆಭರಣಗಳು ಪಗೋಡಾಗಳನ್ನು ರಫ್ತು ಮಾಡಲಾಗುತ್ತಿತ್ತೆಂದು ತಿಳಿಸಿದ್ದಾನೆ.

**ಲೊಡೊವಿಕೊ ದಿ ವರ್ತೆಮಾ**

ಲೊಡೊವಿಕೊ ದಿ ವರ್ತೆಮಾನ ಸ್ವಂತ ಜೀವನದ ಬಗ್ಗೆ ಈ ತನ್ನ ಪ್ರವಾಸ ಕಥನದಲ್ಲಿ ಅಲ್ಲಿ ಇಲ್ಲಿ ಬರುವ ಕೆಲವು ಮಾತುಗಳನ್ನು ಬಿಟ್ಟರೆ ಬೇರಾವ ಸಾಮಗ್ರಿಗಳು ದೊರೆಯುವುದಿಲ್ಲ. ಈತನೇ ಅದರಲ್ಲಿ ಒಂದೆಡೆ ಹೇಳಿರುವಂತೆ ವರ್ತೆಮಾ ಇಟಲಿ ದೇಶದ ಬೊಲೊಗ್ನದವನು. ತನ್ನ ಪ್ರವಾಸ ಕಥನವನ್ನು ಫೆಡೆರಿಕೋದಿ ಮೊಂಡಿಫಿಲ್ಟ್ರೋ ಎಂಬುದಾಗಿ ರಚಿಸಿದ್ದಾನೆ. ಈತನೆ ಹೇಳಿದ ಹಾಗೆ ಬಿಸೆನಗರ್ ಎಂಬ ನಗರ ಬಹಳ ದೊಡ್ಡದು, ಸುತ್ತಲೂ ಭದ್ರವಾದ ಕೋಟೆ ಇದೆ. ಏಳು ಮೈಲಿ ಸುತ್ತಳತೆಯ ಮೂರು ಕೋಟೆ ಗೋಡೆಗಳಿವೆ. ಇಲ್ಲಿ ಭಾರೀ ವ್ಯಾಪಾರ ನಡೆಯುತ್ತದೆ. ಬಹು ಫಲವತ್ತಾದ ಭೂಮಿ, ರುಚಿ ರುಚಿಯಾದುದೆಲ್ಲ ಇಲ್ಲಿ ಸಿಕ್ಕುತ್ತದೆ. ನಾನಿಲ್ಲಿಯವರೆಗೂ ಕಂಡ ಸ್ಥಳಗಳಲ್ಲೆಲ್ಲಾ ಬಹು ಒಳ್ಳೆಯ ಹವೆಯ ಊರೆಂದರೆ ಇದೆ. ಅಲ್ಲದೇ ಎರಡನೇ ಸ್ವರ್ಗವೊ ಎನ್ನುವಂತಿದೆ. ಈ ನಗರ ರಾಜ ಪೇಗನ್ ಪ್ರಜೆಗಳೆಲ್ಲ ವಿಗ್ರಹಾರಾಧಕರು ಬಹು ಶಕ್ತಿವಂತನಾದ ಈ ರಾಜನ ಬಳಿ ೪೦.೦೦೦ ಕುದುರೆಗಳಿವೆ. ಒಂದು ಕುದುರೆಗೆ ೩೦೦ರಿಂದ ೫೦೦ ಪರ್‍ಯಾಯಿಗಳ ಬೆಲೆಯಾಗುತ್ತದೆ. ಎಂಬುದನ್ನು ಮರೆಯಬಾರದು ಕೆಲವು ೮೦೦ ಪರ್ಡಾರ್‌ಗಳಷ್ಟು ಬೆಲೆ ಆಗುವುದುಂಟು. ಅಲ್ಲದೆ ಇಲ್ಲಿ ೪೦೦ ಆನೆಗಳೂ ಒಂಟೆಗಳು ಇವೆ. ಕನೋನೋರ್‌ನಲ್ಲಿ ಆನೆಗಳು ಸಮುದ್ರದಿಂದ ಹಡಗೊಂದನ್ನು

ಭೂಮಿಗೆ ಎಳೆದು ತಂದುದನ್ನು ನಾನು ಕಣ್ಣಾರೆ ಕಂಡಿದ್ದೇನೆ ಬಹಳ ಸೂಕ್ಷ್ಮ ಬುದ್ಧಿಯ ಆನೆಗಳು ಯುದ್ಧದಲ್ಲಿ ಬಹಳ ಉಪಯೋಗವಾಗುತ್ತವೆ ಎಂದಿದ್ದಾನೆ.

**ಲೆಫ್ಟಿನೆಂಟ್ ಎಮಿಟ್**

ಆಂಗ್ಲ ಅಧಿಕಾರಿ ಲೆಫ್ಟಿನೆಂಟ್ ಎಮಿಟ್ ವಿಜಯನಗರಕ್ಕೆ ಭೇಟಿ ನೀಡಿ ಇಲ್ಲಿನ ಅವಶೇಷಗಳನ್ನು ತನ್ನ ದಿನಚರಿಯಲ್ಲಿ ದಾಖಲಿಸಿದ್ದಾನೆ. ಈ ನಗರವು ತುಂಗಭದ್ರಾ ನದಿಯ ದಕ್ಷಿಣ ದಂಡೆಯ ಮೇಲಿದ್ದು, ಆನೆಗೊಂದಿ ಎದುರು ದಿಕ್ಕಿನಲ್ಲಿದೆ, ತುಂಗಭದ್ರಾ ನದಿಯ ಉತ್ತರ ದಡದಿಂದ ಎರಡು ಮೈಲಿ ದೂರದಲ್ಲಿದ್ದು. ಇದೆ ಹೆಸರಿನ ಜಿಲ್ಲೆಯೊಂದು ಇಂದು ಅಸ್ತಿತ್ವದಲ್ಲಿದೆ. ಇದು ಪ್ರಾಚೀನ ನಗರ 'ಬಿಜ್ಜನುಗ್ಗೂರು' ಕಾಲದಲ್ಲಿ ಒಂದು ಜಹಾಗೀರ್ ಆಗಿತ್ತು. ಎರಡು ಶತಮಾನಗಳ ಹಿಂದೆ ಈ ಸಾಮ್ರಾಜ್ಯದ ಅಧೀನಕ್ಕೊಳಪಟ್ಟ ವಿಶಾಲ ಭಾಗವನ್ನು ಕೆನರಾ ಎಂದು ಕರೆಯಲಾಗುತ್ತಿತ್ತು. ಕಮಲಾಪುರದ ಆಗ್ನೇಯ ಭಾಗದ ಕೊಳವೆಯ ಅರ್ಧ ಮೈಲಿ ದೂರದವರೆಗೆ ಬೆಟ್ಟ ಮತ್ತು ದೇವಾಲಯಗಳಿಂದ ಸುತ್ತುವರಿದಿದೆ. ಅತ್ಯಂತ ಸುಂದರವಾಗಿರುವ ಈ ಪ್ರದೇಶವು ಪೂರ್ವಭಾಗದಲ್ಲಿ ಬಲವಾದ ಕಲ್ಲಿನ ಕೊಳವೆಯಿಂದ ಬಳಕೆಯಿಂದ ಮತ್ತು ಪಶ್ಚಿಮ ಭಾಗದಲ್ಲಿ ನದಿಯು ಎಲ್ಲೆಯಾಗಿ ಸುತ್ತುವರೆದಿದೆ. ೮ ಮೈಲಿಯಷ್ಟು ಸುತ್ತಳತೆಯಿರುವ ಪ್ರದೇಶವನ್ನು ಕುರಿತು ನಾನು ಬಹಳವಾಗಿ ಕೇಳಿದ್ದೇನೆ. ಇದರ ಮಧ್ಯಭಾಗವು ಎತ್ತರವಾದ ಹಲವು ಬೆಟ್ಟಗಳಿಂದ ಹಾಗೂ ದೇವಾಲಯಗಳಿಂದ ಸುತ್ತುವರೆದಿದೆ. ಇಲ್ಲಿ ೩೦-೪೫ ಯಾರ್ಡ್‌ನಷ್ಟು ವಿಶಾಲವಾಗಿರುವ ಹಲವು ರಸ್ತೆಗಳನ್ನು ನಾನು ಕಂಡಿದ್ದೇನೆ. ಇಂದು ಇಲ್ಲಿ ಕೆಲವರು ಉತ್ತಮವಾದ ಭತ್ತವನ್ನು ಬೆಳೆಯುತ್ತಾರೆ.

ಹೀಗೆ ಒಂದು ರಸ್ತೆಯ ಅವಶೇಷಗಳನ್ನು ಸಹ ಈತನು ತನ್ನ ದಿನಚರಿಯಲ್ಲಿ ದಾಖಲಿಸಿದ್ದಾನೆ. "ನೈರುತ್ಯ ಮೂಲೆಯಲ್ಲಿರುವ ರಸ್ತೆಯು ಈಶಾನ್ಯ ಭಾಗದೆಡೆಗೆ ಸುಮಾರು ಅರ್ಧ ಮೈಲಿ ದೂರದವರೆಗೂ ಸಾಗಿದೆ. ಇದು ೩೫ ಯಾರ್ಡ್‌ನಷ್ಟು ಅಗಲವಾಗಿದೆ. ಇದರ ಎರಡು ಬದಿಯಲ್ಲಿ ಕಂಬಗಳ ಸಾಲಿವೆ. ಅಲ್ಲದೆ ನೈಋತ್ಯ ಮೂಲೆಯ ಕೊನೆಯ ಭಾಗದಲ್ಲಿ ವಿಶಾಲವಾದ ಮತ್ತು ಬೃಹತ್ ದೇವಾಲಯ ಇತ್ತು" ಎಂದು ದಾಖಲಿಸಿದ್ದಾನೆ(ಇದು ಈಗಿನ ವಿರೂಪಾಕ್ಷ ದೇವಾಲಯ) "ಈ ರಸ್ತೆಯ ಪಶ್ಚಿಮ ಭಾಗದಲ್ಲಿ ಮಾವಿನಹಣ್ಣಿನ ತೋಟವಿದೆ. ಇಲ್ಲಿ ಹಲವು ತೋಟಗಳು ಇವೆ. ಅಲ್ಲದೆ ಇಲ್ಲಿ ಕಾಲುವೆಯ ಭಗ್ನಾವಶೇಷಗಳು ಹರಡಿವೆ. ಈ ಪ್ರದೇಶದ ಹೆಸರೇನೆಂದು ನಾನು ಸ್ಥಳೀಯರನ್ನು ವಿಚಾರಿಸಿದಾಗ ಇದು ಹಾಳು ಪಟ್ಟಣ

ಎಂಬುದಾಗಿ ತಿಳಿಸಿದರು"[೨೨] ನನ್ನ ಸ್ನೇಹಿತ ಕ್ಯಾಪ್ಟನ್ ಕ್ರಿಕ್ ಪ್ಯಾಟ್ರಿಕನು ಪರ್ಷಿಯನ್ ಭಾಷೆಯಲ್ಲಿ ರಚಿಸಿರುವಂತೆ "ಹಾಳು ಪಟ್ಟಣ ಮತ್ತು ಬಿಜುನಗರ ಎರಡೂ ಒಂದೇ ಆದರೆ ಇದನ್ನು ಅಲ್ಲಿಯ ಜನರು ಮೂಲ ಹೆಸರಿನಿಂದ ಕರೆಯುತ್ತಿಲ್ಲ. ಎಮಿಟ್ಟು ನೋಡಿದ ಕ್ರಮಾವು ಸರಿಯಾಗಿದ್ದು, ತದ ನಂತರ ವಿಜಯನಗರದ ಅವಶೇಷಗಳು ಹೆಚ್ಚು ಹಾಳಾಗಿವೆ". ಎಂದು ಕ್ಯಾಪ್ಟನ್ ಬಿಟ್‌ಸನ್ ವಿವರಿಸಿದ್ದಾನೆ.[೨೩] ಜಿಲ್ಲೆಯ ಕೇಂದ್ರದಲ್ಲಿರುವ ಆನೆಗುಂದಿಯನ್ನು ದಖ್ಖನೊಡನೆ ನೋಡಿರುವುದು ಲೇಖಕನ ಹಿಡಿತಕ್ಕೆ ಸಾಕ್ಷಿಯಾಗಿದೆ.

"ಕ್ರಿ.ಶ. ೧೫೬೭ರಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ ಸೀಸರ್ ಫೆಡ್ರಿಕ್‌ನ್ನು ೨೪ ಮೈಲುಗಳ ವಿಸ್ತಾರವಾದ ಈ ನಗರದಲ್ಲಿ ಹಲವು ದೇವಾಲಯಗಳು ಬೆಟ್ಟಗಳಿವೆ" ಎಂದು ದಾಖಲಿಸಿದ್ದಾನೆ. ಎಂಬುದನ್ನು ಸಹ ಪ್ರಾಚೀನವಾದ ಈ ನಗರವು ಸೀಮಾಗರಿಯಿಂದ ಸುತ್ತುವರಿದಿದೆ ಕಲ್ಲುಹಾಸಿನ ರಸ್ತೆಗಳು ಕಮಲಾಪುರದವರಿಗೆ ಮುಂದುವರೆದಿವೆ. ಅದು ನಗರದ ಎಲ್ಲೆಯವರೆಗೂ ಕೂಡಾ ಮುಂದುವರೆದಿದೆ. ಹೀಗೆ ಹಾದುಹೋಗುವಾಗ ಹಲವಾರು ದ್ವಾರಗಳಿದ್ದು, ಇವುಗಳಲ್ಲಿ ಒಂದು ದ್ವಾರ ಇಡೀ ನಗರಕ್ಕೆ ಪ್ರಮುಖವಾಗಿತ್ತು ಎಂದು ದಾಖಲಿಸಿದ್ದಾನೆ. ಟಿಪ್ಪುವಿನಿಂದ ಹಿಂದಿರುಗಿಸಲ್ಪಟ್ಟ ಆನೆಗೊಂದಿ ಸರ್ಕಾರವನ್ನು ನಾನು ಮನಸ್ಸಿನಲ್ಲಿ ಊಹಿಸಿದ್ದೇನೆ. ಟಿಪ್ಪುವಿನ ಅಧೀನದಲ್ಲಿದ್ದ ಈ ಪ್ರದೇಶ ದೋ ಅಬ್ ಪ್ರದೇಶದಲ್ಲಿದ್ದು. ನಿಜಾಮರು ಮರಾಠರಿಂದ ಪಡೆದುಕೊಂಡಿದ್ದು ಅದಕ್ಕೂ ಪೂರ್ವದಲ್ಲಿ ಆನೆಗೊಂದಿಯ ಬಿಜನಗರದ ರಾಜರ ಮೂಲ ಸಂತತಿಯ ನೆಲೆಯಾಗಿತ್ತು. ಅಷ್ಟೇ ಅಲ್ಲದೆ ಮುಂದೆ ಸಾಮ್ರಾಜ್ಯಕ್ಕೂ ಈ ಪ್ರದೇಶ ಸೇರಿಸಲ್ಪಟ್ಟಿತು. ಇಲ್ಲಿ ಪ್ರಾಚೀನ ರಾಜಧಾನಿಯ ಹಲವು ಅವಶೇಷಗಳಿವೆ. ಟಿಪ್ಪು ತನ್ನ ಪ್ರತಿಷ್ಠೆಗಾಗಿ ಈ ಪ್ರದೇಶವನ್ನು ಆ ಕಾಲದಲ್ಲಿ ಹಿಡಿದುಕೊಂಡನು. ಈ ಕುರಿತು ನಾನು ಹೆಚ್ಚಿನ ವಿವರಣೆ ನೀಡಿದ್ದೇನೆ. ನಾನು ಇಲ್ಲಿನ ರಹದಾರಿ ಮೊದಲಾದ ವಿವರಗಳನ್ನು 'ವೀವ್ ಆಫ್ ದಿ ಡೆಕ್ಕನ್' ಎಂಬ ಗ್ರಂಥದಲ್ಲಿ ಯಥವತ್ತಾಗಿ ದಾಖಲಿಸಿ ಅದನ್ನು ಕ್ರಿ.ಶ. ೧೭೯೧ರಲ್ಲಿ ಪ್ರಕಟಿಸಿದ್ದೇನೆ. ಇದರಲ್ಲಿ ಹಲವು ಘಟನೆಗಳನ್ನು ಮತ್ತು ಯುದ್ಧದ ನಂತರ ವಿವರಗಳನ್ನು ನೀಡಲಾಗಿದೆ.[೨೪]

ಹೀಗೆ ಮೇಲಿನ ಅನೇಕ ರಾಯಬಾರಿಗಳು ಅಥವಾ ವಿದೇಶಿ ಪ್ರವಾಸಿ ಬರಹಗಾರರು ಹಂಪಿಯನ್ನು ಹಲವು ಆಯಾಮಗಳಲ್ಲಿ ತಮ್ಮದೇ ಆದ ತಾತ್ವಿಕ ಚೌಕಟ್ಟಿನಲ್ಲಿ ಬರಹಗಳ ಮೂಲಕ ನಿರೂಪಿಸಿದ್ದಾರೆ. ವಿಜಯ ನಗರದ ಗತ ವೈಭವ, ಸಾಮ್ರಾಜ್ಯ, ಅಲ್ಲಿನ ಸಾಮಾಜಿಕ ಧಾರ್ಮಿಕ ರಾಜಕೀಯ ಆರ್ಥಿಕ ಆಯಾಮಗಳು ಅವರ ಆಲೋಚನೆಯ ಪ್ರತೀಕವಾಗಿವೆ.

ಇವರಲ್ಲಿ ಅವರದೆ ಆದ ಒಂದೊಂದು ತಾತ್ವಿಕತೆಯಿದೆ. ಮುಖ್ಯವಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಬಂದು ಹೋಗುವುದು ಅವರಲ್ಲಿನ ಉದ್ದೇಶ. ಆದರೆ ಮಹತ್ವದ ಧೋರಣೆಗಳು ಬೇರೆಬೇರೆಯಾಗಿವೆ ಇವರ ಪ್ರಯಾಣದ ಹಲವು ಕಥನಗಳನ್ನು ಓದಿದಾಗ ಹಲವು ಸಂಶೋಧನೆಗೆ ಎಡೆಮಾಡಿಕೊಟ್ಟಿವೆ. ಹಾಗೆಯೇ ಅವರಲ್ಲಿದ್ದ ಮತ್ತೊಂದು ಮುಖ್ಯವಾದ ಸಂಗತಿಯೆಂದರೆ ಆಸ್ಥಾನಕ್ಕೆ ಬಂದ ರಾಜರನ್ನು ಭೇಟಿ ಮಾಡಿ ಅವರ ಉದ್ದೇಶಗಳನ್ನು ತಿಳಿಸುವುದು ಹಾಗೂ ಅವರನ್ನು ಮನವೊಲಿಸಿಕೊಳ್ಳುವುದು ಆಗಿದೆ. ವಿಜಯನಗರದ ಪೂರ್ವೋತ್ತರ ಇತಿಹಾಸವನ್ನು ಕಟ್ಟಿಕೊಟ್ಟ ಪ್ರವಾಸಿಗರ ಈ ಬರಹಗಳು ಅಪೂರ್ವ ಕಥಾನಗಳಾಗಿರಬಹುದು. ವಿಶೇಷ ಬರಹಗಳ ಮೂಲಕ ವಿಜಯನಗರ ಅಥವಾ ಹಂಪಿಯ ಚರಿತ್ರೆಯನ್ನು ಸ್ಪಷ್ಟವಾಗಿ ತಿಳಿಯುವುದಕ್ಕೆ ಸಹಾಯಕವಾಗಿದೆ.

ಬಳ್ಳಾರಿ ಜಿಲ್ಲೆ ಇತಿಹಾಸ ದೃಷ್ಟಿಯಿಂದ ವಿಜಯನಗರ ಸಾಮ್ರಾಜ್ಯ ಮತ್ತು ಬ್ರಿಟಿಷರ (ಕಲೆಕ್ಟರುಗಳ) ಆಳ್ವಿಕೆಯ ಕಾಲವು ಬಹು ಮುಖ್ಯವಾಗಿದೆ. ಹಂಪಿ ಭಾಗವನ್ನು ವಿಜಯನಗರದ ಅವನತಿಯ ನಂತರ ಬಿಜಾಪುರದ ಸುಲ್ತಾನರು, ಮರಾಠರು, ಮೊಘಲರು, ಪಾಳೆಯಗಾರರು, ಹೈದರ್ ಮತ್ತು ಟಿಪ್ಪು ಆಳ್ವಿಕೆ ಮಾಡಿದರು. ೧೭೯೨ರಲ್ಲಿ ಟಿಪ್ಪುವಿನ ನಂತರ ಇದರ ಅರ್ಧ ಭಾಗ ಮರಾಠರ ಅಧೀನಕ್ಕೆ ಒಳಗಾಯಿತು. ೧೭೯೯ರಲ್ಲಿ ಉಳಿದರ್ಧಭಾಗ ಹೈದರಾಬಾದಿನ ನಿಜಾಮನ ಅಧೀನಕ್ಕೆ ಒಳಪಟ್ಟಿತು. ಕ್ರಿ.ಶ. ೧೮೦೦ರಲ್ಲಿ ಬ್ರಿಟಿಷ್ ಸರ್ಕಾರಕ್ಕೆ ಬಳ್ಳಾರಿ ಭಾಗವನ್ನು ದತ್ತಿ ಜಿಲ್ಲೆಯಾಗಿ ನಿಜಾಮ ಬಿಟ್ಟುಕೊಟ್ಟನು. ಅಂದು ಮದ್ರಾಸ್ ಪ್ರೆಸಿಡೆನ್ಸಿಯಲಿದ್ದ ೨೨ ಜಿಲ್ಲೆಗಳಲ್ಲಿ ನಾಲ್ಕನೆಯದು ಬಳ್ಳಾರಿ ಜಿಲ್ಲೆಯಾಗಿತ್ತು. ಅಲ್ಲಿ ಕಲೆಕ್ಟರುಗಳ ಆಳ್ವಿಕೆ ೧೮೦೦-೧೯೪೭ ರವರೆಗೆ ಮುಂದುವರೆಯಿತು. ೧೧೨ ಜನ ಕಲೆಕ್ಟರುಗಳು ಇಲ್ಲಿ ಆಯ್ಕೆ ಮಾಡಿದ್ದಾರೆ.[೭೫] ಇದು ಹಂಪಿಯ ಇತಿಹಾಸ ಸಂಶೋಧನೆ ಮತ್ತು ಸ್ಮಾರಕಗಳ ರಕ್ಷಣೆ, ದೇವಾಲಯಗಳ ಪೂಜೆ ಮತ್ತು ಪುನಸ್ಕಾರದ ಪುನರುಜ್ಜೀವನದ ಹಿನ್ನೆಲೆಯಲ್ಲಿ ಅವರೆಲ್ಲರ ಆಳ್ವಿಕೆಯು ವರದಾನವಾಯಿತು. ವಿಲಿಯಂ ಜೋನ್ಸ್‌ನ ರಾಯಲ್ ಏಷ್ಯಾಟಿಕ್ ಸೊಸೈಟಿಯಿಂದ ಮತ್ತು ಆಂಗ್ಲ ಅಧಿಕಾರಿಗಳಾದ ಬುಕಾನನ್, ಕನ್ನಿಂಗ್ ಹ್ಯಾಂ, ರಾರ್ಬರ್ಟ್ ಬ್ರೂಸ್‌ಪೂಟ್, ಜಾನ್ ಫ್ರಿನ್ಸೆಸ್, ರೈಸ್, ಫ್ಲೀಟರ್ ಸಂಶೋಧನೆಗಳಿಂದ ಪ್ರಭಾವಿತರಾದ ಕಲೆಕ್ಟರುಗಳು ಈ ಮೇಲೆ ಹೇಳಿದ ಅಂಶಗಳಿಗೆ ಒತ್ತು ಕೊಟ್ಟು ಇಲ್ಲಿ ಆಳ್ವಿಕೆ ಮಾಡಿದರು. ಅವರಲ್ಲಿ ಪ್ರಥಮ ಕಲೆಕ್ಟರ್ ಆಗಿದ್ದ ಥಾಮಸ್ ಮುನ್ರೋ ಹಂಪಿಯ ಇತಿಹಾಸವನ್ನು ಬೆಳಕಿಗೆ ತರುವ ಪ್ರಯತ್ನವನ್ನು ಮೊದಲ ಬಾರಿಗೆ ಮಾಡಿದರು. ಅನಂತರ ಮೆಡೋಸ್ ಟೇಲರ್,

ಫರ್ಗ್ಯುಸನ್ ಹಂಪಿಯ ಕುರಿತ ಮಹತ್ವದ ಕೃತಿ ಬರೆದರು. ಅದೇ ರೀತಿ ಇಲ್ಲಿ ಆಳ್ವಿಕೆ ಮಾಡಿದ ಸಿ.ಎ ಗಾರ್ಟನ್, ರಾಬರ್ಟ್ ಸನ್, ಹಂಡ್ಲೇ ಗೋರ್ಡಾನ್, ಮಿ.ಜೆ.ಎಚ್. ಮಾಸ್ಟರ್ ಮೊದಲಾದವರು ಇಲ್ಲಿನ ಸ್ಮಾರಕಗಳ ರಕ್ಷಣೆಗೆ ಕ್ರಮ ಕೈಗೊಂಡರು. ಅದೇ ರೀತಿ ಇಲ್ಲಿನ ಅಧಿಕಾರಿಗಳಲ್ಲಿ ಒಬ್ಬನಾದ ರಾಬಟ್ ಸನ್ ಹಂಪಿಯ ವಿರೂಪಾಕ್ಷ ದೇವಾಲಯದಲ್ಲಿ ರಥೋತ್ಸವ ಆಚರಿಸಲು ಅನುಮತಿ ನೀಡಿದ.[೬] ಈ ರೀತಿ ಬ್ರಿಟಿಷ್ ಆಳ್ವಿಕೆಯಿಂದ ಹಂಪಿಯ ಚಾರಿತ್ರಿಕ ಸಂಗತಿಗಳನ್ನು ಶೋಧಿಸಲು ಸಾಧ್ಯವಾಯಿತು.

ಬಳ್ಳಾರಿ ಜಿಲ್ಲೆಯ ಜಿಲ್ಲಾಧಿಕಾರಿಯಾಗಿದ್ದ ರಾಬರ್ಟ್ ಸಿವೆಲ್ ಅವರು ಗೋವಾದ ಪತ್ರಾಗಾರಗಳಲ್ಲಿ ಮತ್ತು ಪೋರ್ಚುಗಲ್ ನ್ಯಾಷನಲ್ ಲೈಬ್ರರಿಯಿಂದ ಹೆಚ್ಚಿನ ಮಾಹಿತಿ ಸಂಗ್ರಹಿಸಿ ವಿದೇಶಿಗರ ವಿಚಾರಗಳನ್ನಾಧರಿಸಿ ಪ್ರಥಮ ಬಾರಿಗೆ ವಿಜಯನಗರದ ಇತಿಹಾಸವನ್ನು ಕುರಿತು 'ದಿ ಫರ್ಗಾಟನ್ ಎಂಪೈರ್' ಎಂಬ ಕೃತಿಯನ್ನು ರಚಿಸಿದನು ಅಲ್ಲಿಂದ ಆರಂಭವಾದ ವಿದೇಶಿಯರ ಈ ಪ್ರಯತ್ನ ಜಾರ್ಜ್ ಮಿಶಲ್‌ರು ಪ್ರಕಟಿಸಿದ 'ದ ಸ್ಟೋನ್ ಸ್ಟೋರಿ' ಕೃತಿಯವರೆಗೆ ಹಬ್ಬಿದೆ. ಅದು ನಿರಂತರವಾಗಿ ಇಂದಿಗೂ ಮುಂದುವರೆಯುತ್ತಲೇ ಇದೆ. ಅವರಲ್ಲಿ ಇಲ್ಲಿನ ಶಾಸನಗಳನ್ನು ಆಧಾರವಾಗಿಟ್ಟು ಕೆಲಸಮಾಡಿದ ಬ್ರೇಕನ್ ರಿಡ್ಜ್ (೧೯೮೫), ಕುಲ್ಕೆ (೧೯೮೫), ಲುಡ್ಡೇನ್ (೧೯೮೫) ಅವರು ನಿಜಕ್ಕೂ ಮಹತ್ವದ ಕಾರ್ಯಗಳನ್ನು ಮಾಡಿದ್ದಾರೆಂದರೆ ತಪ್ಪಾಗಲಾರದು. ಅನಂತರ ಇಲ್ಲಿನ ಸ್ಮಾರಕಾವಶೇಷಗಳನ್ನು ಆಧಾರವಾಗಿಟ್ಟುಕೊಂಡು ಕೆಲಸ ನಿರ್ವಹಿಸಿದ ಹಲವಾರು ವಿದ್ವಾಂಸರಿದ್ದಾರೆ. ಅವರಲ್ಲಿ ಪ್ರಮುಖರಾದವರೆಂದರೆ ರಾಬರ್ಟ್ ಸಿವಿಲ್ (೧೯೦೦), ಫ್ರಾನ್ಸಿಸ್ (೧೯೦೪), ಲಾಂಗ್‌ಸ್ಟ್ (೧೯೧೭), ರಿಚರ್ಡ್(೧೯೩೩), ಮೆನನ್, ಕೆಲ್ಸಾಲ್ (೧೯೭೨), ಸ್ಟೇನ್ (೧೯೭೩), ಚಂಡರ್ (೧೯೮೭), ಜಾನ್ ಎಂ. ಫ್ರಿಟ್ಜ್, ಜಾರ್ಜ್ ಮಿಶೆಲ್, ಕಾರ್ಲಾ ಎಂ. ಸಿನಾಪೋಲಿ, ಅನಿಲ್ ವರ್ಗೀಸ್, ಡೊಮಿನಿಕ್ ಜೆ ದಾವಿನ್, ಜಿಕಿನ್ಸ್ ಮೊದಲಾದವರು ಪ್ರಮುಖರಾಗಿದ್ದಾರೆ.

**ವಿಶ್ವಪಾರಂಪರಿಕ ಹಂಪಿ ಸಂರಕ್ಷಣೆ**

ಹಂಪಿಯ ರಕ್ಷಣೆ ಕುರಿತು ಯುನೆಸ್ಕೋದ ಎಚ್ಚರಿಕೆಯ ಭಾಗವಾಗಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಹಂಪಿ ಅಭಿವೃದ್ಧಿಗೆ ಸಂಬಂಧಿಸಿದ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸಿದ್ದವಾಗಿವೆ' ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳು ಎರಡು ಸೇರಿ ಸುಮಾರು ೧೨೦೦ಕ್ಕಿಂತಲೂ ಹೆಚ್ಚಿನ ಸ್ಮಾರಕಗಳು ರಕ್ಷಣೆಯ ಹೊಣೆ ಹೊತ್ತಿವೆ. ಹಂಪಿಯ ಸ್ಮಾರಕ ಸುತ್ತಮುತ್ತಲಿನ ಪರಿಸರವನ್ನು ಸಹಜ ರೀತಿಯಲ್ಲಿ ಮುಂದಿನ ಪೀಳಿಗೆಗೆ

ಕಟ್ಟಿಕೊಡಲು ಪ್ರಾಧಿಕಾರ ಕಾರ್ಯಾರಂಭಿಸಿದೆ. ಈ ಕಾರ್ಯದಲ್ಲಿ ಮೂರು ವಲಯಗಳನ್ನಾಗಿ ಮಾಡಿಕೊಂಡು ತನ್ನ ಕಾರ್ಯಾರಂಭ ಮಾಡಲಾಗಿತ್ತಾದರೂ ಅದರಲ್ಲಿ ಒಂದನ್ನು ಕೈಬಿಡಲಾಗಿದೆ. ಕೋರ್, ಬಫರ್, ಮತ್ತು ಫೆಡರಲ್‌ಝೋನ್[೨೨] ಎಂಬ ವಲಯಗಳಲ್ಲಿ ಬಫರ್ ಝೋನ್ ಕೈಬಿಡಲಾಗಿದೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ೧೪ ಹಳ್ಳಿಗಳು ಹಾಗೂ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ೧೫ ಹಳ್ಳಿಗಳು ವ್ಯಾಪ್ತಿಗೊಂಡಿವೆ. ಅತಿ ಹೆಚ್ಚು ಸ್ಮಾರಕಗಳನ್ನು ಹೊಂದಿರುವುದಕ್ಕೆ ಕೊರ್‌ಝೋನ್ ಎಂದು ಗುರುತಿಸಿದೆ. ಕಡಿಮೆ ಸ್ಮಾರಕಗಳನ್ನು ಒಳಗೊಂಡಿರುವ ಫೆಡರಲ್ ಝೋನ್ ಎಂದು ಹೆಸರಿಸಲಾಗಿದೆ. ಸ್ಮಾರಕಗಳ ಸಂರಕ್ಷಣೆ ಪ್ರವಾಸಿಗರಿಗೆ ವಿಜಯನಗರ ಸಾಮ್ರಾಜ್ಯದ ಸಂಸ್ಕೃತಿ ಕಟ್ಟಿಕೊಡುವುದು, ಕಾಂಕ್ರಿಟ್ ಕಟ್ಟಡಗಳಿಗೆ ತಿಲಾಂಜಲಿ ನೀಡುವುದು. ಒತ್ತುವರಿ ತೆರವುಗೊಳಿಸುವುದು, ಹಂಪಿ ಸುತ್ತಲಿನ ಪ್ರದೇಶಗಳಿಗೆ ಸಾಂಸ್ಕೃತಿಕ ಪರಂಪರೆ ನೈಸರ್ಗಿಕ ಪರಿಸರ ಸಂರಕ್ಷಣೆ ಹಂಪಿ ಪ್ರದೇಶದ ಅಭಿವೃದ್ಧಿ ಹಾಗೂ ಯೋಜನೆಯ ವಾಣಿಜ್ಯ ಉದ್ದೇಶಕ್ಕಾಗಿ ಅದರ ಬಳಿಕ ತಡೆಯುವುದು. ಈ ಯೋಜನೆಯ ಹೆಸರಾದ ಮಾಸ್ಟರ್ ಪ್ಲಾನ್ ಉಲ್ಲೇಖಿಸುವ ಹಾಗೆ ಕೋರ್ ಝೋನ್ ೩೪೩.೬೪ ಹೆಕ್ಟರ್ ಪ್ರದೇಶವನ್ನು ಹೊಸಪೇಟೆ ತಾಲೂಕಿನ ಹಳ್ಳಿಗಳು ಒಳಗೊಂಡಿವೆ. ಕೃಷ್ಣಾಪುರ(೯೨.೭೧ ಹೆಕ್ಟೇರ್ ಪ್ರದೇಶ), ಸಿಂಗನಾಥನಹಳ್ಳಿ (೧೬೨.೯೧ ಹೆಕ್ಟೇರ್ ಪ್ರದೇಶ), ನಿಂಬಾಪುರ (೧೨೬.೨೭ ಹೆಕ್ಟೇರ್ ಪ್ರದೇಶ), ಕಡ್ಡಿರಾಂಪುರ (೩೦೪.೨೮), ಕಮಲಾಪುರ ಪಟ್ಟಣ (೮೮೮೨.೪೬ ಹೆಕ್ಟೇರ್ ಪ್ರದೇಶ) ಬರುತ್ತದೆ.

ಫೆಡರಲ್ ಝೋನ್ ವಲಯದಲ್ಲಿ ಹೊಸಪೇಟೆ ತಾಲೂಕಿನ ಡಣ್ಣಾಪುರ (೧೮೩.೬೬), ಬುಕ್ಕ ಸಾಗರ (೧೪೦೩.೭೫ ಹೆಕ್ಟೇರ್ ಪ್ರದೇಶ), ವೆಂಕಟಾಪುರ (೨೯೬೩.೩೨ ಹೆಕ್ಟೇರ್ ಪ್ರದೇಶ), ಕಾಳಘಟ್ಟ (೬೯೧.೩೨ ಹೆಕ್ಟೇರ್ ಪ್ರದೇಶ) ಮತ್ತು ಕೊಂಡನಾಯಕನಹಳ್ಳಿ (೧೬೯.೨೪ ಹೆಕ್ಟೇರ್ ಪ್ರದೇಶ) ಬರುತ್ತವೆ. ಅದೇ ರೀತಿ ಕೋರ್ ಝೋನ್‌ನಲ್ಲಿ ಗಂಗಾವತಿ ತಾಲೂಕಿನ ಆನೆಗೊಂದಿ (೭೨೧.೯೧ ಹೆಕ್ಟೇರ್ ಪ್ರದೇಶ), ವಿರುಪಾಪುರ ಗಡ್ಡೆ (೩೩೧.೬೯) ಒಳಗೊಂಡಿದೆ. ಫೆಡರಲ್ ಝೋನ್‌ನಲ್ಲಿ ಗಂಗಾವತಿ ತಾಲೂಕಿನ ತಿಮಲಾಪುರ (೨೮೩.೫೧ ಹೆಕ್ಟೇರ್ ಪ್ರದೇಶ), ಸಣಾಪುರ (೬೬೪.೮೨ ಹೆಕ್ಟೇರ್ ಪ್ರದೇಶ), ಹನುಮನಹಳ್ಳಿ (೧೮೭.೫೩ ಹೆಕ್ಟೇರ್ ಪ್ರದೇಶ), ಅಂಜಿಹಳ್ಳಿ (೧೯೨.೩೨ ಹೆಕ್ಟೇರ್ ಪ್ರದೇಶ), ಚಿಕ್ಕರಾಂಪುರ (೧೩೭.೮೭ ಹೆಕ್ಟೇರ್ ಪ್ರದೇಶ), ಲಕ್ಷ್ಮೀಪುರ (೧೦೧೦.೦೦ ಹೆಕ್ಟೇರ್ ಪ್ರದೇಶ), ರಾಮದುರ್ಗ (೧೫೮.೩೬ ಹೆಕ್ಟೇರ್ ಪ್ರದೇಶ), ಮಲ್ಲಾಪುರ (೯೫೪.೨೩ ಹೆಕ್ಟೇರ್ ಪ್ರದೇಶ), ಬಸವನದುರ್ಗ (೫೪೯.೧

ಹೆಕ್ಟೇರ್ ಪ್ರದೇಶ), ಸಿಂಗನಗುಡ್ಡ (೧೬೬.೦೨ ಹೆಕ್ಟೇರ್ ಪ್ರದೇಶ), ರಂಗಾಪುರ (೩೮೦.೨ ಹೆಕ್ಟೇರ್ ಪ್ರದೇಶ) ಬರುತ್ತದೆ.[೨೮] ಈ ವಲಯದಲ್ಲಿ ಬರುವ ಹಳ್ಳಿ ಹಾಗೂ ಪಟ್ಟಣಗಳಲ್ಲಿ ಕಟ್ಟಡ ನಿರ್ಮಿಸಬೇಕಾದರೆ ಹಂಪಿ ಅಭಿವೃದ್ಧಿ ಪ್ರಾಧಿಕಾರ ಕೇಂದ್ರ ರಾಜ್ಯ ಪುರಾತತ್ವ ಇಲಾಖೆಗೆ ಸಂಬಂಧಿಸಿದ ಗ್ರಾಮ ಪಂಚಾಯಿತಿ ಅಥವಾ ಪಟ್ಟಣ ಪಂಚಾಯಿತಿ ನಿರಾಪೇಕ್ಷಣಾ ಪತ್ರ ಪಡೆಯುವುದು ಕಡ್ಡಾಯವಾಗಿದೆ. ಇಲ್ಲವಾದಲ್ಲಿ ಕಾನೂನು ಕ್ರಮ ಕೈಗೊಳ್ಳಲಾಗುತ್ತದೆ. ಒಂದು ವೇಳೆ ಒಪ್ಪಿಗೆ ಇದ್ದರೆ ಪ್ರಾಧಿಕಾರದ ಸಲಹೆ ಅನುಸಾರವೇ ಮನೆ ನಿರ್ಮಾಣ ಮಾಡಬೇಕು. ವಿಜಯನಗರ ಕಾಲದ ಸಂಸ್ಕೃತಿ ವಾಸ್ತುಶಿಲ್ಪ ಪ್ರಪಂಚವನ್ನೇ ನೆನಪಿಸುವ ರೀತಿಯಲ್ಲಿ ಮನೆಗಳನ್ನು ನಿರ್ಮಿಸಬೇಕು. ಹಂಪಿ ವಿಶ್ವಪರಂಪರೆಯ ತಾಣವಾಗಿರುವುದರಿಂದ ಈ ಪ್ರದೇಶದಲ್ಲಿ ಹಲವು ಕಟ್ಟುನಿಟ್ಟಿನ ನಿಯಮಗಳನ್ನು ಜಾರಿಗೊಳಿಸಲಾಗಿದೆ. ಆದರೆ ಹಂಪಿ ಪ್ರದೇಶದಲ್ಲಿ ಒತ್ತುವರಿ ನಡೆದಿದೆ. ಮತ್ತು ಕಾಂಕ್ರಿಟ್ ಕಟ್ಟಡಗಳು ತಲೆ ಎತ್ತಿವೆ. ಇದಕ್ಕೆ ಕೆಲ ಸಂಘಟನೆಗಳು ಆಕ್ಷೇಪ ವ್ಯಕ್ತಪಡಿಸಿದರೂ ಸಹ. ಅದಕ್ಕೆ ಸರಿಯಾದ ಸ್ಪಂದನೆ ಇದುವರೆಗೂ ದೊರೆತಿಲ್ಲ.

ಯುನೆಸ್ಕೋ ಅಧಿಕಾರಿಯಾದ ಸುಗುಣ ಗೆಹ್ಲೋಟ್ ಅವರು ಹಂಪಿ ಪ್ರದೇಶಕ್ಕೆ ಧಕ್ಕೆ ತರುವ ಕೆಲಸ ನಡೆಯಬಾರದು. ಹಂಪಿ ಅಭಿವೃದ್ಧಿ ಪ್ರಾಧಿಕಾರ ಮಾಸ್ಟರ್ ಪ್ಲಾನ್ ರಚಿಸಿದ್ದು, ಅದು ಕಟ್ಟುನಿಟ್ಟಾಗಿ ಜಾರಿಗೊಳಿಸಿದರೆ ಹಂಪಿಯನ್ನು ಸಹಜ ರೀತಿಯಲ್ಲಿ ಸಂರಕ್ಷಿಸಬಹುದು. ಹಂಪಿಗೆ ಧಕ್ಕೆಯಾಗುವುದನ್ನು ನಿಯಂತ್ರಿಸಲು ಸರ್ಕಾರಗಳು ಮುಂದಾಗಬೇಕು ಎನ್ನುತ್ತಾರೆ. ಹಂಪಿ ಸ್ಮಾರಕಗಳು ಇಂದು ಹಲವು ಇಲಾಖೆಗಳಲ್ಲಿ ಹಂಚಿಹೋಗಿವೆ. ಕೇಂದ್ರ, ರಾಜ್ಯ, ಪುರಾತತ್ವ ಇಲಾಖೆಯ, ಮುಜರಾಯಿ ಇಲಾಖೆಯ ಸುಪರ್ದಿಯಲ್ಲಿ ಇವು ಬರುತ್ತವೆ. ಇಲ್ಲಿನ ದೇಗುಲ ಹಾಗೂ ಸ್ಮಾರಕಗಳ ರಕ್ಷಣೆಗಾಗಿ ಪ್ರಾಧಿಕಾರವನ್ನು ರಚಿಸಲಾಗಿದೆ. ಆದರೆ ಅಧಿಕಾರಿಗಳು ಒಬ್ಬರ ಮೇಲೊಬ್ಬರು ಗೂಬೆ ಕೂರಿಸುತ್ತ ಜವಾಬ್ದಾರಿಯಿಂದ ನುಣುಚಿಕೊಳ್ಳುತ್ತಿದ್ದಾರೆ. ಕೊನೆಗೆ ಯುನೆಸ್ಕೋದತ್ತ ಅವರು ಬೆರಳು ತೋರಿಸುತ್ತಾರೆ. ಇದು ಸರಿಯಲ್ಲ ಎಂದು ಪತ್ರಕರ್ತರಾದ ಕೃಷ್ಣ ಎನ್. ಲಮಾಣಿ ಅವರು ಅಭಿಪ್ರಾಯಪಡುತ್ತಾರೆ. ಪುರಾಣ ಕಾಲದಿಂದಲೂ ಪ್ರಸಿದ್ಧಿ ಪಡೆದಿರುವ ಹಂಪಿಯ ಸಂರಕ್ಷಣೆ ಕೇವಲ ಸರ್ಕಾರದ ಅಥವಾ ಕೆಲ ಇಲಾಖೆಗಳ ಜವಾಬ್ದಾರಿ ಅಲ್ಲ, ಅದು ಎಲ್ಲ ಸಂಘ-ಸಂಸ್ಥೆಗಳು ಮತ್ತು ಎಲ್ಲ ಸಾರ್ವಜನಿಕರ ಕರ್ತವ್ಯವಾಗಿದೆ. ತುಂಗಭದ್ರಾ ನದಿಗೆ ಅಡ್ಡಲಾಗಿ ಎರಡು ತೂಗು ಸೇತುವೆ ಕಟ್ಟಿಸುತ್ತಿರುವ ಸಮಾಚಾರ ಯುನೆಸ್ಕೋ ಸಂಸ್ಥೆಯ ಗಮನಕ್ಕೆ ತರಲಾಯಿತು. ಕಾಲು ದಾರಿಯ

ತೂಗು ಸೇತುವೆ ಕಿತ್ತುಹಾಕಲಾಯಿತು.[೭೯] ರಾಜ್ಯದ ಲೋಕೋಪಯೋಗಿ ಇಲಾಖೆ ಮುಕ್ಕಾಲು ಭಾಗ ಕಟ್ಟಿದ ಆನೆಗೊಂದಿ ತೂಗು ಸೇತುವೆ ನಿರ್ಮಾಣದ ಕಾರ್ಯ ನಿಲ್ಲಿಸಬೇಕಾಗಿ ಬಂತು. ತನ್ನದೇ ಆದ ಶಿಲ್ಪ ವೈಭವದಿಂದ ಕೂಡಿದ ಉಗ್ರನರಸಿಂಹ ಏಕಶಿಲಾ ಬೃಹದಾಕಾರದ ಮೂರ್ತಿಯನ್ನು ನವೀಕರಿಸಲು ಮುಂದಾದಾಗ ಶಿಲ್ಪಿ ಪದ್ಮನಾಭರು ಮೂರ್ತಿಯನ್ನು ನವೀಕರಿಸುವಾಗ ಖ್ಯಾತ ಸಾಹಿತಿ ಶಿವರಾಮ ಕಾರಂತರು ಆಕ್ಷೇಪಣೆ ವ್ಯಕ್ತಡಿಸಿದರು. ಜೊತೆಗೆ ಸಾರ್ವಜನಿಕರ ತೀವ್ರ ವಿರೋಧದ ಕಾರಣವಾಗಿ ಮೂರ್ತಿಯ ನವೀಕರಣ ನಿಲ್ಲಿಸಲಾಯಿತು.

ಹಂಪಿಯ ಸುಂದರ ಪರಿಸರದ ಸುತ್ತಲೂ ನಡೆಯುತ್ತಿರುವ ತೋಟಗಾರಿಕೆಗೆ ಪೈಪ್ ಅಳವಡಿಸಿರುವುದು, ಬೇಲಿ ಹಾಕಿರುವುದು, ನೀರಿನ ತೊಟ್ಟಿ ನಿರ್ಮಿಸಿರುವುದು ಮಂಟಪಗಳಲ್ಲಿ ಬ್ಯಾಂಕ್ ಕಚೇರಿ ಪೊಲೀಸ್ ಠಾಣೆ ನಡೆಸುತ್ತಿರುವುದು ಹಂಪಿ ಪರಿಸರವನ್ನು ಹದಗೆಡಿಸುವ ಚಟುವಟಿಕೆಗಳಾಗಿವೆ. ಹಂಪಿಯಲ್ಲಿ ಸೂಕ್ತ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲಾಗಿಲ್ಲ. ಹಾಗಾಗಿ ಇಂಥ ಬಲವಾದ ಕಾರಣಗಳಿಂದಾಗಿ ಯುನೆಸ್ಕೋ ಸಂಸ್ಥೆಯು ಹಂಪಿ ವಿಶ್ವಪರಂಪರೆ ಸ್ಥಳವು ಅಪಾಯದ ಅಂಚಿನಲ್ಲಿದೆ ಎಂದು ಘೋಷಿಸಿತು. ವಿಶ್ವ ಪರಂಪರೆ ಸ್ಥಳಗಳ ಪಟ್ಟಿಯಿಂದ ಹಂಪಿಯನ್ನು ತೆಗೆದುಹಾಕುವ ಸಕಾರಣದಿಂದ ಕೂಡಿದ ತಕರಾರುಗಳನ್ನು ವಿಶ್ವಸಂಸ್ಥೆ ನೀಡಬೇಕಾಗಿ ಬಂತು. ಯುನೆಸ್ಕೋ ಸಂಸ್ಥೆಯ ಪ್ರತಿನಿಧಿಗಳು ಎರಡು ಬಾರಿ ಹಂಪಿಗೆ ಭೇಟಿ ನೀಡಿ ಪರಿಸ್ಥಿತಿ ಪರಿಶೀಲಿಸಿ ಸೂಕ್ತ ಮಾರ್ಗದರ್ಶನ ಮಾಡಿದ ಕಾರಣವಾಗಿ ಅನೇಕ ಬದಲಾವಣೆಗಳು ಹಾಗೂ ಸೂಕ್ತ ಮಾರ್ಪಾಡುಗಳನ್ನು ಸಂಬಂಧಿಸಿದ ಸರಕಾರಗಳು ಕೈಗೊಳ್ಳುವ ಸಾಧ್ಯತೆಗಳುಂಟಾದವು. ಆದ್ದರಿಂದಲೇ ಹಂಪಿ ಅಭಿವೃದ್ಧಿ ಪ್ರಾಧಿಕಾರ ಆಡಳಿತ ಸಂಸ್ಥೆಯು ತನ್ನ ನಿರ್ವಹಣೆಯಿಂದ ಜಾಗೃತಿ ಮುಂತಾದ ಚಟುವಟಿಕೆಗಳನ್ನು ಜಾರಿಗೊಳಿಸಲು ಕಾರ್ಯಪ್ರವೃತ್ತವಾಗಿದೆ. ಭಾರತೀಯ ಪ್ರಾಚ್ಯವಸ್ತು ಸಂರಕ್ಷಣೆ ಇಲಾಖೆಯವರು ಹಂಪಿಯ ಸ್ಮಾರಕಗಳ ಮೇಲೆ ಇತ್ತೀಚಿನ ದಿನಗಳಲ್ಲಿ ಅವ್ಯಾಹತವಾಗಿ ನಡೆಯುತ್ತಿರುವ ಗಣಿಗಾರಿಕೆಯ ಪರಿಣಾಮಗಳನ್ನು ಅರಿಯಲು ತೀವ್ರತರವಾದ ಕ್ರಮಗಳನ್ನು ಕೈಗೊಳಗಳಲಾರಂಭಿಸಿದೆ. ಲಾತೂರ್ ಭೂಕಂಪದ ಸಂದರ್ಭದಲ್ಲಿ ಹಂಪಿಯ ಪ್ರಸಿದ್ಧ ಕಲ್ಲಿನ ರಥದಲ್ಲಿ ಬಿರುಕು ಕಂಡು ಬಂದಿದೆ ಎಂಬ ಜನಾಭಿಪ್ರಾಯ ಮೂಡಿತ್ತು. ಆದರೆ ಪರೀಕ್ಷಿಸಿ ನೋಡಿದಾಗ ಅದು ಸುಳ್ಳಾಗಿತ್ತು ಎಂಬ ಮಾಹಿತಿಯನ್ನು ಡಾ. ರಂಗನಾಥ ಅವರು ಹೇಳಿದ್ದಾರೆ.[೮೦] ಹಂಪಿಯ ಬಹಳಷ್ಟು ಸ್ಮಾರಕಗಳು ಬಲಹೀನಗೊಂಡಿರುವುದು ಅವು ಶತಮಾನಗಳಿಂದ ಪಂಚಭೂತಗಳಿಗೆ ತೆರೆದಿಟ್ಟು ನಿಂತಿರುವ ಕಾರಣದಿಂದ ವಿಜಯ ವಿಠ್ಠಲ ಮಂದಿರದಲ್ಲಿ ನೂರಾರು ಬಿರುಕುಗಳು

ಕಂಡುಬಂದಿವೆ. ಅಲ್ಲದೇ ಇದು ಕಾಲಕಾಲಕ್ಕೆ ನಡೆದ ಶತ್ರುಗಳ ದಾಳಿಯಿಂದ ಹಾಗೂ ಬೆಂಕಿಯಿಂದ ಬಿರುಕು ಬಿಟ್ಟಿರುವ ಸಾಧ್ಯತೆಗಳನ್ನು ಕೂಡಾ ಅಲ್ಲಗಳೆಯಲಿಕ್ಕಾಗದು. ಭಾರತೀಯ ಪ್ರಾಚ್ಯವಸ್ತು ಸರ್ವೇಕ್ಷಣಾ ಇಲಾಖೆಯು ಅಲ್ಲಲ್ಲಿ ಸ್ಮಾರಕಗಳಿಗೆ ಆಧಾರ ಗೋಡೆ, ತೊಲೆ ನಿರ್ಮಿಸಿ ರಕ್ಷಣೆ ನೀಡಿದೆ. ಆದರೂ ಒಂದೇ ಒಂದು ಸಣ್ಣ ಆಕಸ್ಮಿಕ ಘಟನೆ ನಡೆದರೆ ಸ್ಮಾರಕಗಳಿಗೆ ಅಪಾರ ಹಾನಿಯಾಗುವ ಸಂಭವವಿದೆ. ಇದಲ್ಲದೇ ನೂರಾರು ಸಣ್ಣ ಗುಡಿಗಳು, ಮಂಟಪಗಳು, ಕೋಟೆ-ಕೊತ್ತಲಗಳು ಅಪಾಯದಂಚಿನಲ್ಲಿವೆ. ಸ್ಮಾರಕಗಳಲ್ಲಿರುವ ಬಿರುಕು, ರಂಧ್ರಗಳಲ್ಲಿ ಬೆಳೆದು ನಿಂತ ಸಸ್ಯಗಳು ಶತಮಾನಗಳಿಂದಲೂ ಸ್ಮಾರಕಗಳಿಗೆ ಹಾನಿಯನ್ನುಂಟು ಮಾಡುತ್ತವೆ. ಅಲ್ಲದೇ ಹೆಚ್ಚಿನ ಸಂಖ್ಯೆಯಲ್ಲಿನ ಸ್ಮಾರಕಗಳು ರಕ್ಷಣೆಯಿಲ್ಲದೆ ಅಪಾಯಕ್ಕೊಳಗಾಗಿವೆ ಎಂಬುದು ದಿಟ. ಸ್ಮಾರಕಗಳಿಗೆ ಗಣಿಗಾರಿಕೆಯಿಂದಲೂ ಗಣನೀಯ ಪ್ರಮಾಣ ಹಾನಿಯಾಗುತ್ತಿದೆ.[೮೧]

ಹಂಪಿಯಲ್ಲಿ ನೂರಾರು ಕಲ್ಲಿನ ಮಂಟಪಗಳಿವೆ. ಅವುಗಳಲ್ಲಿ ಅನುಕೂಲಕ್ಕೆ ಬರುವ ಮಂಟಪಗಳನ್ನು ದುರಸ್ತಿ ಮಾಡಿ ಸಾಮಾನ್ಯ ಪ್ರವಾಸಿಗರಿಗೆ ತಂಗಲು ವಿಶ್ರಾಂತಿ ಪಡೆಯಲು ಅನುವು ಮಾಡಿದರೆ ಪ್ರವಾಸಕ್ಕೆ ಒಂದು ಅರ್ಥ ಬರುವುದು. ಬಳ್ಳಾರಿ ಜಿಲ್ಲಾ ಪರಿಷತ್ ವತಿಯಿಂದ ಸುಮಾರು ಹತ್ತು ಲಕ್ಷ ರೂಪಾಯಿ[೮೨] ಖರ್ಚಿನಿಂದ ಎದುರು ಬಸವಣ್ಣ ವಿಗ್ರಹದ ಎರಡೂ ಬದಿಗೆ ಕಲ್ಲಿನ ಮಂಟಪಗಳ ಪುನರ್ ನಿರ್ಮಾಣ ಮಾಡಲಾಗಿದೆ. ಈ ಮಂಟಪಗಳ ಉಪಯೋಗ ಅಲ್ಲಿ ನಡೆಯುವ ಸಭೆ ಸಮಾರಂಭಗಳಿಗೆ ತುಂಬ ಅನುಕೂಲವಾಗಿದೆ. ಪುರಂದರದಾಸರ ಉತ್ಸವ, ಹಂಪಿ ಉತ್ಸವ, ಭಾವೈಕ್ಯ ಶಿಬಿರಗಳು ಹಾಗೂ ಧಾರ್ಮಿಕ ಸಮಾರಂಭಗಳು ನಡೆದಾಗ ಸಾರ್ವಜನಿಕರಿಗೆ ನೆರಳು-ನೆಲೆ ನೀಡುವಲ್ಲಿ ಉಪಯುಕ್ತವಾಗಿವೆ.

ಕರ್ನಾಟಕ ರಾಜ್ಯ ಸರ್ಕಾರ ೨೦೧೩ ಏಪ್ರಿಲ್ ೯ ರಂದು "ಹಂಪಿ ವಿಶ್ವಪರಂಪರಾ ಪ್ರದೇಶ ನಿರ್ವಹಣಾ ಪ್ರಾಧಿಕಾರ" ವನ್ನು ಜಾರಿಗೆ ತಂದಿದೆ.[೮೩] ಇದಕ್ಕೆ ರಾಜ್ಯಪಾಲರ ಒಪ್ಪಿಗೆಯೂ ದೊರಕಿದೆ. ಈ ಪ್ರಾಧಿಕಾರದ ಮೂಲಕ ಹಂಪಿಯ ಎಲ್ಲಾ ಪುರಾತತ್ವ ಅವಶೇಷಗಳ ಮತ್ತು ನೈಸರ್ಗಿಕ ಪರಿಸರಗಳೊಂದಿಗೆ ಅದರ ಸಾಂಸ್ಕೃತಿಕ ಪರಂಪರೆಯನ್ನು ಸಂರಕ್ಷಿಸುವುದಕ್ಕಾಗಿ, ಕರ್ನಾಟಕ ರಾಜ್ಯದಲ್ಲಿ ಅದರ ಸಾಂಸ್ಕೃತಿಕ ಸಮಗ್ರತೆಯನ್ನು ರಕ್ಷಿಸುವುದಕ್ಕಾಗಿ ಮತ್ತು ಹಂಪಿ ವಿಶ್ವಪರಂಪರೆ ಪ್ರದೇಶದ ಸಮರ್ಥ ಅಭಿವೃದ್ಧಿಯನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಅಧಿನಿಯಮಗಳನ್ನು ರಚಿಸಲಾಗಿದೆ. ಆ ನಿಯಮ ಅಥವಾ ಕಾರ್ಯಗಳು ಈ ಕೆಳಗಿನಂತಿವೆ.

- ಈ ಪ್ರದೇಶದಲ್ಲಿ ಪಾರಂಪರಿಕ ಕಟ್ಟಡಗಳು ಮತ್ತು ಸ್ಮಾರಕಗಳನ್ನು ವ್ಯವಸ್ಥಿತವಾಗಿ ವೈಜ್ಞಾನಿಕ ವಿಧಾನಗಳನ್ನು ಅನುಸರಿಸಿ ಗುರುತಿಸುವುದು. ಅವುಗಳ ಮೌಲ್ಯಗಳನ್ನು ಆಧಾರಿಸಿ ಆ ಪಾರಂಪರಿಕ ಕಟ್ಟಡಗಳನ್ನು ಶ್ರೇಣೀಕರಿಸುವುದು.
- ಗುರುತಿಸಲಾದ ಪಾರಂಪರಿಕ ಕಟ್ಟಡಗಳ ಸಂರಕ್ಷಣಾ ಕಾರ್ಯಗಳನ್ನು ಆದ್ಯಾತಾನುಸಾರವಾಗಿ ಸಾರ್ವಜನಿಕ ಸಹಭಾಗಿತ್ವದೊಂದಿಗೆ ಕೈಗೊಳ್ಳುವುದು.
- ಪಾರಂಪರಿಕ ಕಟ್ಟಡ ಮತ್ತು ಪ್ರದೇಶಗಳನ್ನು ಸಂರಕ್ಷಿಸಲು ಸುತ್ತಮುತ್ತಲ ನೈರ್ಮಲ್ಯವನ್ನು ಕಾಪಾಡಲು ಸಾರ್ವಜನಿಕರಲ್ಲಿ ತಿಳುವಳಿಕೆ ಮೂಡಿಸಲು ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು. ಪರಂಪರೆ ಕುರಿತಂತೆ ಪ್ರದರ್ಶನ, ಕಮ್ಮಟ, ವಿಚಾರ ಸಂಕಿರಣ, ಕಾರ್ಯಗಾರಗಳನ್ನು ಏರ್ಪಡಿಸುವುದು ಹಾಗೂ ಪರಂಪರೆಯ ಸಂರಕ್ಷಣೆ ಕುರಿತಂತೆ ಲಘು ಪುಸ್ತಕ ಮಾಹಿತಿ, ಪುಸ್ತಕಗಳ ಪ್ರಕಟಣೆ ಮಾಡುವುದು.
- ಯುನೆಸ್ಕೋ, ಇನ್‌ಟ್ಯಾಕ್, ಭಾರತ ಸರ್ಕಾರ, ರಾಜ್ಯ ಸರ್ಕಾರ ಹಾಗೂ ಸ್ವಾಯತ್ತ ಸಂಸ್ಥೆಗಳಿಂದ ಮತ್ತು ಖಾಸಗಿ ಉದ್ಯಮಿಗಳ ನೆರವಿನೊಂದಿಗೆ ಹಣಕಾಸಿನ ಸಹಾಯ ಪಡೆದು ವಿನೂತನ ಯೋಜನೆಗಳನ್ನು ತನ್ನ ಕಾರ್ಯವ್ಯಾಪ್ತಿಯಲ್ಲಿ ಗುರುತಿಸುವುದು.
- ಸ್ಮಾರಕಗಳ ಬಳಿ ನಿರ್ಮಾಣವಾಗಿರುವ ಅನಧಿಕೃತ ಕಟ್ಟಡಗಳನ್ನು ತೆರವುಗೊಳಿಸುವುದು ಮತ್ತು ಎಲ್ಲಾ ಎನ್ಕ್ರೋಚ್‌ಮೆಂಟ್‌ಗಳನ್ನು ತಡೆಯುವುದು.
- ಕಲ್ಲು ಗಣಿಗಾರಿಕೆಗಳು ನಡೆಯದಂತೆ ಕ್ರಮಕೈಗೊಳ್ಳುವುದು. ಇದಕ್ಕಾಗಿ ಒಂದು ಟಾಸ್ಕ್ ಫೋರ್ಸ್ ಸಮಿತಿಯನ್ನು ನೇಮಿಸುವುದು.
- ಅವಸಾನದಂಚಿನಲ್ಲಿರುವ ಎಲ್ಲ ಕಲಾಪ್ರಕಾರಗಳನ್ನು ಗುರುತಿಸಿ ದಾಖಲಿಸುವುದು ಹಾಗೆಯೆ ಸ್ಥಳೀಯ ಕಲಾವಿದರನ್ನು ಗುರುತಿಸುವುದು ಮತ್ತು ಅವರು ಭಾಗವಹಿಸಲು ಅನುಕೂಲವಾಗುವಂತೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸುವುದು.
- ಈ ಪ್ರದೇಶದಲ್ಲಿ ನಡೆಯುವ ಹಬ್ಬ, ಜಾತ್ರೆ, ಸಂಪ್ರದಾಯ, ನಂಬಿಕೆ, ಕಲಾ ಪರಂಪರೆ, ವೈದ್ಯ ಪದ್ಧತಿ, ಉಡುಗೆ–ತೊಡುಗೆ ಮೊದಲಾದ ಅಮೂರ್ತ ಪರಂಪರೆಯನ್ನು ಸರಿಯಾಗಿ ಗುರುತಿಸಿ ದಾಖಲಿಸುವುದು.
- ಅನಧಿಕೃತವಾಗಿ ನಡೆಯುತ್ತಿರುವ ಉದ್ಯಮ ಮತ್ತು ವ್ಯಾಪಾರ, ವಾಣಿಜ್ಯ ಚಟುವಟಿಕೆಗಳನ್ನು ನಿಯಂತ್ರಿಸುವುದು.

- ಅನಧಿಕೃತ ಚಟುವಟಿಕೆಗಳನ್ನು ತಡೆದು ಜನರಿಗೆ ಅನುಕೂಲವಾಗುವಂತೆ ಮೂಲಭೂತ ಸೌಲಭ್ಯಗಳನ್ನು ಒದಗಿಸಿ ಕೊಡುವುದು.
- ಈ ಪಾರಂಪರಿಕ ಪ್ರದೇಶಗಳಲ್ಲಿ ಧ್ವನಿ ಮತ್ತು ಬೆಳಕು ವ್ಯವಸ್ಥೆ, ಹಂಪಿ ಪ್ರದೇಶಗಳ ಮಾಹಿತಿ ಮತ್ತು ಚಾರಿತ್ರಿಕ, ಸಾಂಸ್ಕೃತಿಕ ಮಾಹಿತಿಗಳನ್ನು ಒಳಗೊಂಡ ರೇಟನ್ನು ಸಿದ್ಧಪಡಿಸುವುದು. ಸಾಕ್ಷ್ಯಚಿತ್ರಗಳು ಹಾಗೂ ಸಾಂಸ್ಕೃತಿಕ ಮಾಹಿತಿಗಳನ್ನೊಳಗೊಂಡ ವೆಬ್‌ಸೈಟ್‌ನ್ನು ಸಿದ್ಧಪಡಿಸುವುದು. ಸಾಕ್ಷ್ಯಚಿತ್ರಗಳು ಹಾಗೂ ಸಾಂಸ್ಕೃತಿಕ ಮಾಹಿತಿಗಳನ್ನೊಳಗೊಂಡ ಕಾರ್ಯಕ್ರಮಗಳನ್ನು ಕೈಗೊಳ್ಳುವುದು.
- ಪ್ರವಾಸಿಗರಿಗೆ ಆಯ್ದ ಸ್ಥಳಗಳಲ್ಲಿ ಊಟ, ತಿಂಡಿ, ಕುಡಿಯುವ ನೀರು ಮತ್ತು ಶೌಚಾಲಯ ಲಭ್ಯವಾಗುವಂತೆ ನೋಡಿಕೊಳ್ಳುವುದು.
- ಪ್ರಸಕ್ತ ನಡೆಸುತ್ತಿರುವ ಬ್ಯಾಟರಿ ಚಾಲಿತ ವಾಹನಗಳನ್ನು ರದ್ದುಪಡಿಸಿ ಅವುಗಳ ಜಾಗದಲ್ಲಿ ನಮ್ಮ ಪರಂಪರೆಯ ಒಂದು ಭಾಗವಾದ ಕುದುರೆಗಾಡಿ ಇಲ್ಲವೆ ಎತ್ತಿನಗಾಡಿಗಳನ್ನು ಪ್ರವಾಸಿಗರ ಓಡಾಟಕ್ಕೆ ಅನುಕೂಲವಾಗುವಂತೆ ವ್ಯವಸ್ಥೆ ಮಾಡುವುದು.
- ಪ್ರಾಧಿಕಾರದ ವತಿಯಿಂದ ಸ್ಥಳೀಯ ಪ್ಯಾಕೇಜ್ ಟೂರ್ ಹಮ್ಮಿಕೊಳ್ಳುವುದು ಮತ್ತು ಅದಕ್ಕಾಗಿಯೇ ಪ್ರತ್ಯೇಕ ಮಾರ್ಗದರ್ಶಕರನ್ನು ನೇಮಿಸಿಕೊಳ್ಳುವುದು.
- ಪ್ರವಾಸಿಗರಿಗೆ ಅನುಕೂಲವಾಗುವಂತೆ ಒಂದು ಮಾಹಿತಿ ಕೇಂದ್ರವನ್ನು ಮತ್ತು ನಮ್ಮ ದೇಶ ಪರಂಪರೆಯನ್ನು ಪ್ರತಿನಿಧಿಸುವ ಒಂದು ಗ್ರಂಥಾಲಯ ಮತ್ತು ವಸ್ತುಸಂಗ್ರಹಾಲಯವನ್ನು ಸ್ಥಾಪಿಸುವುದು.
- ಸ್ಥಳೀಯ ಪ್ರದೇಶದ ನಿರುದ್ಯೋಗಿಗಳಿಗೆ ಅನುಕೂಲವಾಗುವ ಹಾಗೆ ವಿವಿಧ ಕುಲವೃತ್ತಿಗಳ ಕುರಿತು ತರಬೇತಿ ನೀಡಿ ಅವುಗಳನ್ನು ಸಂರಕ್ಷಿಸುವುದು ಮತ್ತು ಅವರಿಗಾಗಿ ಉದ್ಯೋಗಧಾರಿತ ತರಬೇತಿಗಳನ್ನು ಸಹ ಹಮ್ಮಿಕೊಳ್ಳುವುದು.
- ಸ್ಥಳೀಯರಿಗೆ ಉತ್ತಮ ಶಿಕ್ಷಣ, ಆರೋಗ್ಯ ದೊರೆಯಲು ಬೇಕಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳುವುದು.
- ವಿವಿಧ ಕಡೆ ಸಂಗ್ರಹಿಸುತ್ತಿರುವ ಪ್ರವೇಶ ಶುಲ್ಕ ಮತ್ತು ಟೋಲ್ ಫೀಯನ್ನು ರದ್ದುಪಡಿಸಿ ಒಂದು ಕಡೆ ಮಾತ್ರ ಇವುಗಳನ್ನು ಸಂಗ್ರಹಿಸಲು ಕ್ರಮ ಕೈಗೊಳ್ಳುವುದು.

**ಸಮಸ್ಯೆಗಳು ಹಾಗೂ ಪರಿಹಾರಗಳು**

ರಾಷ್ಟ್ರೀಯ ಸ್ಮಾರಕಗಳನ್ನು ರಕ್ಷಿಸುವ ಕಾಯ್ದೆ-೧೯೫೮ (Archacological monuments and sites Act-1958) ಇದ್ದು ಸ್ಮಾರಕಗಳನ್ನು ಭಗ್ನಗೊಳಿಸುವ, ಆಕ್ರಮಣ ಮಾಡುವ, ಕಳ್ಳತನ ಮಾಡುವ, ದುರುಪಯೋಗ ಮಾಡುವ ಹಾಗೂ ಹೊಸದಾಗಿ ಏನನ್ನಾದರೂ ಭಗ್ನಗೊಳಿಸಿದರೆ ವ್ಯಕ್ತಿಗೆ ಮೂರು ತಿಂಗಳ ಸಜಾ ಹಾಗೂ ಐದು ಸಾವಿರ ರೂ. ಗಳ ದಂಡವನ್ನು ಕೋರ್ಟ್ ವಿಧಿಸುತ್ತದೆ. ಈ ಕಾಯ್ದೆ ಇನ್ನೂ ಹೆಚ್ಚು ತೀಕ್ಷ್ಣ ಆಗಬೇಕು. ಸ್ಥಳದಲ್ಲಿಯೇ ಮೇಲಿನ ಯಾವುದೇ ಕೆಲಸ ಮಾಡಿದರೆ ಇಲಾಖೆ ಅಧಿಕಾರಿಗಳು ನೇರವಾಗಿ ಶಿಕ್ಷೆ ಕೊಡುವ ಅಧಿಕಾರ ಕೊಡಬೇಕು. ಅಂದರೆ ಸ್ಮಾರಕಗಳ ಸುತ್ತಲಿನ ಜನ ಜಾಗೃತರಾಗುತ್ತಾರೆ. ಇದನ್ನು ಪಾರ್ಲಿಮೆಂಟ್ ವಿಧೇಯಕವೆಂದು ಘೋಷಿಸಬೇಕು.[೬೪] Protected Area ಹಾಗೂ Prohibited Area Prohibited Area ಗಳನ್ನು ನಿರ್ದಿಷ್ಟಪಡಿಸಿ ಸೀಮೆ ಕಲ್ಲುಗಳನ್ನು ನಿಲ್ಲಿಸಬೇಕು. Protected Area ರೇಖೆಯಿಂದ ೩೦೦ ಮೀ. ದೂರದಲ್ಲಿ ಇರುವುದು. ಹಂಪಿಯ ಸ್ಮಾರಕಗಳ ವ್ಯಾಪ್ತಿ ೧೫ ಕಿ.ಮೀ. ಇದ್ದು, ಇದರ ಬಗ್ಗೆ ವಿಸ್ತೃತವಾದ ಗಡಿರೇಖೆ ಕ್ರಮ ಕೈಗೊಳ್ಳಬೇಕು ಹಾಗೂ ಪ್ರತಿ ಕಿ.ಮೀ. ಒಬ್ಬ ಸಿಪಾಯಿ ನೇಮಿಸಬೇಕು. ರಕ್ಷಿಸುವುದು ಹಾಗೂ ಆಕ್ರಮಣ ಅಥವಾ ಅವುಗಳ ಕಳುವಾಗದಂತೆ ಕಾಪಾಡುವುದು ಆತನ ಕರ್ತವ್ಯ. ಸಮೀಪದ ಕಮಲಾಪುರ ಗ್ರಾಮ ಭರದಿಂದ ಬೆಳೆಯುತ್ತಿದೆ. ಅದರ ಆಧುನಿಕತೆ, ಸಿನೆಮಾ ಥೇಟರ್, ಅಂಗಡಿ, ಮಹಡಿ, ರಸ್ತೆಗಳು ಉತ್ತಮಗೊಳ್ಳಬೇಕು. ಹೋಟೆಲ್, ತಂಗುದಾಣ, ಮಾರುಕಟ್ಟೆ ಮುಂತಾದವುಗಳು ನಿರ್ಧರಿಸಿದ ತಾಣದಲ್ಲಿ ಕಟ್ಟಬೇಕು, ಕುಡಿಯುವ ನೀರಿನ ವ್ಯವಸ್ಥೆಯಾಗಬೇಕು. ಈಗ ಸರಕಾರಿ ಸಂಸ್ಥೆಗಳು ನಿರ್ಮಿಸಿರುವ ವ್ಯವಸ್ಥೆಗಳು ಕೇವಲ ತೋರಿಕೆಗಾಗಿ ಎಂಬಂತೆ.

**ಹಂಪಿಯಲ್ಲಿ ಪ್ರವಾಸಿಗರ ಸಮಸ್ಯೆಗಳು**

ವಿಜಯನಗರ ಸಾಮ್ರಾಜ್ಯ ೧೫ನೇ ಶತಮಾನದಲ್ಲಿ ಸ್ವರ್ಣಯುಗ ಎಂದು ಕರೆಯಲ್ಪಟ್ಟಿತ್ತು. ಶ್ರೀ ಕೃಷ್ಣದೇವರಾಯನ ಆಡಳಿತ ಕಾಲದಲ್ಲಿ ಇದು ಉಚ್ಛ್ರಾಯ ಸ್ಥಿತಿಯಲ್ಲಿದ್ದು ಮೂಲೆ ಮೂಲೆಗಳಿಂದ ವ್ಯಾಪಕವಾಗಿ ಬಂದ ವಿದೇಶಿ ಪ್ರವಾಸಿಗರು ತಮ್ಮ ಪ್ರವಾಸ ಕಥನದಲ್ಲಿ ವಿಜಯನಗರದ ವೈಭವವನ್ನು ವರ್ಣಿಸಿದ್ದಾರೆ. ವಿಜಯನಗರ ಕಲಾ ಶಿಲ್ಪ ವೈಭವ ಈಗ ಮುಕ್ಕಾಗಿದೆ. ೬೦೦ ವರ್ಷ ಗತಿಸಿದರೂ ಮೂಕ ಸಾಕ್ಷಿಗಳಾಗಿ ನಿಂತು ಹಾಳು ಹಂಪೆ ಎಂದು

ಕರೆಸಿಕೊಳ್ಳುತ್ತಿದೆ. ಆದರೂ ಹಿಂದಿನಿಂದಲೂ ಜನರು ಇಲ್ಲಿಗೆ ಬಂದು ಹೋಗುತ್ತಾರೆ. ಪ್ರಸಕ್ತ ಹಂಪಿ ಪ್ರವಾಸಿಗರ ಹಿನ್ನೆಲೆಯಲ್ಲಿ ಎದುರಿಸುತ್ತಿರುವ ಸಮಸ್ಯೆಗಳು ಇಂತಿವೆ.

೧. **ಹಂಪಿ ವೀಕ್ಷಣೆಗೆ ಸಮರ್ಪಕ ರಸ್ತೆಗಳು ಹಾಗೂ ವಾಹನಗಳ ಕೊರತೆ** : ಹಂಪಿಯ ಪ್ರವಾಸವೆಂದರೆ ದೇಶದ ಸಾಂಸ್ಕೃತಿಕ ಪ್ರವಾಸವೆ ಎಂದು ಪರಿಭಾವಿಸಿಕೊಂಡು ಬರುವ ವಿದೇಶಿಯ ಪ್ರವಾಸಿಗರಿಗೆ ಇಲ್ಲಿನ ಸೌಲಭ್ಯಗಳು ಹೆಚ್ಚಿನ ಭ್ರಮನಿರಸನ ಹುಟ್ಟಿಸಿವೆ.[೮೫] ಹಂಪಿಗೆ ಬಂದು ಹೋಗಲು ಕಮಲಾಪುರದಿಂದ ಹಂಪಿಯಲ್ಲಿ ಚದುರಿರುವ ಸ್ಮಾರಕಗಳಿಗೆ ಹೋಗಲು ಉತ್ತಮವಾದ ರಸ್ತೆಗಳಿಲ್ಲ. ಹಾಗಾಗಿ ಉತ್ತಮ ಗುಣಮಟ್ಟದ ರಸ್ತೆಗಳನ್ನು ನಿರ್ಮಾಣ ಅಗತ್ಯ. ನಮ್ಮ ರಸ್ತೆಗಳು ನಮ್ಮನ್ನಾಳುವ ಪ್ರಭುಗಳ ದುರಾಡಳಿತದ ಸಂಕೇತದಂತಿವೆ ಎಂಬ ಅಭಿಪ್ರಾಯವಿದೆ. ಹೀಗಾಗಿ ಪ್ರವಾಸ ಎನ್ನುವುದು ಪ್ರಯಾಸ(ತ್ರಾಸದಾಯಕ) ವಾಗಿ ಮಾರ್ಪಟ್ಟಿದೆ.[೮೬] ಅಂತಹ ತೊಂದರೆಗಳನ್ನು ನಿವಾರಿಸಲು ರಸ್ತೆಗಳನ್ನು ಕೇವಲ ಕಿಲೋಮೀಟರ್‌ಗಳವರೆಗೆ ದುರಸ್ತಿಗೊಳಿಸಿದರೆ ಸಾಲದು. ಹೆಚ್ಚು ಕಡಿಮೆ ೧೦೦ ಚದರ ಕಿ.ಮೀ. ವರೆಗಿನ ಸಂಪರ್ಕ ರಸ್ತೆಗಳನ್ನು ಉತ್ತಮ ಗುಣಮಟ್ಟದಲ್ಲಿ ರೂಪಿಸಬೇಕು. ಈ ಕ್ರಮಗಳಿಂದ ಪ್ರಯಾಣದ ಅವಧಿಯನ್ನು ತಗ್ಗಿಸಬಹುದು. ಈ ತೊಂದರೆಗಳನ್ನು ಹೋಗಲಾಡಿಸಲು ಹಂಪಿ ಸುತ್ತಲೂ ದ್ವಿಮುಖ ರಸ್ತೆಗಳನ್ನು ನಿರ್ಮಾಣ ಮಾಡಿ ಜನದಟ್ಟಣೆಯನ್ನು ತಗ್ಗಿಸಬೇಕು. ದೂರ ದೂರದ ಪ್ರವಾಸಿಗರಿಗೆ ನಿಗದಿತ ಅವಧಿಯಲ್ಲಿ ದಿನದ ಎಲ್ಲ ಸಮಯಕ್ಕೂ ಹಂಪಿಯನ್ನು ತಲುಪಲು ತಾಲೂಕು ಕೇಂದ್ರ ಹೊಸಪೇಟೆಯಿಂದ ಬಸ್ಸುಗಳ ಸೌಕರ್ಯ ಮಾಡಬೇಕಾದ ಅನಿವಾರ್ಯತೆ ಇದೆ. ಆದರೆ ಜಿಲ್ಲಾ ಕೇಂದ್ರ ಬಳ್ಳಾರಿ ಹಂಪಿ ಸ್ಮಾರಕಗಳನ್ನು ತನ್ನ ಎಲ್ಲೆಯಲ್ಲಿ ಇರಿಸಿಕೊಂಡಿರುವ ತಾಲೂಕು ಕೇಂದ್ರ ಗಂಗಾವತಿಯಿಂದ ಬಸ್ಸುಗಳ ಸೌಕರ್ಯ ಒದಗಿಸುವುದು ಅವಶ್ಯಕ. ಅಲ್ಲದೇ ಹಂಪಿಯ ಸುತ್ತಲ್ಲಿರುವ ಸಮೀಪದ ಎಲ್ಲಾ ತಾಲೂಕು ಕೇಂದ್ರಗಳನ್ನು ಸಂಪರ್ಕ ವಲಯದಲ್ಲಿ ತಂದು ಹೆಚ್ಚಿನ ಅನುಕೂಲ ಮಾಡುವುದು ಉಚಿತ. ಬೇಸಿಗೆ ಕಾಲ ಕಡು ಬಿಸಿಲಿನಲ್ಲಿ ಪ್ರವಾಸಿಗರಿಗೆ ವಾತಾನುಕೂಲ ಬಸ್ ಒದಗಿಸುವುದು ಸೂಕ್ತ.

೨ **ದುಬಾರಿ ಪ್ರವೇಶ ಶುಲ್ಕಗಳು** : ಹಂಪೆ ವೀಕ್ಷಣೆ ಬರುವ ಪ್ರವಾಸಿಗರಿಗೆ ಮತ್ತು ವಾಹನಗಳ ಮೇಲೆ ಅತಿ ದುಬಾರಿ ಶುಲ್ಕ ಹೇರಲಾಗುತ್ತಿದೆ. ಇದು ನಿಯಮ ಬಾಹಿರ ಮತ್ತು ಅಕ್ರಮ ಸುಂಕ ಎಂದು ಪ್ರವಾಸಿಗರು ಹೇಳುತ್ತಾರೆ. ಇಲ್ಲಿರುವ ದುಬಾರಿ ತೆರಿಗೆಗಳು ಹೀಗಿವೆ.

- ಹಂಪಿಯಲ್ಲಿ ವಾಹನಗಳ ಪಾರ್ಕಿಗಾಗಿ ರೂ. ೧೦ ನ್ನು ವಸೂಲಿ ಮಾಡಲಾಗುತ್ತದೆ.

➢ ವಿರೂಪಾಕ್ಷ ದೇವಾಲಯದೊಳಗೆ ವಿಶೇಷ ದರ್ಶನಕ್ಕೆ ಹೋಗಲು ೨೫ ರೂಪಾಯಿ ತಲೆಗಂದಾಯ ಹೇರಲಾಗುತ್ತದೆ.

➢ ಪ್ರತಿ ದೇವಾಲಯದ ದ್ವಾರದಲ್ಲೇ ಚಪ್ಪಲಿ ಸುಂಕ ಹೇರಲಾಗುತ್ತದೆ.

➢ ನವವೃಂದಾವನಕ್ಕೆ ದೋಣಿಯಲ್ಲಿ ಹೋಗಿ ಬರಲು ಪ್ರತಿ ವ್ಯಕ್ತಿಗೆ ೬೦ ರೂಪಾಯಿ.

➢ ಬ್ಯಾಟರಿ ಚಾಲಿತ ವಾಹನಗಳಿಗೂ ಕೂಡ ೨೦ ರೂಪಾಯಿ ಶುಲ್ಕವನ್ನು ತೆರಬೇಕು.

ಹೀಗೆ ದೇಶಿಯರಿಗಷ್ಟೇ ಅಲ್ಲದೇ ವಿದೇಶಿಯರಿಗೆ ಸುಲಿಗೆ ದೇಶಕ್ಕೆ ಮಾನತರುವ ವಿಷಯಲ್ಲ. ಅವರನ್ನು ಚಪ್ಪಲಿ ಕಾಯುವವನು ೩೦ರೂ ಕೇಳುತ್ತಾನೆ. ಇಲಾಖೆಯವರು ಸ್ಮಾರಕ ಪ್ರವೇಶಕ್ಕೆ ರೂ. ೨೫೦ ಶುಲ್ಕ ವಸೂಲಿ ಮಾಡುತ್ತಾರೆ.

**೩ ತರಬೇತಿ ಪಡೆದ ಮಾರ್ಗದರ್ಶಕರ ಕೊರತೆ** : ಹಂಪಿಯಲ್ಲಿ ಉತ್ತಮ ಸುಶಿಕ್ಷಿತ ಮಾರ್ಗದರ್ಶಿಗಳ ಕೊರತೆ ಇದೆ. ಅವರೆಲ್ಲಾ ಹಂಪಿಯ ವಾಸ್ತವ ಇತಿಹಾಸಕ್ಕೆ ಬದಲಾಗಿ ಅಜ್ಜಿ ಕಥೆಗಳ ರೀತಿ ಹಂಪಿಯನ್ನು ಪರಿಚಯಿಸುತ್ತಾರೆ. ಇಲ್ಲಿರುವ ಬಹುತೇಕರಿಗೆ ಗೈಡು ಪರವಾನಗಿ ಇಲ್ಲದೆ ಅವರಿಗೆ ಉತ್ತಮ ತರಬೇತಿ ಇಲ್ಲ. ಇವರಿಂದಾಗಿ ವಿದೇಶಿಯರಿಗೆ ಸರಿಯಾದ ಮಾರ್ಗದರ್ಶನ ದೊರೆಯುತ್ತಿಲ್ಲ. ಇನ್ನೂ ಬಟ್ಲರ್ ಇಂಗ್ಲಿಷ್ ಮಾರ್ಗದರ್ಶಿಗಳು ನಿಯಮ ಮೀರಿ ಸಾವಿರಾರು ರೂಪಾಯಿ ಅಧಿಕವಾಗಿ ಕೇಳುತ್ತಾರೆ. ಇದು ನಿಜಕ್ಕೂ ವಿಶ್ವಪರಂಪರೆ ಸ್ಥಳಕ್ಕೆ ಕೊಡುವ ಗೌರವವಲ್ಲ.

**೪ ಉತ್ತಮ ಶೌಚಾಲಯಗಳ ಕೊರತೆ** : ಉತ್ತಮ ದರ್ಜೆಯ ಶೌಚಾಲಯಗಳು ಇಂದು ಪ್ರವಾಸಿಗರಿಗೆ ದೊರೆಯುತ್ತಿಲ್ಲ. ಈಗಿರುವ ಒಂದೆರಡು ಶೌಚಾಲಯಗಳು ಸರಿಯಾಗಿ ಕರ್ತವ್ಯ ನಿರ್ವಹಿಸುತ್ತಿಲ್ಲ. ಇದರಿಂದ ಹೆಂಗಸರು ಮತ್ತು ಮಕ್ಕಳು ತೀವ್ರ ತೊಂದರೆ ಅನುಭವಿಸುತ್ತಾರೆ. ಅನೇಕರು ಇದಕ್ಕಾಗಿ ನದಿ ದಂಡೆಯನ್ನು ಅವಲಂಬಿಸುತ್ತಾರೆ. ವಿರುಪಾಕ್ಷ ದೇವಾಲಯದ ಎಡ ಭಾಗಕ್ಕೆ ತುಂಗಭದ್ರಾ ನದಿ ದಂಡೆ ಇಲ್ಲಿ ಯಾವುದೇ ಸ್ನಾನಘಟ್ಟ, ರಕ್ಷಣೆತಡೆ ಮೆಸ್ ಅಳವಡಿಕೆ ಯಾವುದು ಇಲ್ಲ. ತಟದ ಅಕ್ಕ ಪಕ್ಕ ದಂಡಿ ಹೇಸಿಗೆಯ ದುರ್ವಾಸನೆಯ, ಬಟ್ಟೆ ಒಗೆತ ಜಲಮಾಲಿನ್ಯದಿಂದ ನದಿ ನೀರು ಕೊಳಕಾಗಿದೆ. ಶೌಚಾಲಯಕ್ಕೆ ಹೋದರೆ ಅಲ್ಲಿ ನೀರಿಲ್ಲ ರೂ. ೫ ತೆತ್ತಮೇಲೂ ಎಲ್ಲಿಂದಲೋ ಬಕೆಟ್ ನೀರು ತಂದು ಕೊಡುತ್ತಾರೆ.

**೫ ಪ್ರವಾಸಿಗರಿಗೆ ಸ್ವಚ್ಛವಾದ ಕುಡಿಯುವ ನೀರಿನ ಕೊರತೆ** : ಖನಿಜಯುಕ್ತ ಕುಡಿಯುವ ನೀರು ಇಂದು ಪ್ರವಾಸಿಗರಿಗೆ ದೊರೆಯುತ್ತಿಲ್ಲ ಈಗಿರುವ ಒಂದೆರಡು ಕುಡಿಯುವ ನೀರಿನ

ಫಿಲ್ಟರ್‌ಗಳು ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಕುಡಿಯುವ ನೀರು ಎಂಬ ನಾಮಫಲಕಕ್ಕೆ ನೋಡಿ ಹತ್ತಿರ ಹೋದರೆ ಅವ್ಯವಸ್ಥೆಯಿಂದ ಕೂಡಿದ ಪೈಪುಗಳು ಕಿತ್ತು ಹಾಳಾಗಿವೆ.

**೬ ಅತ್ಯಾಧುನಿಕ ಸೌಲಭ್ಯಗಳು ಕೊರತೆ :** ಪ್ರವಾಸಿ ಮಾಹಿತಿ ನೀಡುವ ಆಡಿಯೋ, ವೀಡಿಯೋ, ಕಿಯೋನಿಕ್ಸ್ ಮೊದಲಾದ ಆಧುನಿಕ ವ್ಯವಸ್ಥೆಗಳು ಪ್ರವಾಸಿಗರಿಗೆ ಅಲಭ್ಯವಾಗಿದೆ. ಇತ್ತೀಚೆಗೆ ಆಯೋಜಿಸಿದ್ದ ನೆರಳು ಬೆಳಕಿನ ಕಾರ್ಯಕ್ರಮ ಈಗ ಮಾಯವಾಗಿದೆ. ಇದರ ವಿದ್ಯುತ್ ತಂತಿಗಳು ಎಲ್ಲೆಲ್ಲಿಯೂ ಯಮಪಾಶವಾಗಿ ಬಿದ್ದಿವೆ.

**೭ ಬ್ಯಾಟರಿ ವಾಹನಗಳಿಂದ ಪ್ರವಾಸಿಗರ ಶೋಷಣೆ :** ವಿಜಯ ವಿಠ್ಠಲ ದೇವಾಲಯಕ್ಕೆ ಹೋಗಲು ಅಲ್ಲಿಂದ ೧ ಕಿ.ಮೀ. ಈಚೆ ಪ್ರವಾಸಿಗರ ವಾಹನ ತಡೆದು ನಿಲ್ಲಿಸುತ್ತಾರೆ. ಅಲ್ಲಿಂದ ಪ್ರಾಧಿಕಾರದವರು ವಾಯುಮಾಲಿನ್ಯದ ನೆಪದಲ್ಲಿ ಆಯೋಜಿಸಿರುವ ಬ್ಯಾಟರಿ ವಾಹನದಲ್ಲಿ ಪ್ರತಿ ವ್ಯಕ್ತಿಗೆ ರೂ. ೨೦ ಹಣ ತೆತ್ತು ಹೋಗಬೇಕು. ನಮ್ಮ ವಾಹನ ಬಿಡದಿದ್ದಕ್ಕೆ ಕಾರಣ ಕೇಳಲಾಗಿ ಮುಂದೆ ಅಮೂಲ್ಯ ಶಿಲ್ಪಕಲೆ ಸ್ಮಾರಕಗಳು ಇವೆ. ಅದರಲ್ಲಿ ವಿಜಯವಿಠ್ಠಲ ದೇವಾಲಯ, ನರ್ತನ ಸಭಾಮಂಟಪ, ಕಲ್ಲಿನ ತೇರು, ಇವುಗಳಿಗೆ ಪೆಟ್ರೋಲ್ ಹೊಗೆ ಮಾಲಿನ್ಯದಿಂದ ಶಿಲೆಗಳು ಹಾಳಾಗಿವೆ. ಆದ್ದರಿಂದ ಬ್ಯಾಟರಿ ಚಾಲಿತ ವಾಹನಗಳು ಇಲಾಖೆಯವರು ಮಾಡಿದ್ದಾರೆ ಎನ್ನುತ್ತಾರೆ. ಸ್ಥಳೀಯರು ಅವರು ನಿಗದಿಮಾಡಿದ ವಾಹನದಲ್ಲೇ ಹೊರಟರೆ ಕಲ್ಲು ಮಣ್ಣುಗಳಿಂದ ಕೂಡಿದ ಮಣ್ಣಿನ ರಸ್ತೆ ಧೂಳುಮಯ ಇದರ ಬಾಜು ಇರುವ ಪುರಂದರದಾಸರ ಮಂಟಪ ಇಲ್ಲಿಗೆ ಕಾಲ್ನಡಿಗೆಯಲ್ಲಿ ಹೋಗಬೇಕು ರಸ್ತೆ ನೀರು ಹರಿದು ಕೊರಕಲು ಕಾಲುಜಾರಿ ಬಿದ್ದರೆ ಕೈ ಮುರಿತ ಗ್ಯಾರಂಟಿ ಎಂದು ಜನ ತಿಳಿಸುತ್ತಾರೆ.

**೮ ಪ್ರವಾಸ್ಯೋದ್ಯಮ ಇಲಾಖೆಯಲ್ಲಿ ಸ್ಥಿರತೆ ಹಾಗೂ ನಿರಂತರತೆ ಮಾಯವಾಗಿದೆ :** ಕರ್ನಾಟಕ ರಾಜ್ಯದ ಅಕ್ಕ ಪಕ್ಕದ ತಮಿಳುನಾಡು ಮತ್ತು ಕೇರಳ ರಾಜ್ಯಗಳಲ್ಲಿನ ಪ್ರವಾಸೋದ್ಯಮ ಆಡಳಿತದಲ್ಲಿ ನಿರಂತರತೆ ನೆಲೆಗೊಂಡಿದೆ. ಹಂಪಿಯಲ್ಲಿರುವ ಕಚೇರಿಯಲ್ಲಿ ಮತ್ತು ಅದರ ಕೇಂದ್ರ ಕಚೇರಿಯಲ್ಲಿ ಪ್ರತಿ ೦೬-೦೮ ತಿಂಗಳಿಗೊಮ್ಮೆ ಅಧಿಕಾರಿಗಳ ಬದಲಾವಣೆ ಸಾಮಾನ್ಯವಾಗಿದೆ. ಇಂತಹ ಕ್ರಮವು ಇಲಾಖೆಯ ಬಗ್ಗೆ ನಿರ್ಲಿಪ್ತತೆಯನ್ನು ಹುಟ್ಟುಹಾಕುತ್ತದೆ. ಇಲಾಖೆಯ ಕಾರ್ಯವೈಖರಿ ಮತ್ತು ಸ್ವರೂಪವನ್ನು ಅಧಿಕಾರಿಗಳು ತಿಳಿದುಕೊಳ್ಳುವುದರಲ್ಲಿ ಅವರನ್ನು ಬೇರೆಡೆಗೆ ವರ್ಗಾಯಿಸಿ ಆದೇಶ ಅಧಿಕಾರಿಗಳ ಕೈಸೇರುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಯಾವುದೇ ಅಧಿಕಾರಿ ತಮ್ಮನ್ನು ತಾವು ಇಲಾಖೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಲು ಕೇವಲ ಕಾಲಹರಣ ಮಾಡುವುದರಲ್ಲಿ ದಿನಗಳನ್ನು ಎಣಿಸುತ್ತಾರೆ ಎಂಬ

ಆಪಾದನೆ ಇದೆ. ನಮ್ಮ ರಾಜ್ಯದಲ್ಲಿ ಅಪರೂಪದ ಕೆಲವು ಪ್ರವಾಸಿ ತಾಣಗಳಿವೆ. ಕೇರಳ ಮತ್ತು ತಮಿಳುನಾಡು ರಾಜ್ಯಗಳಿಗಿಂತ ಉದ್ದವಾದ ಮತ್ತು ಸುಂದರವಾದ ಕರಾವಳಿ ತೀರ ನಮ್ಮಲ್ಲಿದ್ದರೂ ಕೇರಳ ಮತ್ತು ತಮಿಳುನಾಡು ರಾಜ್ಯಗಳು ಪ್ರವಾಸಿಗರನ್ನು ಸೆಳೆಯುವಲ್ಲಿ ನಮಗಿಂತಲೂ ಮುಂದಿದ್ದಾರೆ.

**೯ ಪ್ರವಾಸೋದ್ಯಮ ಇಲಾಖೆಯ ಪುನರ್ ಚೇತನದ ಅವಶ್ಯಕತೆ :** ಈ ಪ್ರವಾಸೋದ್ಯಮ ಕ್ಷೇತ್ರ ಬಹುಮುಖ ಸ್ವರೂಪವನ್ನು ಮೈಗೂಡಿಸಿಕೊಂಡಿದೆ. ಪ್ರವಾಸಿತಾಣಗಳ ವೀಕ್ಷಣೆಯ ಜೊತೆಗೆ ಪರಿಸರ ಪ್ರೇಮಿಗಳು ಈ ಭಾಗದ ಪರಿಸರವನ್ನು ಆಸ್ವಾದಿಸಲು ಬರುವವರಿದ್ದಾರೆ. ಸಾಹಸಿ ಮನೋಭಾವನೆಯುಳ್ಳವರು ಚಾರಣ ಕೈಗೊಳ್ಳುವರು ಮತ್ತೆ ಕೆಲವರು ವನ್ಯಜೀವಿಗಳ ವೀಕ್ಷಣೆ ಮತ್ತು ಅಧ್ಯಯನ ಗಿಡಮೂಲಿಕೆಗಳನ್ನು ಸಂಗ್ರಹಿಸುವ ಪಾರಂಪರಿಕ ವೈದ್ಯರು, ಛಾಯಾಚಿತ್ರಕಾರರು, ಬರಹಗಾರರು, ಇತಿಹಾಸಕಾರರು, ಚಲನಚಿತ್ರ ತಂಡಗಳು ಸೇರಿದಂತೆ ಅನೇಕರಿಗೆ ಪ್ರೇರಣೆಯ ತಾಣವಾಗಿ ಹಂಪಿಯ ಪ್ರವಾಸೋದ್ಯಮ ನೀಡಲು ಸಾಧ್ಯವಿದೆ. ಈ ಹಿನ್ನೆಲೆಯಲ್ಲಿ ಬೇರೆ ಬೇರೆ ಇಲಾಖೆಗಳನ್ನು ಒಗ್ಗೂಡಿಸಿ ಸಮನ್ವಯ ಸಾಧಿಸಲು ಸಾಧ್ಯವಾದರೆ ಪ್ರವಾಸೋದ್ಯಮ ಇಲಾಖೆ ಪರಿಪೂರ್ಣಗೊಳ್ಳುವುದರಲ್ಲಿ ಸಂದೇಹವಿಲ್ಲ.

**೧೦ ಮೌಲ್ಯ ಕಳೆದುಕೊಂಡ ಹಂಪಿ ಉತ್ಸವ :** ನಮ್ಮ ರಾಜ್ಯದಲ್ಲಿ ನಡೆಯುವ ಮೈಸೂರಿನ ದಸರಾ ವಿಶ್ವವಿಖ್ಯಾತಿಯನ್ನು ಪಡೆದಿದೆ. ಜಂಬೂಸವಾರಿಯನ್ನು ವೀಕ್ಷಿಸಲು ದೇಶವಿದೇಶಗಳಿಂದ ಲಕ್ಷಾಂತರ ಜನರು ದಸರಾ ಉತ್ಸವಕ್ಕೆ ಆಗಮಿಸುವ ಉತ್ಸವದ ಮೆರಗನ್ನು ಕಣ್ತುಂಬಿಕೊಳ್ಳುವುದು ಇತಿಹಾಸ. ಇದೇ ಮಾರ್ಗದಲ್ಲಿ ಹಂಪಿ ಉತ್ಸವವನ್ನು ದಿವಂಗತ ಎಂ.ಪಿ ಪ್ರಕಾಶರು ಮಹತ್ವಾಕಾಂಕ್ಷೆಯೊಂದಿಗೆ ಆರಂಭಿಸಿದರು. ಅದಕ್ಕಾಗಿ ನಿಗದಿತ ದಿನಾಂಕವನ್ನು ನಿಗದಿಪಡಿಸಿ ದೇಶ–ವಿದೇಶಗಳಿಂದ ಕಲಾ ತಂಡಗಳನ್ನು ಆಹ್ವಾನಿಸಿ ಶ್ರೀಮಂತಿಕೆಯ ತಳಪಾಯವನ್ನು ಒದಗಿಸಿದ್ದರು. ಇದರಿಂದ ಪ್ರವಾಸೋದ್ಯಮವೂ ಸಾಕಷ್ಟು ಅಭಿವೃದ್ಧಿ ಕಂಡಿತ್ತು. ಆದರೆ ಕ್ರಮೇಣ ಬದಲಾದ ರಾಜಕೀಯ ಸ್ಥಿತ್ಯಂತರಗಳಿಂದ ಹಂಪಿ ಉತ್ಸವ ಮೂಲೆಗುಂಪಾಗಲು ಕಾರಣವಾಯಿತು. ಎಂ.ಪಿ.ಪ್ರಕಾಶರು ನಿಗದಿಗೊಳಿಸಿದ ದಿನಾಂಕಗಳನ್ನು ಬದಲಾಯಿಸಲಾಯಿತು. ಕೇವಲ ಹಣದ ಬಲದಿಂದಲೇ ರಾಜಕೀಯಕ್ಕೆ ಬಂದ ಜಿಲ್ಲೆಯ ರಾಜಕೀಯ ನಾಯಕರು ಹಂಪಿ ಉತ್ಸವದ ಹಿನ್ನೆಲೆ ಅರಿಯದೆ ರಾಜಕೀಯ ದೊಂಬರಾಟಕ್ಕೆ ಬಲಿ ಕೊಟ್ಟಿದ್ದು ಒಂದು ದೊಡ್ಡ ದುರಂತ. ಇದೇ ಧಾಟಿಯಲ್ಲಿ ಕೆಲವು ಅಧಿಕಾರಿಗಳು ಉತ್ಸವವನ್ನು ಜನಸಾಮಾನ್ಯರ ಉತ್ಸವವನ್ನಾಗಿ ಮಾಡಿದರು. ಪರಿಣಾಮ ಸ್ಥಳೀಯ

ವ್ಯಾಪಾರಿಗಳು ಮತ್ತು ಜನರ ಮೇಲೆ ಉಂಟಾಗುತ್ತಿರುವ ಜನಜೀವನದ ಮೇಲೆ ಪರಿಣಾಮ ಬೀರಿತು.

ಪರಂಪರೆಯನ್ನು ಪ್ರತಿಬಿಂಬಿಸಬೇಕಾದ ಹಂಪಿ ಉತ್ಸವ ಕೇವಲ ವೈಯಕ್ತಿಕ ಪ್ರತಿಷ್ಠೆಗಳಿಗೆ ಉತ್ಸವಗಳು ಬಲಿಯಾಗುತ್ತಿರುವುದು ವಿಷಾದನೀಯ. ಇನ್ನು ಮುಂದಾದರೂ ಘನಸರ್ಕಾರಗಳು ಸಂಸ್ಕೃತಿ ಮತ್ತು ಪರಂಪರೆ ಬಿಂಬಿಸಬೇಕು ಉತ್ಸವಗಳ ಬಗ್ಗೆ ಒಂದು ಸ್ಪಷ್ಟ ನಿರ್ಧಾರ ಕೈಗೊಳ್ಳುವುದು ಅವಶ್ಯಕ. ಯಾವುದೇ ಪಕ್ಷ ಅಧಿಕಾರಕ್ಕೆ ಬಂದರೂ ಸಂಸ್ಕೃತಿ ಬಿಂಬಿಸುವ ಕಲೆ, ಸಾಹಿತ್ಯ, ಜಾತ್ರೆ ಇತ್ಯಾದಿಗಳು ಸರ್ಕಾರದ ಕಾರ್ಯಚಟುವಟಿಕೆಯಾದಾಗ ಮಾತ್ರ ಮುಂದಿನ ಜನಾಂಗಕ್ಕೆ ಬಳುವಳಿಯಾಗಿ ರೂಪಗೊಳ್ಳಲು ಹಾಗೂ ಬೆಳೆದು ಬರಲು ಸಾಧ್ಯವಾಗುತ್ತದೆ. ಹಂಪಿಯ ಪ್ರವಾಸೋದ್ಯಮದ ಅಭಿವೃದ್ಧಿಗಾಗಿ ನಿರಂತರತೆ ಅಥವಾ ಇಚ್ಛಾಶಕ್ತಿ ಒಬ್ಬ ಯುವ ಉತ್ಸಾಹಿ ಮತ್ತು ಸಂಪೂರ್ಣ ಮಾಹಿತಿಯುಳ್ಳ ಉನ್ನತಾಧಿಕಾರಿಯನ್ನು ಪ್ರತ್ಯೇಕವಾಗಿ ನೇಮಿಸಿ ಅವರಿಗೆ ಕನಿಷ್ಠ ಐದು ವರ್ಷಗಳ ಕಾಲ ಅವರ ಸುಪರ್ಧಿಗೆ ಸ್ಥಳೀಯ ಇಲಾಖೆಯನ್ನು ಒಪ್ಪಿಸಬೇಕು. ಆ ಅಧಿಕಾರಿ ಇಲ್ಲಿನ ಎಲ್ಲಾ ಪ್ರವಾಸಿ ತಾಣಗಳ ಗುರುತಿಸುವಿಕೆ ಮತ್ತು ಅವುಗಳ ಸಂರಕ್ಷಣೆ ಹಾಗೂ ಅಭಿವೃದ್ಧಿ ಮಾಡುವುದಾದರೆ ಇಲ್ಲಿನ ಪ್ರವಾಸೋದ್ಯಮದ ಆಶಯಗಳು ಈಡೇರಬಲ್ಲವು ಇಲ್ಲಿನ ಸ್ಥಳೀಯ ಪ್ರವಾಸೋದ್ಯಮ ಇಲಾಖೆಗೂ ಒಂದು ವಾಣಿಜ್ಯ ಯೋಜನೆ ರೂಪಿಸಬೇಕು. ಇದರಲ್ಲಿ ದೂರದೃಷ್ಟಿಯುಳ್ಳ ಕಾರ್ಯಯೋಜನೆಗಳಿಗೆ ಆದ್ಯತೆ ನೀಡುವುದಾದರೆ ಪ್ರವಾಸಿ ಕ್ಷೇತ್ರಗಳ ಅಭಿವೃದ್ಧಿಯ ಜೊತೆಗೆ ಚಿಕ್ಕ ಪುಟ್ಟ ತಾಣಗಳಿಗೂ ಮರುಜೀವ ಲಭಿಸಲು ಸಾಧ್ಯವಾಗುತ್ತದೆ. ವಿಶ್ವದೆಲ್ಲೆಡೆ ಇರುವಂತೆ ರಾಜ್ಯದಲ್ಲೂ ಒಂದು ಪ್ರತ್ಯೇಕ ಪ್ರವಾಸೋದ್ಯಮ ಮಂಡಳಿ ರಚನೆಯಾಗಬೇಕು. ಈ ಮಂಡಳಿಯಲ್ಲಿ ಮುಖ್ಯಮಂತ್ರಿ ಸೇರಿದಂತೆ ಸಾಹಿತ್ಯ, ಸಂಸ್ಕೃತಿ, ಉದ್ಯಮ ಪರಂಪರೆ ಕ್ಷೇತ್ರಗಳ ಪ್ರತಿನಿಧಿಗಳು ಒಗ್ಗೂಡಿ ಕೆಲಸ ಮಾಡುವಂತಾದರೆ ಇಲಾಖೆಯ ಪರಿಪೂರ್ಣಗೊಳ್ಳಲು ಸಾಧ್ಯವಾಗುತ್ತದೆ.[೮೭]

ಸರ್ಕಾರ ಅದನ್ನು ನಿರ್ವಹಿಸುವ ಅಧಿಕಾರಿವರ್ಗ, ಅಭಿಮಾನ ಮತ್ತು ಪ್ರಮಾಣಿಕತೆಯಿಂದ ಉತ್ಸವದ ಕಾರ್ಯ ರೂಪಿಸಿದರೆ ನಿಜವಾಗಿ ಸಾರ್ಥಕವಾಗುತ್ತದೆ ಅಲ್ಲದೆ ಉತ್ಸವದ ಮೂರು ದಿನಗಳ ಕಾಲಾವಧಿಯಲ್ಲಿ ರಾಜ್ಯದ ಎಲ್ಲಾ ನೌಕರರ ವರ್ಗದವರಿಗೆ ರಜಾ ಸೌಲಭ್ಯವನ್ನು ಸರ್ಕಾರ ಒದಗಿಸಬೇಕು.[೮೮] ಇಲ್ಲವಾದಲ್ಲೂ ಕನಿಷ್ಠ ಸ್ಥಳೀಯ ಜಿಲ್ಲೆಗಾದರು ರಜೆ ನೀಡಿದರೆ ಹೆಚ್ಚಿನ ಜನ ಭಾಗವಹಿಸಲು ಸಾಧ್ಯವಾಗಬಹುದು. ಉತ್ಸವದ ಬಗೆಗೆ ರಾಜ್ಯ ಮತ್ತು

ವಿದೇಶಗಳಲ್ಲಿ ಇನ್ನೂ ಹೆಚ್ಚಿನ ಪ್ರಚಾರ ಕೈಗೊಳ್ಳಬೇಕು ಜನರು ಆ ಸಂದರ್ಭದಲ್ಲಿ ನಡೆಯುವ ಕಾರ್ಯ ಸಮಾರಂಭಗಳಲ್ಲಿ ದೊಡ್ಡ ಸಂಖ್ಯೆಯಲ್ಲಿ ಸಂತೋಷದಿಂದ ಪಾಲ್ಗೊಳ್ಳುವಂತೆ ಮಾಡಬೇಕು. ಮುಖ್ಯವಾಗಿ ಉತ್ಸವದಲ್ಲಿ ಸ್ಥಳೀಯ ಹಾಗೂ ಸಹಕಾರಿ ಸಂಸ್ಥೆಗಳನ್ನು ಒಳಗು ಮಾಡಿಕೊಂಡು ಉತ್ಸವದ ಜನಪ್ರಿಯತೆಯನ್ನು ಹೆಚ್ಚಿಸುವುದು ಅವಶ್ಯಕ.

**೧೩. ಅಂತಾರಾಷ್ಟ್ರೀಯ ಮಟ್ಟದ ಕೇಂದ್ರ ಕಛೇರಿ ಕೊರತೆ** : ಹಂಪಿಯ ಸ್ಮಾರಕಗಳ ಸಂರಕ್ಷಣೆ ಮತ್ತು ಜೀರ್ಣೋದ್ಧಾರಗಳ ಕಾರ್ಯಗಳಿಗೆ ಸ್ಥಾಪಿಸಲ್ಪಟ್ಟ ಹಂಪಿಯ ಪ್ರಾಧಿಕಾರದ ಹಾಗೆಯೇ ವಿಶ್ವಸಂಸ್ಥೆಯ ಅನುಮತಿಯೊಂದಿಗೆ ಅಂತರಾಷ್ಟ್ರೀಯ ಮಟ್ಟದ ಪ್ರವಾಸೋದ್ಯಮ ಕೇಂದ್ರ ಕಚೇರಿಯನ್ನು ಸ್ಥಾಪಿಸಬೇಕು. ಇದರ ಕೊರತೆ ಹಂಪಿಯಲ್ಲಿದೆ. ಇದಕ್ಕೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಪ್ರಯತ್ನ ಮಾಡಬೇಕು. ರಾಜ್ಯದ ಪ್ರವಾಸೋದ್ಯಮ ಚಟುವಟಿಕೆಗಳ ಕುರಿತು ಇಲಾಖೆಗಳನ್ನು ರಾಜ್ಯದ ಹೃದಯ ಭಾಗವಾದ ಹಂಪಿಯಲ್ಲಿ ಸ್ಥಾಪಿಸುವುದು ಸೂಕ್ತ. ಸ್ಥಾಪಿಸಿದ ಇಲಾಖೆಗೆ ಹಂಪಿಯ ಸ್ಮಾರಕಗಳ ವೈಜ್ಞಾನಿಕ ನಿರ್ವಹಣೆಯ ಕೆಲಸಕಾರ್ಯಗಳ ಜವಾಬ್ದಾರಿಯನ್ನು ನೀಡುವುದರ ಮೂಲಕ ಪ್ರವಾಸಿಗರ ಆಕರ್ಷಣೆಗೆ ಒತ್ತು ನೀಡಬೇಕು.

ಇವುಗಳ ಜೊತೆಗೆ ಇನ್ನೂ ಕೆಲ ಕೊರತೆಗಳಿವೆ. ವಿರೂಪಾಕ್ಷ ದೇವಾಲಯ ತುಂಬೆಲ್ಲಾ ಮಂಗಗಳ ಹಾವಳಿ ಹೆಚ್ಚಿದೆ. ಇಲ್ಲಿ ಬಲವಿದ್ದರೆ ಮಂಗಳಾರತಿ ಇಲ್ಲವಾದರೆ ಮಂಗಗಳಿಗೆ ತೆಂಗು ಬಾಳೆಹಣ್ಣು ಕೊಟ್ಟು ಕೈ ಮುಗಿಬೇಕು. ಗರ್ಭಗುಡಿಯ ದೇವರನ್ನು ಛಾಯಾಚಿತ್ರ ತೆಗೆಯುವಂತಿಲ್ಲ ಬೆಚ್ಚಗೆ ಮಾಡಿದರೆ ಎಲ್ಲಾ ಸಾಧ್ಯ ಎನ್ನುವ ಅನುಭವ ಹಂಪಿಯಲ್ಲಿ ವಾಸ್ತವ. ಇತಿಹಾಸ ತಿಳಿದಿರುವ ಮತ್ತು ಭಾಷಾ ಪ್ರಾವೀಣ್ಯತೆ ಇರುವ ಮಾರ್ಗದರ್ಶಿಗಳ ಅವಶ್ಯಕತೆ ಇದೆ. ರಾಷ್ಟ್ರೀಯ ಹೆದ್ದಾರಿ ನವೀಕರಣ ಹಂಪಿಯ ರಸ್ತೆಗಳು ಅಗಲೀಕರಣ ಮತ್ತು ಕಾಂಕ್ರೀಟ್ ವ್ಯವಸ್ಥೆ, ಮಾಹಿತಿ ವಿಚಾರಣೆ, ಕಚೇರಿ ಸ್ಥಾಪನೆ, ಗ್ರಾಮಪಂಚಾಯಿತಿ ಮತ್ತು ಸ್ಥಳೀಯ ಕಚೇರಿಗಳ ಅಕ್ರಮ ವಸೂಲಿಯ ತಡೆ, ನಿಧಿಗಳ್ಳರ ನಿಗ್ರಹ ಮಾಡಿ ಉತ್ತಮ ಶೌಚಾಲಯಗಳ ವ್ಯವಸ್ಥೆ ಮಾಡಿದಲ್ಲಿ ಮಾತ್ರ ಹಂಪಿಯನ್ನು ವಿಶ್ವಪರಂಪರೆ ಎಂದು ಗುರುತಿಸಬಹುದು ಆಗ ಮಾತ್ರ ಹಂಪಿಯ ಪ್ರವಾಸೋದ್ಯಮದ ಹಿನ್ನೆಲೆಯಲ್ಲಿ ಸಮಸ್ಯೆಗಳು ಕಡಿಮೆ ಯಾಗಲು ಸಾಧ್ಯ.

ಕ್ರಿ.ಶ. ೧೪ ರಿಂದ ೧೬ನೇ ಶತಮಾನದವರೆಗೆ ಅಸ್ತಿತ್ವದಲ್ಲಿದ್ದ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಹಂಪಿ ನಯನ ಮನೋಹರವಾದ ಸಹಜ ಸುಂದರ ವಿನ್ಯಾಸದಿಂದಾಗಿ ದೊಡ್ಡ ದೊಡ್ಡ ಕಲ್ಲು ಬಂಡೆಗಳಿಂದ ಸುತ್ತುವರೆದಿರುವ ಭೂ ದೃಶ್ಯಗಳಿಂದಾಗಿ ವಿಸ್ತಾರವಾಗಿ ಕಾಣಬರುವ ಪ್ರಾಕೃತಿಕ ಅವಶೇಷಗಳಿಂದಾಗಿ ತಿರುವು ಮರುವಿನ ತುಂಗಭದ್ರ

ನದಿಯಿಂದಾಗಿ ಈ ಭೂಮಂಡಲದಲ್ಲಿರುವ ಅತ್ಯಂತ ಮಹೋನ್ನತ ಪ್ರೇಕ್ಷಣೀಯ ಸ್ಥಳಗಳಲ್ಲಿ ಒಂದು ಎನ್ನುವುದರಲ್ಲಿ ಎರಡು ಮಾತೇ ಇಲ್ಲ. ೧೯೮೨ರಲ್ಲಿ ಹಂಪಿಯನ್ನು ವಿಶ್ವಪರಂಪರೆ ಸ್ಥಳವೆಂದು ದಾಖಲಾಗಲು ಸೂಚಿಸಲಾಯಿತು. ಆದರೆ ೧೯೮೬ರಲ್ಲಿ ಹಂಪಿ ವಿಶ್ವಪರಂಪರೆಯ ಸ್ಥಳವೆಂದು ದಾಖಲಾಯಿತು. ಈ ತರುವಾಯ ೧೯೯೯ರಲ್ಲಿ ಎರಡು ಸೇತುವೆಗಳನ್ನು ನಿರ್ಮಿಸಿದ್ದರಿಂದಾಗಿ ನುಂಗಲಾರದ ತುತ್ತಾಗಿ ಪರಿಣಮಿಸಿತು. ವಿನಾಶದ ಅಂಚಿನಲ್ಲಿರುವ ಪಟ್ಟಿಗೆ ಸೇರಿಸಲಾಯಿತು. ಈಗ ಒಂದು ಸೇತುವೆಯನ್ನು ಒಡೆದು ಹಾಕಲಾಗಿದೆ ಎರಡೂ ಬದಿಗಳಿಗೂ ಸಂಪರ್ಕ ಕಲ್ಪಿಸುವಂತೆ ಇನ್ನೊಂದು ಸೇತುವೆಯ ನಿರ್ಮಾಣಕ್ಕೆ ವಿಶ್ವಪರಂಪರೆ ಕೇಂದ್ರದ ಒಪ್ಪಿಗೆಯನ್ನು ನಿರೀಕ್ಷಿಸಲಾಗಿತ್ತು. ಆದರೆ ಒಪ್ಪಿಗೆ ದೊರೆಯಲಿಲ್ಲ. ಆ ಸೇತುವೆಯು ಸ್ಥಳೀಯ ಜನರ ಸಂಚಾರಕ್ಕಾಗಿ ಮಾತ್ರ ಇರುತ್ತದೆಂದು ಖಾತ್ರಿಪಡಿಸುವಂತಹ ವಿಧಿಬದ್ಧ ವಿವರಣೆ ದಾಖಲೆಯನ್ನು ವಿಶ್ವಪರಂಪರೆ ಕೇಂದ್ರಕ್ಕೆ ಸಲ್ಲಿಸಲಾಯಿತಾದರೂ ನಂತರದ ದಿನಗಳಲ್ಲಿ ಸೇತುವೆ ಮುರಿದು ಬಿದ್ದಿತ್ತು. ಅಲ್ಲದೆ ಅಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರು ಸಾವನ್ನಪ್ಪಿದ್ದು ಒಂದು ದುರಂತವೇ ಸರಿ.[೮೯] ಆದರೂ ಒಂದು ಕಾರ್ಯ ಕೈಗೂಡಿ ಆನೆಗುಂದಿ ಬಿಡ್ಜ್ ಎಂಬುದಾಗಿ ಸೇತುವೆ ನಿರ್ಮಾಣವಾಗಿ ಈಗ ಚಾಲ್ತಿಯಲ್ಲಿದೆ.

ಪ್ರವಾಸೋದ್ಯಮ ಮತ್ತು ಸಾರಿಗೆ Project ಗಳು ತೆಗೆದುಕೊಂಡ ಅತ್ಯಂತ ಉನ್ನತ ಮಟ್ಟದ ಕ್ರಮಗಳಿಂದ ಗೊಂದಲ, ಬಿಕ್ಕಟ್ಟುಗಳು ಹೆಚ್ಚಾಗಿ ಅಂತರ ಕಡಿಮೆಯಾಗಲಿಲ್ಲ. ಹಂಪಿಯ ಸಾಂಸ್ಕೃತಿಕ ಅಂತಃ ಸತ್ವ, ಮಹತ್ವವನ್ನು ವಿಶ್ವಕ್ಕೆ, ರಾಷ್ಟ್ರಕ್ಕೆ, ರಾಜ್ಯಕ್ಕೆ ಹಾಗೂ ಸ್ಥಳೀಯರಿಗೆ ಒಂದು ಸಂಪತ್ತು ಎಂದು ತಿಳಿಸುವ ಪ್ರಯತ್ನಗಳು ನಡೆದವು. ಈ ತಾಣದ ಬಗ್ಗೆ ಅಂತರಾಷ್ಟ್ರೀಯ ಮಟ್ಟದಲ್ಲಿ ಚರ್ಚೆಗಳು ನಡೆದವು. ವಿಶ್ವಪರಂಪರೆ ಸಂಸ್ಥೆಯು ಹಂಪಿ ಪ್ರಾಧಿಕಾರ ಮತ್ತು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯನ್ನು ಪದೇ ಪದೇ ಹಂಪಿಯ ಕುರಿತು ಭೂಪಟಗಳನ್ನು ಕೇಳಿತು.ಆದರೆ ಸಹಜವಾಗಿ ಇರುವಂತಹ ಭೂಪಟವನ್ನು ಇಲಾಖೆ ನೀಡಿತ್ತು. ವಾಸ್ತುಶಿಲ್ಪದ ದಾಖಲೆ ಸಂಗ್ರಹಣೆಯಲ್ಲಿ ಹಂಪಿಯಲ್ಲಿ ಯಾವ ಯಾವ ಸ್ಥಳದಲ್ಲಿ ರಚನೆಗಳಿವೆ ಎಂಬ ಬಗ್ಗೆ ವಿವರಣೆಯನ್ನು ಕೇಳಿತ್ತು. ಪ್ರಮುಖ ದೇವಾಲಯದ ರಥ ಬೀದಿಯಲ್ಲಿ ಜನವಸತಿ ಮತ್ತು ಅಂಗಡಿ ಮುಂಗಟ್ಟುಗಳ ಬಗ್ಗೆ ಪ್ರಶ್ನೆ ಬಂದಾಗ ಸರ್ಕಾರವು ಅವುಗಳನ್ನು ತೆರವು ಗೊಳಿಸುವ ಭರವಸೆಯನ್ನು ನೀಡಿತ್ತು. ಈ ಮುಂಚೆ ಹೇಗೆ ಹಂಪಿ ಇತ್ತೋ ಅದೇ ರೀತಿಯಲ್ಲಿ ಉಳಿಸಿಕೊಳ್ಳುವ ಬಗ್ಗೆ ಯುನೆಸ್ಕೋಗೆ ತಿಳಿಸಿತು. ಹಾಗಾಗಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯು ಹಂಪಿಯ ಮುಖ್ಯ ಬೀದಿಯ

ಮಂಟಪಗಳಲ್ಲಿ ಆಕ್ರಮಿಸಿಕೊಂಡಿದ್ದ ಅಂಗಡಿ ಮುಂಗಟ್ಟುಗಳನ್ನು ೨೦೧೧ ಆಗಸ್ಟ್ ತಿಂಗಳಲ್ಲಿ ತೆರವುಗೊಳಿಸಿತು. ಇದರಿಂದ ವ್ಯಾಪಾರಿಗಳು ಮತ್ತು ಸ್ಥಳೀಯ ನಿವಾಸಿಗಳು ಬೀದಿಗೆ ಬಿದ್ದಿದ್ದರು, ಕರ್ನಾಟಕ ಹೈಕೋರ್ಟ್ ನಿರ್ದೇಶನದ ಮೇರೆಗೆ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಇವರಿಗೆ ವಸತಿ ಸೌಕರ್ಯ ಕಲ್ಪಿಸಲು ಮುಂದಾಗಿದೆ. ಪ್ರವಾಸಿಗರಿಗೆ ಅಗತ್ಯವಾಗಿದ್ದ ವಸ್ತುಗಳನ್ನು ಖರೀದಿಸಲು ಅಂಗಡಿಗಳು ಇಲ್ಲದಂತಾದ ವ್ಯಾಪಾರಿಗಳ ಹಿತವನ್ನು ಕಾಪಾಡುವ ದೃಷ್ಟಿಯಿಂದ ಇಲಾಖೆಯು ಕಡ್ಡಿರಾಂಪುರದ ಶಾಪಿಂಗ್ ಕಾಂಪ್ಲೆಕ್ಸ್‌ಗಳನ್ನು ನಿರ್ಮಿಸುತ್ತಿದೆ.[೯೦] ಆದರೆ ಇದು ಪ್ರವಾಸೋದ್ಯಮದ ಮೇಲೆ ಇದರ ನೇರ ಪರಿಣಾಮ ಬೀರಿದ್ದು ಈ ಕ್ಷೇತ್ರದ ಹಿನ್ನೆಡೆಗೆ ಕಾರಣವಾಗಿರುವುದನ್ನು ಗುರುತಿಸಬಹುದು, ಒಂದು ದೇಶದ ಪ್ರಾಚೀನತೆಯನ್ನು ಪ್ರತಿಬಿಂಬಿಸುವಲ್ಲಿ ಹಂಪಿಯ ಪಾತ್ರ ಮಹತ್ತರವಾದುದು. ಇದು ವಿಶ್ವಪರಂಪರೆಯ ಪಟ್ಟಿಯಲ್ಲಿರುವುದು ನಾಡಿಗೆ ಹೆಮ್ಮೆಯ ಸಂಗತಿಯಾಗಿದೆ. ಈ ಹಿನ್ನೆಲೆಯಲ್ಲಿ ಸರ್ಕಾರಗಳು ಮತ್ತು ಸಾರ್ವಜನಿಕರು ಅದರ ಉಳಿವಿಗಾಗಿ ಸೂಕ್ತ ಕ್ರಮಗಳನ್ನು ಕೈಗೊಳ್ಳುವ ಜರೂರಿನ ಅಗತ್ಯ ಇಂದಿನ ದಿನಮಾನಕ್ಕಿರುವುದಂತೂ ವಾಸ್ತವ ಸತ್ಯವಾಗಿದೆ.

**ಹಂಪಿಗೆ ಭೇಟಿ ನೀಡಿದ ಪ್ರವಾಸಿಗರ ಸಂಖ್ಯೆ**

| ಕ್ರಮ ಸಂಖ್ಯೆ | ವರ್ಷ | ಪ್ರವಾಸಿಗರ ಸಂಖ್ಯೆ [೯೧] |
|---|---|---|
| ೧ | ೧೯೯೬ | ೪,೮೩,೭೭೬ |
| ೨ | ೧೯೯೭ | ೪,೦೮,೯೮೮ |
| ೩ | ೧೯೯೮ | ೩,೨೦,೫೪೦ |
| ೪ | ೧೯೯೯ | ೨,೮೬,೪೬೮ |
| ೫ | ೨೦೦೦ | ೨,೪೮,೪೮೯ |
| ೬ | ೨೦೦೧ | ೧,೯೧,೩೯೦ |
| ೭ | ೨೦೦೨-೦೩ | ೨,೯೬,೨೩೨ |
| ೮ | ೨೦೦೪-೦೫ | ೩,೧೮,೦೨೭ |
| ೯ | ೨೦೦೬ | ೩,೯೯,೦೬೪ |
| ೧೦ | ೨೦೦೭ | ೨,೮೦,೦೬೦ |

೨೦೦೮ ರಿಂದ ೨೦೧೩ ರವರೆಗೆ ಲಭ್ಯವಿಲ್ಲ[೨]

| | | |
|---|---|---|
| ೧೧ | ೨೦೧೪ | ೨,೦೦,೩೪೬ |
| ೧೨ | ೨೦೧೫ | ೨,೫೬,೮೧೫[೩] |
| ೧೩ | ೨೦೧೬ | ೨,೫೯,೭೬೩ |
| ೧೪ | ೨೦೧೭ | ೨,೪೫,೮೦೦ |
| ೧೫ | ೨೦೧೮ | ೧,೫೧,೮೪೦<br>ಜನವರಿಯಿಂದ ಜುಲೈ ವರೆಗೆ |

**ಕೊನೆ ಟಿಪ್ಪಣಿಗಳು**

೧. ದಿವಾಕರ ಆರ್. ಆರ್,. (ಸಂ.), ೧೯೯೬, ಕರ್ನಾಟಕ ಪರಂಪರೆ, ಸಂಪುಟ-೧, ಪು. ೧೫೮

೨. ನಾಗಪತಿ ಕೆ.ಎಸ್., ೨೦೦೨, ಪ್ರವಾಸೋದ್ಯಮ ಅಭಿವೃದ್ಧಿ ಒಂದು ಹೊಸ ಆಯಾಮ, ಪು. ೪೮

೩. www. unesco. ac.in

೪. ತಿಪ್ಪೇಸ್ವಾಮಿ ಎಚ್., ೨೦೧೦, ಹಂಪಿ ಪ್ರಾಧಿಕಾರ ವ್ಯಾಪ್ತಿಯ ಸ್ಮಾರಕಗಳ ವರದಿ -೨, ಪು. ೧೦

೫. ಅದೇ, ಪು. ೧೨

೬. ಓಂ ಶ್ರೀಗುರುಸಿದ್ದಲಿಂಗೇಶ್ವರ ಸ್ವಾಮಿಗಳು, ೧೯೮೩, ಪಂಪಾ ಮಹಾತ್ಮ, ಪು. ೨೯

೭. ಚಿದಾನಂದಮೂರ್ತಿ ಎಂ., ೨೦೧೦, ಹೊಸತು-ಹೊಸತು, ಪು. ೪೫೬

೮. ಶಿವಶಂಕರ್ ಎಂ. ಎಸ್., ಮತ್ತು ಪಾಟೀಲ ಸಿ.ಎಸ್., (ಸಂ.), ೧೯೯೮, ವಿಜಯನಗರ ಅಧ್ಯಯನ ಸಂ.೩, ಪು. ೮೯

೯. ದೇವರಕೊಂಡಾರೆಡ್ಡಿ ಮತ್ತು ಇತರರು (ಸಂ.), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ಶಾಸನ ಸಂಖ್ಯೆ ೫೫ ಪು. ೪೪-೪೫

೧೦. ಅದೇ, ಶಾಸನ ಸಂಖ್ಯೆ ೫೪, ಪು. ೪೦-೪೪

೧೧. ಅದೇ, ಶಾಸನ ಸಂಖ್ಯೆ ೫೩, ಪು. ೩೪-೪೦

೧೨. ಅದೇ, ಶಾಸನ ಸಂಖ್ಯೆ ೧೪೫ ಪು. ೧೧೭

೧೩. ಅದೇ, ಶಾಸನ ಸಂಖ್ಯೆ ೫೪, ಪು. ೪೦-೪೪

೧೪. ಅದೇ, ಶಾಸನ ಸಂಖ್ಯೆ ೫೪, ಪು. ೪೦-೪೪

೧೫. ಅದೇ, ಶಾಸನ ಸಂಖ್ಯೆ ೧೫೫, ಪು. ೧೨೨

೧೬. ಅದೇ, ಶಾಸನ ಸಂಖ್ಯೆ ೩೨೭, ಪು. ೨೪೧

೧೭. ಅದೇ, ಶಾಸನ ಸಂಖ್ಯೆ ೩೨೮, ಪು. ೨೪೨

೧೮. ಅದೇ, ಶಾಸನ ಸಂಖ್ಯೆ ೩೫೦, ಪು. ೨೫೫

೧೯. ಅದೇ, ಶಾಸನ ಸಂಖ್ಯೆ ೩೯೮, ಪು. ೨೮೪

೨೦. ಅದೇ, ಶಾಸನ ಸಂಖ್ಯೆ ೩೨೧, ಪು. ೨೩೨

೨೧. ಅದೇ, ಶಾಸನ ಸಂಖ್ಯೆ ೧೧೧, ಪು. ೯೫

೨೨. ಅದೇ, ಶಾಸನ ಸಂಖ್ಯೆ ೮೩, ಪು. ೯೩

೨೩. ಅದೇ, ಶಾಸನ ಸಂಖ್ಯೆ ೫೩, ಪು. ೩೪ ೪೦

೨೪. ಅದೇ, ಶಾಸನ ಸಂಖ್ಯೆ ೬೯, ಪು. ೬೨

೨೫. ಅದೇ, ಶಾಸನ ಸಂಖ್ಯೆ ೫೬, ಪು. ೪೬-೪೭

೨೬. ವಿವೇಕ ರೈ ಬಿ.ಎ., (ಸಂ.), ೧೯೯೮, ರಾಘವಾಂಕ, ಸಮಗ್ರಕಾವ್ಯ ಪು. ೧

೨೭. ದೇವೀರಪ್ಪ ಹೆಚ್., (ಸಂ.), ೧೯೨೪ ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ, ಪು. ೪೨೮

೨೮. ಅದೇ, ಪು. ೪೩೨

೨೯. ಅದೇ, ಪು. ೪೩೫

೩೦. ಸಂ. ಶಿ. ಭೂಸನೂರ ಮಠ (ಸಂ.), ೧೯೮೪ ಲಿಂಗಲೀಲಾ ವಿಲಾಸ ಚರಿತ್ರೆ, ಪು. ೨

೩೧. ಶಿವಮೂರ್ತಿ ಶಾಸ್ತ್ರಿ ಬಿ., (ಸಂ.), ೧೯೭೬, ಪಂಪಾಸ್ಥಾನ ವರ್ಣಕಂ, ಪು. ೧

೩೨. ಅದೇ, ಪು. ೪-೫

೩೩. ಅದೇ, ಪು. ೧೩

೩೪. ರಾಬರ್ಟ್ ಸಿವೆಲ್ (ಮೂ.), ಸದಾನಂದ ಕನವಳ್ಳಿ (ಅ.), ೧೯೯೨, ಮರೆತು ಹೋಗಿರುವ ಸಾಮ್ರಾಜ್ಯ ವಿಜಯನಗರ, ಪು. ೧೭೭

೩೫. ಅ ದೇ, ಪು. ೨೫೦-೨೫೨

೩೬. ದೇಸಾಯಿ ಪಿ.ಬಿ., ೧೯೯೩, ಕರ್ನಾಟಕ ಇತಿಹಾಸ, ಪು. ೩೭

೩೭. ಅದೇ, ಪು. ೩೯-೪೦

೩೮. ಅದೇ, ಪು. ೪೭

೩೯. ಮಹಾದೇವ ಸಿ., ಚಿನ್ನಸ್ವಾಮಿ ಸೋಸಲೆ ಎನ್., (ಸಂ.), ೨೦೦೬, ಹಂಪಿ ಅಂದು-ಇಂದು, ಪು. ೭೬-೮೩

೪೦. ವಸುಂದರಾ ಫಿಲಿಯೋಜಾ ಪ್ಯಾರಿಸ್, ಫ್ರಾನ್ಸ್, ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ, ದಿ : ೦೫-೦೭- ೨೦೦೪, ಪು. ೪ ದಿನಪತ್ರಿಕೆ

೪೧. ಪರಮೇಶ್ವರಪ್ಪ ಟಿ., (ಸಂ.), ೧೯೯೬, ಹಂಪಿ ಪರಂಪರೆ, ಲೇಖಕರು, ವಿರೂಪಾಕ್ಷಿ ಪೂಜಾರಹಳ್ಳಿ, ಲೇಖನ ಹಂಪಿ ಸ್ಮಾರಕಗಳ ರಕ್ಷಣಾ ಕಾರ್ಯಗಳು, ಕಲೆಕ್ಟರುಗಳ ಆಳ್ವಿಕೆಯಲ್ಲಿ ಪು. ೬೫

೪೨. ಅದೇ, ಪು. ೬೭

೪೩. ವಾಸುದೇವ ಬಡಿಗೇರ, (ಸ.), ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪು. ೨೧೦

೪೪. ವಾಸುದೇವನ್ ಸಿ.ಎಸ್., ೨೦೧೪, ಹಂಪಿ, ಪು. ೧೭

೪೫. St.George,1802,Political Consultation,20th March,1802 to the fort, p. 1

೪೬. Longhurts, ೧೯೮೧, Hampi Ruins, P. ೧೦೨

೪೭. JDE Gribble,1981,History of Deccon, Vol-1,p. 103

೪೮. ವಾಸುದೇವನ್ ಸಿ.ಎಸ್., ೨೦೧೪, ಪೂರ್ವೋಕ್ತ, ಪು. ೩೬

೪೯. ಪರಮೇಶ್ವರಪ್ಪ ಟಿ., (ಸಂ.), ೧೯೯೬, ಪೂರ್ವೋಕ್ತ, ಪು. ೭೦

೫೦. JDE Gribble, 1981, IbI,p. 72

೫೧. ಪರಮೇಶ್ವರಪ್ಪ ಟಿ., (ಸಂ.), ೧೯೯೬, ಪೂರ್ವೋಕ್ತ, ಪು. ೭೦

೫೨. Longhurts, ೧೯೮೧, ಪೂರ್ವೋಕ್ತ, ಪು. ೧೦೩

೫೩. ಅದೇ, ಪು. ೬೦

೫೪. ಪರಮೇಶ್ವರಪ್ಪ ಟಿ., (ಸಂ.), ೧೯೯೬, ಪೂರ್ವೋಕ್ತ, ಪು. ೭೩

೫೫. ಅದೇ, ಪು. ೭೩

೫೬. Longhurt, ೧೯೮೧, ಪೂರ್ವೋಕ್ತ, ಪು. ೮೪

೫೭. ಪರಮೇಶ್ವರಪ್ಪ ಟಿ., (ಸ.), ೧೯೯೬, ಪೂರ್ವೋಕ್ತ, ಪು. ೭೩

೫೮. Longhurt, ೧೯೮೧, ಪೂರ್ವೋಕ್ತ, ಪು. ೪೭

೫೯. ವಿರೂಪಾಕ್ಷಿ ಪೂಜಾರಹಳ್ಳಿ, ೧೯೯೫, ಬಳ್ಳಾರಿ ಜಿಲ್ಲೆಯಲ್ಲಿ ಕಲೆಕ್ಟರುಗಳು ಆಳ್ವಿಕೆ (೧೮೦೦ ೧೯೪೭) ಒಂದು ಸಮೀಕ್ಷೆ, ಪುಟ. ೯೬ (ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ)

೬೦. ಮಹಾದೇವ ಸಿ., ಚಿನ್ನಸ್ವಾಮಿ ಸೋಸಲೆ ಎನ್.,(ಸಂ.), ೨೦೦೬, ಪೂರ್ವೋಕ್ತ, ಪುಟ.ಸಂ ೭೩

೬೧. ಅದೇ, ಪುಟ.ಸಂ ೭೪

೬೨. ಕಲ್ಲಿನಲ್ಲಿ ಕಾಲುವೆಗಳನ್ನು ಕೊರೆದು ನೀರನ್ನು ಎತ್ತಲೂ ಮಾಡಿರುವ ಪದ್ಧತಿಗೆ ಎಸ್.ಕೆ ಜೋಶಿಯವರು ಸೈಪನ್ ಪದ್ಧತಿ ಎಂದಿದ್ದಾರೆ.

೬೩. ನಾಗರಾಜ್ ಎಂ. ಜಿ., ಕೃಷ್ಣಮೂರ್ತಿ ಪಿ.ವಿ.,(ಸಂ.), ೨೦೦೧, ಇತಿಹಾಸ ದರ್ಶನ ಸಂಪುಟ–೧೬ ಪು. ೧೫೩

೬೪. ಮಹದೇವ ಸಿ., ಚಿನ್ನಸ್ವಾಮಿ ಸೋಸಲೆ ಎನ್., (ಸಂ.), ೨೦೦೬, ಪೂರ್ವೋಕ್ತ, ಪು. ೩೩

೬೫. ಅದೇ, ಪು. ೩೪

೬೬. ವಿವೇಕ ರೈ ಬಿ. ಎ., (ಸ.), ೨೦೦೫, ಪ್ರವಾಸಿಕಂಡ ವಿಜಯನಗರ, ಪುಟ.ಸಂ ೫೮

೬೭. ಅದೇ, ಪು. ೯

೬೮. ಅದೇ, ಪು. ೭೬

೬೯. ಅದೇ, ಪು. ೯೨

೭೦. ಅದೇ, ಪು. ೧೦೮

೭೧. ಅದೇ, ಪು. ೬

೭೨. ಅದೇ, ಪು. ೨೨೫

೭೩. ಅದೇ, ಪು. ೨೨೬

೭೪. ಅದೇ, ಪು. ೨೨೭

೭೫. ವಿರೂಪಾಕ್ಷಿ ಪೂಜಾರಹಳ್ಳಿ, ೧೯೯೬, ವಸಾಹತುಕಾಲಿನ ಬಳ್ಳಾರಿ, ಪು. ೧೫

೭೬. ಮಹದೇವ ಸಿ., ಚಿನ್ನಸ್ವಾಮಿ ಸೋಸಲೆ ಎನ್., (ಸಂ.), ೨೦೦೬, ಪು. ೫೮

೭೭. ಜಿಲಾನ್‌ಖಾನ್ ಸಿ.ಜಿ., ೨೦೧೬, ದೇಸಿ–ವಿದೇಶಿಯರ ದೃಷ್ಟಿಯಲ್ಲಿ ಹಂಪಿ, ಪು. ೩೭೪ (ಪ್ರಕಟಿತ ಪಿಹೆಚ್.ಡಿ. ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ)

೭೮. ಅದೇ, ಪು. ೩೭೫

೭೯. ರಾಮಚಂದ್ರ ಕೆ., ೨೦೦೮, ಅಭಿವೃದ್ಧಿ ಪತ್ರಿಕೋದ್ಯಮ ಮತ್ತು ಹಂಪಿ ಪರಿಸರ, ಪು. ೨೧

೮೦. ಡೆಕ್ಕನ್ ಹೆರಾಲ್ಡ್ ದಿನ ಪತ್ರಿಕೆ ೨೧-೧೦-೨೦೦೫

೮೧. ರಾಮಚಂದ್ರ ಕೆ., ೨೦೦೮, ಪೂರ್ವೋಕ್ತ, ಪು. ೩೩

೮೨. ಅದೇ, ಪು. ೩೭

೮೩. ಅದೇ, ಪು. ೨೧

೮೪. ನಾಗರಾಜ ಎಂ.ಜಿ ಕೃಷ್ಣಮೂರ್ತಿ ಪಿ.ವಿ.,(ಸಂ), ೨೦೦೧, ಪೂರ್ವೋಕ್ತ, ಪು. ೧೫೩ ೧೫೪

೮೫. ಮಹದೇವ ಸಿ., ಚಿನ್ನಸ್ವಾಮಿ ಸೋಸಲೆ (ಸ.), ೨೦೦೬, ಪೂರ್ವೋಕ್ತ, ಪು. ೯೫

೮೬. ಅದೇ, ಪು. ೯೫

೮೭. ವಿಜಯ ಕರ್ನಾಟಕ, ದಿನಪತ್ರಿಕೆ, ಲೇಖನ ೨೩, ನವೆಂಬರ್, ೨೦೧೨

೮೮. ಮಹದೇವ ಸಿ., ಸ್ವಾಮಿ ಸೋಸಲೆ ಎನ್., (ಸಂ.), ೨೦೦೬, ಪೂರ್ವೋಕ್ತ, ಪು. ೯೯

೮೯. ಜಿಲಾನ್‌ಖಾನ್ ಸಿ.ಜಿ., ೨೦೧೬, ಪೂರ್ವೋಕ್ತ, ಪು. ೩೯೦

೯೦. ಸಿದ್ದಪ್ಪ ಕೆ., ೨೦೧೧, ಹಂಪಿಯ ಪ್ರವಾಸೋದ್ಯಮ, ಪು. ೧೪೨

೯೧. ಅದೇ, ಪು. ೨೨೧

೯೨. ೨೦೦೨ರಿಂದ ೨೦೧೪ರ ವರೆಗಿನ ಪ್ರವಾಸಿಗರ ಕುರಿತು ಯಾವುದೇ ಮಾಹಿತಿ ದೊರೆತಿಲ್ಲ

೯೩. ಉಪನೋಂದಣಾಧಿಕಾರಿಗಳು, ಪ್ರವಾಸೋದ್ಯಮ ಇಲಾಖೆ, ಕಮಲಮಹಲ್, ಕಮಲಾಪುರ

## ಅಧ್ಯಾಯ – ನಾಲ್ಕು

## ವಿಶ್ವಪಾರಂಪರಿಕ ತಾಣ : ಪಟ್ಟದಕಲ್ಲು

ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲೂಕಿನ ಮಲಪ್ರಭಾ ನದಿಯ ಎಡದಂಡೆಯ ಮೇಲೆ ಪಟ್ಟದಕಲ್ಲು ಗ್ರಾಮವಿದೆ. ತಾಲೂಕು ಕೇಂದ್ರದಿಂದ ಪೂರ್ವಕ್ಕೆ ಸುಮಾರು ೨೨ ಕಿ.ಮೀ. ದೂರದಲ್ಲಿರುವ ಈ ಗ್ರಾಮದಲ್ಲಿ ಬಾದಾಮಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿರುವ ಪ್ರಾಚೀನ ದೇವಾಲಯಗಳನ್ನು ಕಾಣುತ್ತೇವೆ. ಈ ದೇವಾಲಯಗಳಿಂದಲೇ ಪ್ರಾಮುಖ್ಯತೆ ಪಡೆದುಕೊಂಡಿರುವ ಪಟ್ಟದಕಲ್ಲು ತನ್ನದೆ ಆದ ಐತಿಹಾಸಿಕತೆಯನ್ನು ಒಳಗೊಂಡಿದ್ದು, ಪ್ರವಾಸಿ ಕೇಂದ್ರವಾಗಿ ಬೆಳೆದಿರುವುದನ್ನು ಗಮನಿಸಬಹುದು. ಇಲ್ಲಿಗೆ ತಲುಪಲು ಬಾದಾಮಿ ಮತ್ತು ಅಮೀನಗಡದಿಂದ ರಸ್ತೆ ಸಂಪರ್ಕವಿದೆ. ಇಲ್ಲಿರುವ ದೇವಾಲಯಗಳು ಕರ್ನಾಟಕದ ವಾಸ್ತುಶಿಲ್ಪ ಬೆಳವಣಿಗೆಯ ಇತಿಹಾಸದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿವೆ. ವಾಸ್ತುಶಿಲ್ಪ ಶೈಲಿಯ ಮುಖ್ಯ ಪ್ರಕಾರಗಳಲ್ಲಿ ಹೆಚ್ಚಿನ ಪ್ರಸಿದ್ಧಿ ಪಡೆದಿರುವ ದ್ರಾವಿಡ ಮತ್ತು ನಾಗರ ಶೈಲಿಯ ರಚನೆಗಳು ಒಂದೇ ಸ್ಥಳದಲ್ಲಿ ಕಂಡುಬರುವುದು ವಿಶೇಷವಾಗಿದೆ. ಜೊತೆಗೆ ಈ ದೇವಾಲಯಗಳು ಸೌಂದರ್ಯದ ದೃಷ್ಟಿಯಿಂದಲೂ ಪ್ರಸಿದ್ಧಿ ಪಡೆದುಕೊಂಡವುಗಳಾಗಿವೆ. ಇಲ್ಲಿರುವ ಹತ್ತೂ ದೇವಾಲಯಗಳು ಹೆಚ್ಚು ಪ್ರಸಿದ್ಧಿ ಪಡೆದುಕೊಂಡಿದ್ದು ಮುಖ್ಯವಾಗಿ ಅವುಗಳಲ್ಲಿ ಒಂಭತ್ತು ಶೈವ, ಒಂದು ಜೈನ ದೇವಾಲಯವಾಗಿದೆ. ಶೈವ ದೇವಾಲಯಗಳು ಗ್ರಾಮದಲ್ಲಿದ್ದರೆ, ಜಿನಾಲಯ ಮಾತ್ರ ಗ್ರಾಮದ ಹೊರಭಾಗದಲ್ಲಿದೆ. ಬಾದಾಮಿಗೆ ಹೋಗುವ ರಸ್ತೆಯಲ್ಲಿ ಪಟ್ಟದಕಲ್ಲಿನ ಪಶ್ಚಿಮಕ್ಕೆ ೧ ಕಿ.ಮೀ. ದೂರದಲ್ಲಿ ಬಲಬದಿಯಲ್ಲಿದೆ. ಉಳಿದ ಒಂಬತ್ತು ದೇವಾಲಯಗಳು ದಕ್ಷಿಣದಿಂದ ಉತ್ತರಕ್ಕೆ ನದಿಯ ದಂಡೆಯಗುಂಟ ಹಬ್ಬಿಕೊಂಡಿವೆ. ಯುನೆಸ್ಕೋ ಸಂಸ್ಥೆಯು ಈ ಪಾರಂಪರಿಕ ಸ್ಥಳವನ್ನು ೧೯೮೭ರಲ್ಲಿ ವಿಶ್ವಪರಂಪರೆ ಪಟ್ಟಿಯಲ್ಲಿ ಪರಿಗಣಿತವಾಗುವ ಸ್ಮಾರಕಗಳೆಂದು ಘೋಷಿಸಿದೆ.[೧]

**ಸ್ಥಳನಾಮ**

ಕ್ರಿ.ಪೂ. ೨ನೆಯ ಶತಮಾನದಲ್ಲಿ "ಪೆತರ್ಗಲ್" ಎಂಬ ಹೆಸರಿನಿಂದ ಗುರುತಿಸಿಕೊಂಡಿದ್ದ ಈ ಸ್ಥಳವು ಪ್ರಾಚೀನ ವ್ಯಾಪಾರ ಕೇಂದ್ರಗಳಲ್ಲಿ ಒಂದಾಗಿತ್ತು ಎಂದು ಗ್ರೀಕ್ ಭೂಗೋಳಕಾರ ಟಾಲೆಮಿ ತನ್ನ ಕೃತಿ "ಎ ಗೈಡ್ ಟು ಜಿಯೋಗ್ರಫಿ"ಯಲ್ಲಿ ತಿಳಿಸಿದ್ದಾನೆ.[೨] ಹೀಗೆ ಪಟ್ಟದಕಲ್ಲು ವಿಶೇಷವಾದ ಪ್ರಾಮುಖ್ಯತೆಯನ್ನು ಪಡೆದಿದ್ದು ಬಾದಾಮಿ ಚಾಲುಕ್ಯರ ಕಾಲದಲ್ಲಿ, ಚಲುಕ್ಯ ವಿನಯಾದಿತ್ಯನ ಕಾಲದ ಒಂದು ಶಾಸನದಲ್ಲಿ ಇದನ್ನು 'ಕಿಸುವೊಳಲ್

ಪಟ್ಟದ ಕಿಸುವೊಳಲ್' ಎಂದು ಉಲ್ಲೇಖಿಸಲಾಗಿದೆ. ಈ ಪರಿಸರದ ಸುತ್ತ ನಸುಗೆಂಪು ಬಣ್ಣದ ಕಲ್ಲುಬಂಡೆಗಳಿಂದ ಕೂಡಿರುವ ಬೆಟ್ಟಗಳು ಇರುವುದರಿಂದ ಕಿಸುವೊಳಲ್ ಎಂಬ ಹೆಸರು ಬಂದಿರಬಹುದೆಂದು ಊಹಿಸಲಾಗಿದೆ. ಅಲ್ಲದೆ ಚಾಲುಕ್ಯ ಸಾಮ್ರಾಜ್ಯವನ್ನಾಳಿದ ಅರಸರು ಇಲ್ಲಿ ತಮ್ಮ ಪಟ್ಟಬಂಧ (ಪಟ್ಟಾಭಿಷೇಕ) ಮಹೋತ್ಸವವನ್ನು ನೆರವೇರಿಸಿ ಕೊಳ್ಳುತ್ತಿದ್ದರಿಂದ, ಈ ಗ್ರಾಮವು ಪಟ್ಟದ ಕಿಸುವೊಳಲ್ ಎಂದು ಹೆಸರಾಗಿದ್ದಂತೆ ತಿಳಿದುಬರುತ್ತದೆ.[೩] ಇಲ್ಲಿ ಚಾಲುಕ್ಯ ಅರಸರಿಗೆ ಪಟ್ಟಾಭಿಷೇಕ ಮಾಡುತ್ತಿದ್ದ ವಿಷಯ ೧೧-೧೨ನೆಯ ಶತಮಾನದ ಶಾಸನಗಳಲ್ಲಿಯು ಹಾಗೂ 'ಸಿಂಗಿರಾಜ ಪುರಾಣ ಮತ್ತು ಹಮ್ಮಿರ ಕಾವ್ಯ' ಎಂಬ ಹೆಸರಿನ ಸಾಹಿತ್ಯಿಕ ಕೃತಿಗಳಲ್ಲಿ ಈ ಕುರಿತು ಉಲ್ಲೇಖಗಳು ದಾಖಲಾಗಿರವುದುಂಟು.[೪] ಇಲ್ಲಿ ಹರಿಯುವ ಮಲಪ್ರಭಾ ನದಿಯು ಉತ್ತರಗಾಮಿಯಾಗಿರುವುದರಿಂದ ಈ ಸ್ಥಳವು ತೀರ್ಥಕ್ಷೇತ್ರವೆಂದು ಸಹಜವಾಗಿ ಪರಿಗಣಿತವಾಗಿದೆ. ಹಾಗಾಗಿಯೇ ಬಾದಾಮಿ ಚಾಲುಕ್ಯ ಅರಸರು ತಮ್ಮ ಪಟ್ಟಬಂಧವನ್ನು ಇದೇ ಸ್ಥಳದಲ್ಲಿ ನೆರವೇರಿಸಿಕೊಳ್ಳುತ್ತಿದ್ದರೆಂದು ದಾಖಲಿಸಲಾಗಿದೆ.[೫] ಕ್ರಿ.ಶ. ೧೧೬೨ರ[೬] ಶಾಸನದಲ್ಲಿ ಕಿಸುವೊಳಲನ್ನು 'ದಕ್ಷಿಣದ ಕಾಶಿ' ಎಂದು ಸಹ ಉಲ್ಲೇಖಿಸಲಾಗಿದೆ. ಕಾಲಾಂತರದಲ್ಲಿ ರಕ್ತಪುರವೆಂಬ[೭] ಹೆಸರಿನಿಂದ ಸಹ ಕರೆಸಿಕೊಂಡಿರುವುದನ್ನು ಗಮನಿಸಬಹುದು. ಅದರ ಹಿನ್ನೆಲೆಯಲ್ಲಿ ಕೆಲವು ವಿದ್ವಾಂಸರು ಇದನ್ನು ಕಿಸುವೊಳಲ್ ಎಂಬುದು ಸಂಸ್ಕೃತ ರೂಪವೆಂದು[೮] ತಿಳಿಸಿದ್ದಾರೆ.

ಬಾದಾಮಿ ಚಾಲುಕ್ಯರ ನಂತರ ರಾಷ್ಟ್ರಕೂಟ ಕಾಲದಲ್ಲಿ ರಚನೆಗೊಂಡ ಕವಿರಾಜಮಾರ್ಗ ಗ್ರಂಥದಲ್ಲಿ ತಿರುಳ್ಗನ್ನಡ ಸೀಮೆಯನ್ನು ತಿಳಿಸುವಾಗ ಕಿಸುವೊಳಲಿನ ಉಲ್ಲೇಖವಿರುವುದನ್ನು ವಿಶೇಷವಾಗಿ ಗಮನಿಸಬಹುದು.[೯] ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿಯೂ ಕೂಡಾ ಈ ಸ್ಥಳದ ಉಲ್ಲೇಖ ಕಂಡುಬಂದಿದೆ. ಕಿಸುಕಾಡು-೭೦ ಎಂಬ ಚಿಕ್ಕ ಪ್ರಾಂತ್ಯದ ಮುಖ್ಯ ಸ್ಥಳವಾಗಿದ್ದು ೨ನೆಯ ಸೋಮೇಶ್ವರನ ೧೦೭೦ರ[೧೦] ಶಾಸನವೊಂದರಲ್ಲಿ ಆತ ಕಿಸುವೊಳಲಿನ ಮೂಲಸ್ಥಾನ ದೇವರಿಗೆ ೧೨ ಮತ್ತರು ಭೂಮಿಯನ್ನು ದತ್ತಿ ಬಿಟ್ಟ ವಿವರಗಳು ದೊರಕಿವೆ. ಕ್ರಿ.ಶ.೧೧೬೨ರ[೧೧] ಶಾಸನವೊಂದರಿಂದ ಈ ಭೂಭಾಗ ಎರಂಬರಗೆಯ ಸಿಂಧರ ಆಡಳಿತಕ್ಕೊಳಪಟ್ಟಿತ್ತೆಂದು ತಿಳಿದುಬರುತ್ತದೆ. ಆ ಮನೆತನದ ಮಹಾಮಂಡಲೇಶ್ವರ ೨ನೆಯ ಚಾವುಂಡರಾಯನ ಪತ್ನಿ 'ದೇಮಲದೇವಿಯ ಪುತ್ರ ಆಚುಗಿ' ಪಟ್ಟಣದ ಕಿಸುವೊಳಲನ್ನು ಕುಮಾರವೃತ್ತಿಯಿಂದ ವಿಶ್ವೇಶ್ವರನಿಗೆ ಸಮನೆನಿಸಿದ ವಿಜಯೇಶ್ವರ ದೇವರಿಗೆ ೩೦೦ ಮತ್ತರ ಭೂಮಿಯನ್ನು ದತ್ತಿ ಬಿಟ್ಟಳು[೧೨] ಎಂಬ ವಿವರ

ದಾಖಲಿಸಿದೆ. ಕಲ್ಯಾಣದ ಚಾಲುಕ್ಯರ ಕಾಲದ ನಂತರ ಪಟ್ಟದಕಲ್ಲು ತನ್ನ ಉತ್ತಮ ಸ್ಥಿತಿಯನ್ನು ಕಳೆದುಕೊಳ್ಳಲಾರಂಭಿಸಿ ಕ್ರಮೇಣ ಈಗೀನ ಪುಟ್ಟ ಗ್ರಾಮ ಪಾರಂಪರಿಕ ಸ್ಥಳವಾಗಿ ಜಗತ್ತಿನಾದ್ಯಂತ ಹೆಸರು ಮಾಡಿದೆ.

**ರಾಜಕೀಯ ಇತಿಹಾಸ**

ಪಟ್ಟದಕಲ್ಲು ಪರಿಸರದ ಮಲಪ್ರಭೆಯ ತೀರದಲ್ಲಿ ಹಳೆಯ ಶಿಲಾಯುಗ ಸಂಸ್ಕೃತಿಯ ಸೀಳುಗತ್ತಿ, ಕೈಗೊಡಲಿಯಂತಹ ಶಿಲಾಯುಧಗಳು ದೊರೆತಿವೆ. ಈ ನದಿಬಯಲಿನಲ್ಲಿ ಸುಮಾರು ೪೦೦೦ ವರ್ಷಗಳಷ್ಟು ಪ್ರಾಚೀನವಾಗಿರುವ ನವಶಿಲಾಯುಗದ ನೆಲೆಗಳು, ಸುಮಾರು ೨೫೦೦–೩೦೦೦ ವರ್ಷಗಳಷ್ಟು ದೀರ್ಘಾವಧಿಯ ಬೃಹತ್‌ಶಿಲಾಯುಗದ ಸಂಸ್ಕೃತಿ ಕಾಲದ ಕಲ್ಗೋರಿಗಳು ಬೆಳಕಿಗೆ ಬಂದಿವೆ. ಅಲ್ಲದೆ ಸುಮಾರು ೨೦೦೦ ವರ್ಷಗಳಷ್ಟು ಪ್ರಾಚೀನ ನಗರಗಳ ನೆಲೆಗಳು ಇತಿಹಾಸ ಕಾಲದ ಪ್ರಸಿದ್ಧ ತಾಣಗಳು ಶೋಧಗೊಂಡಿವೆ.[೧೩] ಪಟ್ಟದಕಲ್ಲಿಗೆ ಸುಮಾರು ೨ಕಿ.ಮೀ. ದೂರದಲ್ಲಿನ ಬಾಚನಗುಡ್ಡದ ಬಳಿ ಎರಡು ಕಲ್ಗೋರಿಗಳು ಕಂಡುಬಂದಿವೆ. ಅವುಗಳಲ್ಲಿ ಒಂದು ಶಿಲಾಗೋರಿಯು ಮಾತ್ರ ಇಂದಿಗೂ ಸುಸ್ಥಿತಿಯಲ್ಲಿದ್ದು, ಮತ್ತೊಂದು ಪಕ್ಕದ ಅಕ್ಕರಗಲ್ಲ ಬಳಿ ೨೦ ಶಿಲಾಕಲ್ಗೋರಿಗಳನ್ನು ಡಾ.ಅ.ಸುಂದರ ಅವರು ಶೋಧಿಸಿದ್ದರು. ಆದರೆ ಆ ಶಿಲಾಗೋರಿಗಳು ನಾಶಗೊಂಡಿವೆ. ಪಟ್ಟದಕಲ್ಲು ಪರಿಸರದಲ್ಲಿ ಕಿಂಡಿಕೋಣೆ ಹಾಗೂ ಕಲ್ಲುಗೋರಿಗಳು ಕಂಡುಬಂದಿರುವುದೊಂದು ವಿಶೇಷ. ಈ ಕಲ್ಗೋರಿಗಳ ನಿರ್ಮಾಣಕ್ಕೆ ಮರಳು ಶಿಲೆ ಹಾಗೂ ಗ್ರಾನೈಟ್ ಶಿಲೆಯ ಹರವಾದ ಚಪ್ಪಡಿಗಳನ್ನು ಬಳಸಿರುವುದು ಗಮನಾರ್ಹ ಸಂಗತಿ.[೧೪] ಇಲ್ಲಿನ ಕಲ್ಗೋಗೋರಿಗಳಲ್ಲಿ ಮೃತನ ಅಸ್ಥಿ ಅವಶೇಷಗಳನ್ನು ಮೃತ್‌ಪಾತ್ರೆಗಳನ್ನು, ಕಬ್ಬಿಣದ ಉಪಕರಣಗಳನ್ನು ಇಡಲಾಗುತ್ತಿತ್ತು. ಪಟ್ಟದಕಲ್ಲಿನಿಂದ ಸ್ವಲ್ಪದೂರದಲ್ಲಿರುವ ಐಹೊಳೆ, ಕ್ಯಾದಿಗೇರಿ ಮತ್ತು ಗುಳೇದಗುಡ್ಡದಲ್ಲಿ[೧೫] ಕೂಡ ಶಿಲಾಯುಗ ಸಂಸ್ಕೃತಿಯ ಕುರುವುಗಳು ಕಂಡುಬರುತ್ತವೆ.

ಬಾದಾಮಿ ಚಾಲುಕ್ಯರು ಕ್ರಿ.ಶ. ೬ನೇ ಶತಮಾನದಲ್ಲಿ ಬಾದಾಮಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಸ್ವತಂತ್ರರಾಗಿ ಆಳ್ವಿಕೆ ಮಾಡಿದರು. ಪ್ರಾರಂಭದಲ್ಲಿ ಶೈವ ಮತಾವಲಂಬಿಗಳಾಗಿದ್ದ ಬಾದಾಮಿ ಚಾಲುಕ್ಯರು ಆನಂತರ ಕಾಲದಲ್ಲಿ ಪರಮ ಭಾಗವತರಾಗಿ ಮುಂದುವರೆದರು. ಒಂದನೇ ವಿಕ್ರಮಾದಿತ್ಯನು ಸುದರ್ಶನಾಚಾರ್ಯ ಎಂಬಾತನಿಂದ ಶಿವಮಂಡಲ ದೀಕ್ಷೆಯನ್ನು ಪಡೆದುದು ಒಂದು ಮಹತ್ವದ ಬದಲಾವಣೆ. ತದನಂತರದ ಚಾಲುಕ್ಯ ಅರಸರು ಶೈವ ಮತದ ಅವಲಂಬಿಗಳು ಕೂಡ ಆಗಿದ್ದರು. ಜೊತೆಗೆ ಶೈವ

ಮತವನ್ನು ಪೋಷಿಸಿದರು.[೧೬] ಪಟ್ಟದಕಲ್ಲಿನ ಶೈವ ದೇವಾಲಯಗಳು ಇದಕ್ಕೆ ಸಾಕ್ಷಿಯಾಗಿವೆ. ವರಾಹ ಚಾಲುಕ್ಯರ ರಾಜ ಲಾಂಛನವಾಗಿತ್ತು. ವಿಷ್ಣು ಭೂದೇವಿಯನ್ನು ರಕ್ಷಿಸಿದಂತೆ ತಾವು ಭೂಮಿಯ ಪಾಲಕರಾಗಿದ್ದವರು ಎಂಬುದನ್ನು ಸೂಚಿಸಿದ್ದಾರೆಂದು ಇವರ ರಾಜಲಾಂಛನದಿಂದ ತಿಳಿಯಬಹುದು. ಜಯಸಿಂಹ ಎಂಬಾತನು ಈ ಅರಸು ಮನೆತನದ ಮೊದಲ ದೊರೆ ಆದರೆ ಆತನ ಬಗ್ಗೆ ವಿವರಗಳು ದೊರೆತಿಲ್ಲ. ಈತನ ನಂತರ ಅವನ ಮಗನಾದ ರಣರಾಗನು ಪಟ್ಟಕ್ಕೆ ಬಂದನು. ಇವರಿಬ್ಬರೂ ಪ್ರಾರಂಭದಲ್ಲಿ ಕದಂಬರ ಸಾಮಂತರಾಗಿದ್ದರೆಂದು ತಿಳಿದುಬರುತ್ತದೆ. ರಣರಾಗನ ಮಗನಾದ ಪುಲಿಕೇಶಿಯು (ಕ್ರಿ.ಶ. ಸು.೫೪೦ ರಿಂದ ೫೬೬) ಮೊದಲ ಸ್ವತಂತ್ರ ದೊರೆ ಎಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದ. ಕದಂಬರನ್ನು ಸೋಲಿಸಿ ಚಾಲುಕ್ಯ ರಾಜ್ಯದ ನಿರ್ಮಾಪಕನೆನಿಸಿದ ಈತ ಅಶ್ವಮೇಧ ಮೊದಲಾದ ಯಜ್ಞಗಳನ್ನು ನೆರವೇರಿಸಿದನು. ಕ್ರಿ.ಶ. ೫೪೩ರಲ್ಲಿ ಅಭೇದ್ಯ ಕೋಟೆಯನ್ನು ಕಟ್ಟಿಸಿ ವಾತಾಪಿಯನ್ನು ಭದ್ರಪಡಿಸಿದನು.

ಪುಲಿಕೇಶಿಯ ಮಗನಾದ ಕೀರ್ತಿವರ್ಮನು (ಕ್ರಿ.ಶ.೫೬೬–೫೯೬) ರಾಜಧಾನಿಯಾದ ಬಾದಾಮಿಯನ್ನು ಅಂದಗೊಳಿಸಿದನು. ಬಾದಾಮಿಯ ಅತ್ಯದ್ಭುತವಾದ ಮಹಾವಿಷ್ಣು ಗುಹಾದೇವಾಲಯವು ನಿರ್ಮಾಣಗೊಂಡಿರುವುದು ಈತನ ಕಾಲಾವಧಿಯಲ್ಲಿ. ಈತನ ತಮ್ಮನಾದ ಮಂಗಲೇಶನು, ಅರಸನೂ ಅಣ್ಣನೂ ಆದ ಕೀರ್ತಿವರ್ಮನಿಗೆ ಪುಣ್ಯ ಪ್ರಾಪ್ತಿಯಾಗಲೆಂದು ಮಹಾವಿಷ್ಣು ಗುಹಾದೇವಾಲಯವನ್ನು ನಿರ್ಮಿಸಿದನು. ಮೌರ್ಯ, ಕದಂಬರಿಗೆ ಕಾಳರಾತ್ರಿ ಎನಿಸಿದ್ದ ಕೀರ್ತಿವರ್ಮನು ರಾಜ್ಯವನ್ನು ವಿಸ್ತರಿಸಿದರು.[೧೭] ಈತ ಮರಣ ಹೊಂದಿದಾಗ ಈತನ ಮಕ್ಕಳಿನ್ನೂ ಅಪ್ರಾಪ್ತ ವಯಸ್ಕರಾಗಿದ್ದರು. ಆದ್ದರಿಂದ ಅವರ ಚಿಕ್ಕಪ್ಪನಾಗಿದ್ದ ಮಂಗಳೇಶನು (ಕ್ರಿ.ಶ. ೫೯೬–೬೧೦) ರಾಜಪಾಲಕನಾಗಿ ಅಣ್ಣನ ರಾಜ್ಯ ರಕ್ಷಣೆಯ ಭಾರವನ್ನು ಹೊತ್ತನು. ಇವನು ಪ್ರಬಲ ರಾಜನಾಗಿದ್ದನು. ಮುಖ್ಯವಾಗಿ ಉತ್ತರದ ದಂಡಯಾತ್ರೆಯನ್ನು ಕೈಗೊಂಡು ತನ್ನ ರಾಷ್ಟ್ರ ವಿಸ್ತರಣೆಯ ನೀತಿಯನ್ನು ಸಾಧಿಸಿದನು. ಅಲ್ಲದೇ ಕಲಚೂರಿ ಅರಸರನ್ನು ಸೋಲಿಸಿ ಅಧೀನನಾಗಿ ಮೂಡಿಕೊಂಡನೆಂಬ ಉಲ್ಲೇಖಗಳು ಕಂಡುಬರುತ್ತವೆ. ತನ್ನ ನಿರಂತರ ದಂಡೆಯಾತ್ರೆಯಿಂದ ಬಂದ ಸಂಪತ್ತನ್ನು ಮುಕುಟೇಶ್ವರ ದೇವನಿಗೆ ಅರ್ಪಿಸಿ ಮಹಾಕೂಟದಲ್ಲಿ ಧರ್ಮಸ್ತಂಭವನ್ನು ನಿರ್ಮಿಸಿದನು.[೧೮] ದುರ್ಲಭಾ ದೇವಿಯ ಅನುಜ್ಞೆಯ ಮೇರೆಗೆ ಮುಕುಟೇಶ್ವರ ದೇವಾಲಯದ ನಿರ್ವಹಣೆಗೆ ೧೦ ಗ್ರಾಮಗಳನ್ನು ಬಿಟ್ಟುಕೊಟ್ಟನು. ಅಧಿಕಾರ ದಾಹವು ಮಂಗಳೇಶನ ಮಹಾವ್ಯಕ್ತಿತ್ವಕ್ಕೆ ಮಸಿ

ಬಳಿಯಿತು. ಸಾಮ್ರಾಜ್ಯದ ಅಧಿಕಾರವು ತನ್ನ ಮಗನಿಗೆ ದೊರೆಯಬೇಕೆಂಬ ದುರಾಸೆ ಹೊಂದಿದ್ದ ಮಂಗಳೇಶನು ಉತ್ತರಾಧಿಕಾರಿಯಾಗಿದ್ದ ಇಮ್ಮಡಿ ಪುಲಿಕೇಶಿಗೆ ಸಿಂಹಾಸನವನ್ನು ಬಿಟ್ಟುಕೊಡಲಿಲ್ಲ. ತರುಣನೂ ಸಮರ್ಥನೂ ಆಗಿದ್ದ ಎರಡನೆಯ ಪುಲಿಕೇಶಿಯು ತನ್ನ ಚಿಕ್ಕಪ್ಪನನ್ನು ಯುದ್ಧದಲ್ಲಿ ಸೋಲಿಸಿ ಅಧಿಕಾರಕ್ಕೆ ಬಂದನು.[೧೯] (ಕ್ರಿ.ಶ.೬೧೦) ಈ ಯುದ್ಧದಲ್ಲಿ ಮಂಗಲೇಶನು ಮರಣ ಹೊಂದಿದನು.

ಇಮ್ಮಡಿ ಪುಲಿಕೇಶಿಯ ಸಾಧನೆಗಳನ್ನು (ಕ್ರಿ.ಶ. ೬೧೦–೬೪೨) ಕುರಿತು ೬೩೪–೬೩೫ರ ಐಹೊಳೆ ಪ್ರಶಸ್ತಿ ಶಾಸನದಲ್ಲಿ ಸುದೀರ್ಘವಾಗಿ ವರ್ಣಿಸಲಾಗಿದೆ. ಪರಾಕ್ರಮ ಶಾಲಿಯಾಗಿದ್ದ ಈತನು ಕದಂಬರಿಂದ ಬನವಾಸಿಯನ್ನು ವಶಪಡಿಸಿಕೊಂಡ ನಂತರ ಗಂಗರು, ಅಳುಪರು ಸಹ ಈತನ ಸಾರ್ವಭೌಮತ್ವವನ್ನು ಒಪ್ಪಿಕೊಂಡರು. ಕೊಂಕಣದ ಮೌರ್ಯರು ಸೋಲನ್ನಪ್ಪಿದರು, ಲಾಟ, ಮಾಳ್ವ, ಗೂರ್ಜರು ಈತನಿಗೆ ಶರಣಾದರು. ಕನೌಜದ ದೊರೆ ಹರ್ಷವರ್ಧನನು ನರ್ಮದೆಯ ತೀರದಲ್ಲಿ ಈತನನ್ನು ಎದುರಿಸಲಾಗದೆ ಸೋಲನ್ನ ಅನುಭವಿಸಿದನು. ಪಲ್ಲವ ಅರಸನಾದ ಮೊದಲ ಮಹೇಂದ್ರವರ್ಮನು ಕಂಚಿ ಕೋಟೆಯ ಹಿಂಭಾಗದಲ್ಲಿ ಅವಿತುಕೊಂಡನು. ಈ ಆಕ್ರಮಣಗಳಿಂದ ಇಮ್ಮಡಿ ಪುಲಿಕೇಶಿಯು ದಕ್ಷಿಣಾಪಥೇಶ್ವರನಾಗಿ ಮೆರೆದನು.[೨೦] ಕ್ರಿ.ಶ. ೬೪೨ರಲ್ಲಿ ಚಾಲುಕ್ಯ ಹಾಗೂ ಪಲ್ಲವರ ನಡುವೆ ನಡೆದ ಯುದ್ಧದಲ್ಲಿ ಇಮ್ಮಡಿ ಪುಲಿಕೇಶಿಯು ಸೋತು ಮರಣ ಹೊಂದಿದನು. ಪುಲಕೇಶಿಯನ್ನು ಸೋಲಿಸುವ ಮೂಲಕ ಪಲ್ಲವರ ದೊರೆ ಮೊದಲನೆಯ ನರಸಿಂಹ ಪಲ್ಲವನು 'ವಾತಾಪಿಕೊಂಡ' ಎಂಬ ಬಿರುದನ್ನು ಪಡೆದುಕೊಂಡನು. ಇದರೊಂದಿಗೆ ವಾತಾಪಿಯು ಪಲ್ಲವರ ವಶವಾಯಿತು. ೧೩ ವರ್ಷಗಳ ರಾಜಕೀಯ ಗ್ರಹಣದ ಬಳಿಕ ಕ್ರಿ.ಶ. ೬೫೫ರಲ್ಲಿ[೨೧] ಮೊದಲನೆಯ ವಿಕ್ರಮಾದಿತ್ಯನು ವಾತಾಪಿಯನ್ನು ಪಲ್ಲವರ ಕಪಿಮುಷ್ಟಿಯಿಂದ ಮುಕ್ತಗೊಳಿಸಿದನು. ಈತ ಶಿವಮಂಡಲ ದೀಕ್ಷೆಯನ್ನು ಪಡೆದು ಶೈವಮತದ ಅನುಯಾಯಿಯಾಗಿದ್ದು ಒಂದು ಮಹತ್ವದ ಘಟನೆ. ಚಾಲುಕ್ಯ ವಂಶದ ಪ್ರಾರಂಭದ ದೊರೆಗಳು ಪರಮಭಾಗವತರೆನಿಸಿದರೆ ಈತನು ಪರಮ ಮಾಹೇಶ್ವರನೆನಿಸಿದನು. ಈತನ ನಂತರ ಬಂದ ಚಾಲುಕ್ಯ ಅರಸರು ಶೈವ ಪಂಥಕ್ಕೆ ಹೆಚ್ಚಿನ ಒಲವು ತೋರಿದರು. ಇದರ ಪರಿಣಾಮದಿಂದ ಪ್ರಮುಖವಾಗಿ ಪಟ್ಟದಕಲ್ಲು, ಆಲಂಪುರ ಮತ್ತು ಮಹಾಕೂಟಗಳು ಶೈವ ಕೇಂದ್ರಗಳಾಗಿ ಬೆಳೆದವು.[೨೨]

ಮೊದಲನೆಯ ವಿಕ್ರಮಾದಿತ್ಯನ ಮಗನಾದ ವಿನಯಾದಿತ್ಯನು ಕ್ರಿ.ಶ. ೬೮೧ರಲ್ಲಿ ಅಧಿಕಾರಕ್ಕೆ ಬಂದನು. ಸುಮಾರು ಒಂದುವರೆ ದಶಕದ ಈತನ ಆಳ್ವಿಕೆ ಶಾಂತಿಯುತವಾಗಿತ್ತು. ಇವನ ತರುವಾಯ ಈತನ ಮಗನಾದ ವಿಜಯಾದಿತ್ಯನು ಕ್ರಿ.ಶ. ೬೯೬ರಲ್ಲಿ ಸಿಂಹಾಸನವನ್ನೇರಿ ದೀರ್ಘಕಾಲದವರೆಗೆ (೬೯೬–೭೩೩) ರಾಜ್ಯಭಾರ ಮಾಡಿದನು. ವಿಜಯಾದಿತ್ಯನು ಉತ್ತರವಾಹಿನಿ ಮಲಪ್ರಭಾ ನದಿ ತೀರದಲ್ಲಿ ವಿಜಯೇಶ್ವರ (ಸಂಗಮೇಶ್ವರ) ದೇವಾಲಯವನ್ನು ನಿರ್ಮಿಸಿದನು. ಈ ಮೂಲಕ ಪಟ್ಟದಕಲ್ಲಿನಲ್ಲಿ ಶೈವ ಕೇಂದ್ರದ ಬೆಳವಣಿಗೆಗೆ ನಾಂದಿ ಹಾಡಿದನು.[೨೩]

ಈತನ ಕಾಲದಲ್ಲಿ ಪಲ್ಲವರೊಂದಿಗಿನ ವೈರತ್ವವು ಮತ್ತುಷ್ಟು ಹೆಚ್ಚಾಯಿತು. ನಂದಿಪೋತವರ್ಮನ ಮೇಲೆ ಆಕ್ರಮಣ ಮಾಡಿ ಕಂಚಿ ಪಟ್ಟಣವನ್ನು ವಶಪಡಿಸಿಕೊಂಡನು. ಹೀಗೆ ಮೂರು ಬಾರಿ ಪಲ್ಲವರನ್ನು ಸೋಲಿಸಿದ ಕೀರ್ತಿ ವಿಜಯಾದಿತ್ಯನಿಗೆ ಸಲ್ಲುತ್ತದೆ. ಈ ವಿಜಯಗಳ ನೆನಪಿಗಾಗಿ ಈತನ ರಾಣಿಯಾದ ತ್ರೈಲೋಕಮಹಾದೇವಿ ಹಾಗೂ ಲೋಕಮಹಾದೇವಿಯರು ಪಟ್ಟದಕಲ್ಲಿನಲ್ಲಿ ಲೋಕೇಶ್ವರ (ವಿರೂಪಾಕ್ಷ) ಮತ್ತು ತ್ರ್ಯಲೋಕ್ಯೇಶ್ವರ (ಮಲ್ಲಿಕಾರ್ಜುನ) ದೇವಾಲಯಗಳನ್ನು ಕಟ್ಟಿಸಿದರು.

ವಿನಯಾದಿತ್ಯನ ನಂತರ ಅಧಿಕಾರಕ್ಕೆ ಬಂದ ಕೀರ್ತಿವರ್ಮನು ಈ ಮನೆತನದ ಕೊನೆಯ ಅರಸನಾಗಿದ್ದಾನೆ. ಈತ ಅಧಿಕಾರಕ್ಕೆ ಬರುವುದಕ್ಕೂ ಮೊದಲೇ ತನ್ನ ತಂದೆಯ ಅಧಿಕಾರವಧಿಯಲ್ಲಿ ಆಡಳಿತದ ಅನುಭವ ಪಡೆದುಕೊಂಡಿದ್ದನು. ಹೀಗಾಗಿ ತನ್ನ ತಂದೆಯ ಕಾಲದಲ್ಲಿ ಕಳೆದುಕೊಂಡಿದ್ದ ಚಾಲುಕ್ಯ ಸಾಮ್ರಾಜ್ಯದ ಪ್ರದೇಶಗಳನ್ನು ಈತನು ಯುವರಾಜನಾಗಿದ್ದಾಗಲೇ ಪಲ್ಲವರೊಂದಿಗೆ ಹೋರಾಡಿ ವಶಪಡಿಸಿಕೊಂಡನು. ಜೊತೆಗೆ ತಮ್ಮ ಪೂರ್ವಿಕರಂತೆ ಇವನು ದೇವಾಲಯ ನಿರ್ಮಾಣಕಾರ್ಯದತ್ತ ಹೆಚ್ಚಿನ ಆಸಕ್ತಿ ತೋರಿದ್ದರಿಂದ ಪಟ್ಟದಕಲ್ಲಿನ ಪಾಪನಾಥ, ಕಾಶಿವಿಶ್ವನಾಥ ದೇವಾಲಯಗಳ ನಿರ್ಮಾಣ ಪೂರ್ಣಗೊಂಡವು.[೨೪] ಚಾಲುಕ್ಯ ಸೈನ್ಯವನ್ನು ರಾಷ್ಟ್ರಕೂಟ ಕುಲದ ದಂತಿದುರ್ಗನು ಸೋಲಿಸುವುದರ ಮೂಲಕ ಬಾದಾಮಿ ಚಾಲುಕ್ಯರ ಅಧಿಪತ್ಯವನ್ನು ತುಳಿದು ರಾಷ್ಟ್ರಕೂಟ ರಾಜ್ಯದ ಉದಯಕ್ಕೆ ಮುನ್ನುಡಿ ಬರೆದನು.

ಆನಂತರ ಪಟ್ಟದಕಲ್ಲಿನ ಭೂಭಾಗವು ವಿವಿಧ ರಾಜಮನೆತನಗಳ ಆಡಳಿತಕ್ಕೆ ಸೇರಿತು. ರಾಷ್ಟ್ರಕೂಟ ಕಲಿಬಲ್ಲಹನು ಈ ಪ್ರದೇಶವನ್ನು ಆಳುತ್ತಿದ್ದ ಸಂಗತಿ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಶಾಸನದಿಂದ ತಿಳಿದುಬರುತ್ತದೆ. ಪಟ್ಟದಕಲ್ಲಿನ ಜೈನನಾರಾಯಣ

ದೇವಾಲಯವು ರಾಷ್ಟ್ರಕೂಟ ಒಂದನೆಯ ಕೃಷ್ಣನ ಕಾಲದ್ದೆಂದು ತಿಳಿಯಲಾಗಿದೆ. ರಾಷ್ಟ್ರಕೂಟರ ನಂತರ ಈ ಪ್ರದೇಶವು ಕಲ್ಯಾಣ ಚಾಲುಕ್ಯರ ಒಡೆತನಕ್ಕೆ ಸೇರಿದ್ದು, ಒಂದನೆಯ ಸೋಮೇಶ್ವರನು ರಾಜ್ಯವಾಳುತ್ತಿದ್ದಾಗ ಅಕ್ಕಾದೇವಿಯು ಕಿಸುಕಾಡು-೭೦ರ ಆಡಳಿತವನ್ನು ನಡೆಸುತ್ತಿದ್ದಳು. ಇಮ್ಮಡಿ ಸೋಮೇಶ್ವರ ಆಳ್ವಿಕೆಯಲ್ಲಿ ಭುವನೈಕ್ಯಮಲ್ಲ ನೊಳಂಬ ಪಲ್ಲವ ಪೆರ್ಮಾನಡಿ ಸಿಂಗಣದೇವನು ಕಿಸುಕಾಡು-೭೦ ಮತ್ತು ಕಿಸುವೊಳಲಿನ ೬ ಹಳ್ಳಿಗಳನ್ನು ನೋಡಿಕೊಳ್ಳುತ್ತಿದ್ದನೆಂದು ತಿಳಿದುಬರುತ್ತದೆ. ಸಿಂಧ ಮನೆತನದ ಇಮ್ಮಡಿ ಸಿಂಗನು ಕ್ರಿ.ಶ. ೧೦೭೬ರ ಸುಮಾರಿಗೆ ಕಲ್ಯಾಣ ಚಾಲುಕ್ಯರ ಮಾಂಡಲಿಕನಾಗಿ ಕಿಸುಕಾಡು-೭೦ರ ಪ್ರದೇಶವನ್ನು ಆಳುತ್ತಿದ್ದನು. ಕಳಚೂರಿ ವಂಶದ ಇಮ್ಮಡಿ ಬಿಜ್ಜಳನು ಕಲ್ಯಾಣ ಚಾಲುಕ್ಯ ಮುಮ್ಮಡಿ ತೈಲಪನನ್ನು ಸೋಲಿಸಿ ಈ ನಾಡನ್ನಾಳಿದನು. ಕ್ರಿ.ಶ. ೧೧೭೮ರ[೨೫] ವೇಳೆಗೆ ಕಿಸುಕಾಡು-೭೦ ಕಳಚೂರಿ ಸಂಕಮನ ಅಧೀನವಾಗಿದ್ದಿತು. ಅನಂತರ ಈ ಭಾಗವನ್ನು ದೇವಗಿರಿ ಯಾದವರು, ವಿಜಯನಗರದ ಅರಸರು ಆಳ್ವಿಕೆ ಮಾಡಿರುವ ಉಲ್ಲೇಖಗಳುಂಟು. ಆದರೆ ಅವರ ಕಾಲದಲ್ಲಿ ನಿರ್ಮಾಣಗೊಂಡ ಸ್ಮಾರಕಗಳಾಗಲಿ ಅಥವಾ ಇತರೆ ಅವಶೇಷಗಳು ಪಟ್ಟದಕಲ್ಲಿನಲ್ಲಿ ಕಾಣದಾಗಿವೆ.

**ಪಟ್ಟದಕಲ್ಲು ವಿಶ್ವಪಾರಂಪರಿಕ ಸಂರಕ್ಷಣಾ ಸ್ಮಾರಕಗಳು :**

ಸುಮಾರು ಎರಡು ಶತಮಾನಗಳವರೆಗೆ ಆಳ್ವಿಕೆ ಮಾಡಿದ ಬಾದಾಮಿ ಚಾಲುಕ್ಯರು ತಮ್ಮ ರಾಜಧಾನಿಗಳನ್ನು ಮತ್ತು ಸಮೀಪದ ಮಹಾಕೂಟ, ಐಹೊಳೆ ಹಾಗೂ ಪಟ್ಟದಕಲ್ಲುಗಳಲ್ಲಿ ಹಲವು ದೇವಾಲಯಗಳನ್ನು ನಿರ್ಮಿಸಿದರು. ಪಟ್ಟದಕಲ್ಲಿನಲ್ಲಿ ಉತ್ತರಭಾರತದ ನಾಗರ ಮತ್ತು ದಕ್ಷಿಣ ಭಾರತದ ದ್ರಾವಿಡ ಶೈಲಿಯ ದೇವಾಲಯಗಳನ್ನು ಪಟ್ಟದಕಲ್ಲಿನಲ್ಲಿ ನಿರ್ಮಿಸಿದರು.[೨೬] ಇಲ್ಲಿನ ದೇವಾಲಯಗಳ ಸ್ತಂಭಗಳ ಮೇಲಿರುವ ಕೆತ್ತನೆಗಳು ರಾಮಾಯಣ ಮಹಾಭಾರತ ಭಾಗವತ ಕಿರ್ತಾರ್ಜುನ ವಿಜಯ ಮತ್ತು ಪಂಚತಂತ್ರ ಕಥೆಗಳ ಪ್ರಸಂಗಗಳನ್ನು ತೋರ್ಪಡಿಸುತ್ತವೆ.[೨೭] ಇವು ಶಿಲೆಯಲ್ಲಿ ಲಯ, ಸೌಂದರ್ಯ, ಮತ್ತಿತರ ಭಾವಗಳನ್ನು ಅಭಿವ್ಯಕ್ತಿಸುವಲ್ಲಿ ಚಾಲುಕ್ಯರ ಮೂರ್ತಿಶಿಲ್ಪ ಲಕ್ಷಣಗಳಿಗೆ ಸಾಕ್ಷಿಯಾಗಿ ನಿಂತಿವೆ. ಇಲ್ಲಿರುವ ಸ್ಮಾರಕ ಸಮೂಹವನ್ನು ಅಸಾಮಾನ್ಯ ಜಾಗತಿಕ ಮೌಲ್ವಿಕತೆ ಮತ್ತು ಆ ಕಾಲಘಟ್ಟದ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಗಳಲ್ಲಿ ಮನುಕುಲಕ್ಕೆ ನೀಡಿದ ಕೊಡುಗೆಯನ್ನು ಪರಿಗಣಿಸಿ ಯುನೆಸ್ಕೋ ಪಟ್ಟದಕಲ್ಲು ವಿಶ್ವ ಪರಂಪರೆ ತಾಣ ಎಂದು ಘೋಷಿಸಿದೆ.[೨೮] ವಿಶ್ವ ಪರಂಪರೆ ಪಟ್ಟಿಯಲ್ಲಿರುವ ಪಟ್ಟದಕಲ್ಲು ಸ್ಮಾರಕಗಳು ಈ ಕೆಳಗಿನಂತಿವೆ.

೧. ಸಂಗಮೇಶ್ವರ ದೇವಾಲಯ

೨. ವಿರೂಪಾಕ್ಷ ದೇವಾಲಯ

೩. ಮಲ್ಲಿಕಾರ್ಜುನ ದೇವಾಲಯ

೪. ಕಾಡಸಿದ್ದೇಶ್ವರ ದೇವಾಲಯ

೫. ಜಂಬುಲಿಂಗ ದೇವಾಲಯ

೬. ಗಳಗನಾಥ ದೇವಾಲಯ

೭. ಕಾಶಿವಿಶ್ವನಾಥ ದೇವಾಲಯ

೮. ಚಂದ್ರಶೇಖರ ದೇವಾಲಯ

೯. ಪಾಪನಾಥ ದೇವಾಲಯ

೧೦. ಜೈನ ದೇವಾಲಯ

ಸಂಗಮೇಶ್ವರದಿಂದ ಪಾಪನಾಥ ದೇವಾಲಯದವರೆಗೆ ಏಳು ದೇವಾಲಯಗಳು ಒಂದು ಸಮೂಹವಾದರೆ, ಈ ಗ್ರಾಮದ ಪಶ್ಚಿಮ ದಿಕ್ಕಿಗೆ ಸಮಾರು ೧ ಕಿ.ಮೀ ದೂರದಲ್ಲಿರುವ ಜೈನ ದೇವಾಲಯ ಮತ್ತೊಂದು ಸಮೂಹವಾಗಿದೆ. ಇದರಂತೆ ಕಾಶಿವಿಶ್ವನಾಥ ಹಾಗೂ ಚಂದ್ರಶೇಖರ ದೇವಾಲಯಗಳೇ ಸ್ವಲ್ಪ ಭಿನ್ನವಾಗಿ ಮೂಡಿಬಂದಿರುವ ಸಮೂಹದಲ್ಲಿ ಗುರುತಿಸಿಕೊಂಡಿವೆ.[೨೯]

**ಸಂಗಮೇಶ್ವರ ದೇವಾಲಯ** : ಶಾಸನಗಳಲ್ಲಿ ಈ ದೇವಾಲಯವು ಈಶ್ವರ ದೇವಾಲಯ ಎಂದು ಉಲ್ಲೇಖಿತವಾಗಿದೆ. ಇಂತಹ ಒಂದು ಶಾಸನವು ಇದೇ ದೇವಾಲಯದ ಗರ್ಭಗೃಹದ ಬಾಗಿಲುವಾಡದ ಬಳಿ ಕಾಣಸಿಗುತ್ತದೆ. ಇದರಲ್ಲಿ ಈ ದೇವಾಲಯವನ್ನು ವಿಜಯೇಶ್ವರ[೩೦] ಎಂಬ ಹೆಸರಿನಿಂದ ಉಲ್ಲೇಖಿಸಿರುವುದನ್ನು ಗಮನಿಸಬಹುದು. ದೇವಾಲಯದ ತಲಾ ವಿನ್ಯಾಸದಲ್ಲಿ ಹೊಸತನ್ನು ಗುರುತಿಸಿದ್ದಾರೆ. ಚಚ್ಚೌಕಾರವಾಗಿದ್ದು ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಪ್ರಧಾನ ಗರ್ಭಗೃಹದ ಎರಡು ಭಾಗದಲ್ಲಿ ಎರಡು ಚಿಕ್ಕ ಗರ್ಭಗೃಹಗಳು ಸಹ ಕಂಡುಬರುತ್ತವೆ. ಪ್ರಾಯಶಃ ಇದು ಬಾದಾಮಿಯ ಜಂಬುಲಿಂಗ ಗುಡಿಯ ತಲ ವಿನ್ಯಾಸದ ಮುಂದುವರಿಕೆಯಾಗಿರುವಂತೆ ಕಾಣುತ್ತದೆ. ಈ ದೇವಾಲಯದಲ್ಲಿ ಪ್ರಾರಂಭವಾದ ಇಂತಹ ವಾಸ್ತುಶಿಲ್ಪ ಲಕ್ಷಣಗಳು ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯಗಳಲ್ಲಿ ಮುಂದುವರೆದಿದ್ದನ್ನು ಗಮನಿಸಬಹುದು. ಪ್ರದಕ್ಷಣಾ ಪಥವನ್ನು ಹೊಂದಿರುವ ಈ ದೇವಾಲಯವು ಸಾಂಧಾರ ಪ್ರಕಾರದ್ದಾಗಿರುವುದು. ಗಾಳಿ ಬೆಳಕಿನ

ಅನುಕೂಲಕ್ಕಾಗಿ ಮೂರು ಜಾಲಾಂಧರಗಳನ್ನು ಅಳವಡಿಸಲಾಗಿದೆ. ಐದು ಕಂಬಗಳ ನಾಲ್ಕು ಸಾಲುಗಳನ್ನು ಹೊಂದಿರುವ ವಿಶಾಲವಾದ ಸಭಾಮಂಟಪವಿದೆ. ಈ ಸಭಾಮಂಟಪವನ್ನು ಪ್ರವೇಶಿಸಲು ದಕ್ಷಿಣ ಮತ್ತು ಉತ್ತರ ದಿಕ್ಕಿನಲ್ಲಿ ಮೆಟ್ಟಿಲುಗಳನ್ನು ಮಾಡಲಾಗಿದೆ.

ದೇವಾಲಯವು ಅಧಿಷ್ಟಾನ, ಉಪಾನ, ತ್ರಿಪಟ್ಟ ಕುಮುದ ಹಾಗೂ ಲತಾ ಅಲಂಕಾರಗಳಿಂದ ಕೂಡಿದೆ. ಕಪೋತದ ಗೂಡುಗಳಲ್ಲಿ ಗಣಶಿಲ್ಪಗಳಿದ್ದರೆ, ಉತ್ತರದ ಮುಖಮಂಟಪದ ಅಧಿಷ್ಟಾನದಲ್ಲಿ ಆನೆ ಸಿಂಹಗಳ ಸಾಲುಗಳಿವೆ. ಪ್ರಧಾನ ಗರ್ಭಗೃಹದಲ್ಲಿಯ ಲಿಂಗವು ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ, ಇದರ ಬಾಗಿಲುವಾಡದ ತಳಭಾಗದಲ್ಲಿ ನದಿ ದೇವತೆಗಳಾದ ಗಂಗಾ ಯಮುನೆಯರ ಶಿಲ್ಪಗಳನ್ನು ಕಂಡರಿಸಲಾಗಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರದಲ್ಲಿ ಶಿವ, ಪಾರ್ವತಿ, ಗಣೇಶ ಹೀಗೆ ಶೈವ ಪಂಥದ ದೇವತೆಗಳ ಗಾರೆಶಿಲ್ಪಗಳಿಂದ ಅಲಂಕರಿಸಲಾಗಿದೆ. ಉತ್ತರ ಭಿತ್ತಿಯಲ್ಲಿ ವಿಷ್ಣು ಹಾಗೂ ವರಾಹ ಮೂರ್ತಿಗಳ ಉಬ್ಬು ಕೆತ್ತನೆಗಳಿವೆ. ದಕ್ಷಿಣ ಭಿತ್ತಿ ಮೇಲೆ ಗಜಾಸುರಾಂತಕ ಶಿವನ ಉಬ್ಬು ಶಿಲ್ಪವಿದೆ, ಪಶ್ಚಿಮ ಭಿತ್ತಿ ಅರ್ಧನಾರೀಶ್ವರ ಹಾಗೂ ಲಕುಲೀಶರ ಉಬ್ಬುಶಿಲ್ಪಗಳಿವೆ. ದೇವಾಲಯದ ದಕ್ಷಿಣಕ್ಕೆ ಕಟ್ಟೆಯೊಂದರ ಮೇಲೆ ಶಿಲಾಸ್ತಂಭವಿದೆ.

**ವಿರೂಪಾಕ್ಷ ದೇವಾಲಯ** : ಚಾಲುಕ್ಯ ದೊರೆಗಳು ನಿರ್ಮಿಸಿದ ರಾಚನಿಕ ಮಂದಿರಗಳಲ್ಲಿ ಇದು ಉತ್ಕೃಷ್ಟವಾಗಿದೆ. ಇವರ ಕಲಾ ವೈಶಿಷ್ಟತೆ, ವಿಸ್ತಾರ ಹಾಗೂ ದೇವಾಲಯದ ಕಲಾ ಸಿದ್ಧಿ ಹಾಗೂ ಚೆಲುವನ್ನು ಸಾಧಿಸಿದ್ದು ಇಲ್ಲಿಯೇ ಎಂದು ಕಲಾ ಇತಿಹಾಸಕಾರರು ಬಣ್ಣಿಸುತ್ತಾರೆ. ಇಮ್ಮಡಿ ವಿಕ್ರಮಾದಿತ್ಯನು ಪಲ್ಲವರ ರಾಜಧಾನಿಯಾದ ಕಂಚಿನಗರದಲ್ಲಿ ಮೂರುಬಾರಿ ಗೆದ್ದುದರ ಸವಿನೆನಪಿಗಾಗಿ ಆತನ ರಾಣಿ ಲೋಕಮಹಾದೇವಿಯು ಕ್ರಿ.ಶ. ೭೪೦ರಲ್ಲಿ ಈ ದೇವಾಲಯವನ್ನು ನಿರ್ಮಿಸಿರುವುದು ಶಾಸನದಿಂದ ತಿಳಿದುಬರುತ್ತದೆ.[೩೧] ಪ್ರಸ್ತುತ ವಿರೂಪಾಕ್ಷ ಗುಡಿ ಎಂದು ಕರೆಯಲ್ಪಡುವ ಇದು ಶಾಸನಗಳಲ್ಲಿ ಲೋಕೇಶ್ವರ ದೇವಾಲಯವೆಂಬ ಹೆಸರಿನಿಂದ ಪ್ರಸಿದ್ಧವಾಗಿತ್ತೆಂದು ತಿಳಿದು ಬರುತ್ತದೆ. ಇದನ್ನು ಕಂಚಿಯ ರಾಜಸಿಂಹೇಶ್ವರ ದೇವಾಲಯದ ಮಾದರಿಯಲ್ಲಿ ರಚಿಸಲಾಗಿದೆ.[೩೨] ವಾಸ್ತವವಾಗಿ ದೇವಾಲಯದ ಪ್ರಧಾನ ದ್ವಾರವಿರುವುದು ಅದರ ಪೂರ್ವಕ್ಕೆ ಪಶ್ಚಿಮ ದಿಕ್ಕಿನಲ್ಲಿ ಇನ್ನೊಂದು ಚಿಕ್ಕ ಪ್ರವೇಶದ್ವಾರವಿದೆ. ಪ್ರವೇಶದ್ವಾರದ ಕಟ್ಟಡ ರಚನೆ, ಪ್ರತ್ಯೇಕ ನಂದಿಮಂಟಪ, ವಿಶಾಲವಾದ ಪ್ರಾಕಾರ, ಪರಿವಾರ ದೇವತೆಗಳ ಚಿಕ್ಕ ಮಂಟಪಗಳು, ಪಶ್ಚಿಮ ದ್ವಾರ ಇವೆಲ್ಲವುಗಳ ಮಧ್ಯೆ ವೈಭವಪೂರ್ಣ ಸುಂದರ ಕಲಾಕೃತಿಯಾಗಿರುವ ಶಿಖರವುಳ್ಳ ಈ ಪ್ರಧಾನ ದೇವಾಲಯ ವಾಸ್ತು

ವಿಸ್ಮಯವಾಗಿದೆ. ಈ ದೇವಾಲಯವು ನಂತರದಲ್ಲಿ ರಾಷ್ಟ್ರಕೂಟರಿಂದ ನಿರ್ಮಾಣವಾದ ಎಲ್ಲೋರದ ಕೈಲಾಸ ದೇವಾಲಯದ ನಿರ್ಮಾಣಕ್ಕೆ ಮಾದರಿಯಾಯಿತು ಎಂದು ಅಭಿಪ್ರಾಯಿಸಲಾಗಿದೆ.

ವಿರೂಪಾಕ್ಷ ದೇವಾಲಯದ ಹೊರಭಿತ್ತಿಯನ್ನು ಚಾಲುಕ್ಯ ರುವಾರಿಗಳು ಅನೇಕ ಸುಂದರ ಶಿಲ್ಪಗಳ ಕೆತ್ತನೆಯಿಂದ ಅಂದಗೊಳಿಸಿದ್ದಾರೆ. ಪ್ರಧಾನ ಶಿಲ್ಪಗಳನ್ನು ಅಲಂಕಾರಿಕ ಗೂಡುಗಳಲ್ಲಿ ಇಡಲಾಗಿದೆ ಇವು ಮುಖ್ಯವಾಗಿ ಶಿವ, ನಟರಾಜ, ಲಿಂಗೋದ್ಭವ ಶಿವ, ಲಕುಲೀಶ ಮೊದಲಾದ ಮೂರ್ತಿಗಳಿಂದ ಸಹ ಕೂಡಿವೆ. ವಿಷ್ಣು ತ್ರಿವಿಕ್ರಮರ ವಿಗ್ರಹಗಳು ಕಂಡುಬರುತ್ತವೆ. ಪೂರ್ವ, ಪಶ್ಚಿಮ, ಉತ್ತರ ಹಾಗೂ ದಕ್ಷಿಣ ಭಿತ್ತಿಗಳಲ್ಲಿ ಅನೇಕ ಮೂರ್ತಿಶಿಲ್ಪಗಳಿವೆ. ಪೂರ್ವ ಭಿತ್ತಿಯಲ್ಲಿ ರಸಿಕ ದಂಪತಿಗಳು ಹಾಗೂ ಲಿಂಗೋದ್ಭವ ಮೂರ್ತಿಶಿಲ್ಪಗಳಿವೆ. ದಕ್ಷಿಣ ಭಿತ್ತಿಯಲ್ಲಿ ಅಷ್ಟಭುಜದ ಶಿವ, ಚತುರ್ಭುಜ ನಟರಾಜ, ಶಿವ-ಪಾರ್ವತಿ, ಅಂಗದ ಮತ್ತು ರಾಮರ ಮಲ್ಲಯುದ್ಧ, ರಾವಣನೂ ಜಟಾಯು ಪಕ್ಷಿಯನ್ನು ಕೊಲ್ಲುವ ದೃಶ್ಯ, ಪಶ್ಚಿಮ ಭಿತ್ತಿಯಲ್ಲಿ ಲಕುಲೀಶ, ಶಿವ, ವಿಷ್ಣು, ಚತುರ್ಭುಜ ಶಿವ, ದ್ವಿಬಾಹು ಶಿವ, ಉತ್ತರ ಗೋಡೆಯಲ್ಲಿ ಭೂವರಾಹ, ನಂದಿಸಮೇತ ಶಿವ, ಅರ್ಧನಾರೀಶ್ವರ, ತ್ರಿವಿಕ್ರಮ ಉಬ್ಬುಶಿಲ್ಪಗಳಿವೆ.[೩೩] ಈ ದೇವಾಲಯದ ಅಧಿಷ್ಠಾನವು ಸುಮಾರು ಐದು ಅಡಿ ಎತ್ತರವಾಗಿದ್ದು ನಂದಿಮಂಟಪದ ಅಧಿಷ್ಠಾನದ ಪಾತಳಿಯಲ್ಲಿದೆ ಪ್ರಧಾನ ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ಶಿಖರವಿದೆ.

**ಮಲ್ಲಿಕಾರ್ಜುನ ದೇವಾಲಯ** : ಇದು ವಿಜಯಾದಿತ್ಯನ ಮಡದಿಯಾದ ತ್ರೈಲೋಕ್ಯ ಮಹಾದೇವಿ ಕಟ್ಟಿಸಿದ ದೇವಾಲಯವಾಗಿದೆ. ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯಗಳು ಅಕ್ಕ-ತಂಗಿಯರ ಪೋಷಣೆಯಿಂದ ನಿರ್ಮಾಣಗೊಂಡಿದ್ದು ವಾಸ್ತುಶಿಲ್ಪದ ಲೋಕದಲ್ಲಿ ವಿಶೇಷವಾದ ಸ್ಥಾನ ಪಡೆದುಕೊಂಡಿವೆ. ಏಕಕಾಲಕ್ಕೆ ನಿರ್ಮಾಣವಾದ ಈ ದೇವಾಲಯಗಳಲ್ಲಿ ಹಲವು ಸಾಮ್ಯತೆ. ಈ ಎರಡೂ ದೇವಾಲಯಗಳು ತಲವಿನ್ಯಾಸ ಹೆಚ್ಚು ಕಡಿಮೆ ಒಂದೇ ಬಗೆಯ ಲಕ್ಷಣಗಳನ್ನು ಒಳಗೊಂಡಿವೆ. ಅಳತೆಯಲ್ಲಿ ತಂಗಿ ಕಟ್ಟಿಸಿದ ದೇವಾಲಯ ಚಿಕ್ಕದು ಎರಡೂ ದೇವಾಲಯಗಳ ಕಂಬಗಳು, ಅರ್ಧಕಂಬಗಳು, ಹೊರಭಿತ್ತಿಗಳು, ಜಾಲಂಧರಗಳು ಮೊದಲಾದವು ಒಂದೇ ಬಗೆಯ ವಿನ್ಯಾಸವನ್ನು ಪ್ರದರ್ಶಿಸುತ್ತವೆ.[೩೪] ಈ ಭಾಗದಲ್ಲಿ ಕೂಡ ರಾಮಾಯಣ, ಮಹಾಭಾರತ, ಭಾಗವತದ ಸನ್ನಿವೇಶಗಳ ಕಥಾನಕ ಶಿಲ್ಪಗಳ ಕೆತ್ತನೆಯಿದೆ. ಅಲ್ಲದೆ ಇದೇ ಭಿತ್ತಿಯ ಹಲವೆಡೆ ಪುರಾಣ

ಪ್ರಸಂಗ ಸನ್ನಿವೇಶಗಳು ಪುನರಾವರ್ತನೆಯಾಗಿದ್ದು, ಜೊತೆಗೆ ಪಂಚತಂತ್ರದ ಕಥೆಗಳು ಸೇರ್ಪಡೆಯಾಗಿವೆ. ದೇವಾಲಯವು ಮೂರು ಗರ್ಭಗೃಹ, ಅಂತರಾಳ ಸಭಾಮಂಟಪ, ಮುಖಮಂಟಪಗಳನ್ನು ಒಳಗೊಂಡಿದೆ, ಸುತ್ತಲೂ ಪ್ರದಕ್ಷಿಣಾ ಪಥ ಮತ್ತು ಎರಡು ಚಿಕ್ಕ ಗರ್ಭಗೃಹಗಳಿವೆ. ಅಲ್ಲದೇ ದೇವಾಲಯದ ಮುಂಭಾಗದಲ್ಲಿ ಪ್ರತ್ಯೇಕವಾದ ನಂದಿ ಮಂಟಪವಿದ್ದು ಸುಮಾರು ಐದು ಅಡಿ ಎತ್ತರದ ಪ್ರಕಾರ ಗೋಡೆಯನ್ನು ದೇವಾಲಯದ ಸುತ್ತಲೂ ನಿರ್ಮಿಸಿಲಾಗಿದೆ. ಈ ಪ್ರಕಾರದ ಒಳ ಭಾಗಕ್ಕೆ ಹೊಂದಿಕೊಂಡಂತೆ ಪರಿವಾರ ದೇವತೆಗಳ ಕೋಷ್ಠಕಗಳು ಕಂಡುಬರುತ್ತವೆ.

ಮಲ್ಲಿಕಾರ್ಜುನ ದೇವಾಲಯದ ಮುಂದೆ ಸುಮಾರು ಐದು ಅಡಿ ಎತ್ತರವಿರುವ ಚೌಕಾಕಾರದ ನಂದಿಮಂಟಪವಿದೆ. ಪೂರ್ವ ಮುಖಮಂಟಪವು ಎರಡು ಪ್ರತ್ಯೇಕ ಮತ್ತು ಎರಡು ಅರ್ಧ ಕಂಬಗಳಿಂದ ಕೂಡಿರುವುದನ್ನು ಗಮನಿಸಬಹುದು. ಮಂಟಪದ ಎಡಬದಿಯಲ್ಲಿನ ಸ್ವತಂತ್ರ ಕಂಬದ ದಕ್ಷಿಣ ಮುಖದಲ್ಲಿ ಸುಮಾರು ಮೂರು ಅಡಿ ಎತ್ತರದ ಅಷ್ಟಭುಜ ನರಸಿಂಹನ ಉಬ್ಬುಶಿಲ್ಪವಿದೆ. ಸಭಾಮಂಟಪ ವಿಶಾಲವಾಗಿದ್ದು ೧೮ ಏಕಶಿಲಾ ಕಂಬಗಳ ಮೇಲೆ ಮಹಾಕಾವ್ಯ, ಪುರಾಣ ಕಥೆಗಳನ್ನು ಹೇಳುವ ಉಬ್ಬು ಶಿಲ್ಪಗಳಿವೆ. ಜಾಲಂಧರಗಳು ಈ ಮಂಟಪಕ್ಕೆ ಬೆಳಕು ಮತ್ತು ಗಾಳಿಯನ್ನು ಒದಗಿಸುತ್ತವೆ. ಪ್ರಧಾನ ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳಿಂದಾಗಿದೆ. ಒಂದು ಶಾಖೆಯ ದಕ್ಷಿಣ ಬದಿಯು ಮಿಥುನಶಿಲ್ಪಗಳಿಂದಲೂ, ಮತ್ತೊಂದು ಬದಿಯು ನರ್ತಿಸುವ ಗಣಶಿಲ್ಪಗಳಿಂದಲೂ ಅಲಂಕರಿಸಪಟ್ಟಿರುವುದು. ಗರ್ಭಗೃಹದ ಲಲಾಟಬಿಂಬದಲ್ಲಿ ನಾಗಗಳ ಬಾಲ ಹಿಡಿದ ಗರುಡನ ಉಬ್ಬುಶಿಲ್ಪವಿದೆ. ಗರ್ಭಗೃಹದಲ್ಲಿ ಹಸಿರು ಮಿಶ್ರಿತ ಕಪ್ಪು ಬಣ್ಣದ ಗ್ರಾನೈಟ್ ಶಿಲೆಯ ಲಿಂಗವಿದೆ. ಈ ದೇವಾಲಯದ ತಳಭಾಗದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮಂಟಪ, ಸಭಾಮಂಟಪ ಹಾಗೂ ಮುಖಮಂಟಪದ ಭಾಗಗಳಿವೆ.

**ಕಾಡಸಿದ್ದೇಶ್ವರ ದೇವಾಲಯ** : ಪಟ್ಟದಕಲ್ಲಿರುವ ಶೈವ ದೇವಾಲಯಗಳಲ್ಲಿ ಕಾಡಸಿದ್ಧೇಶ್ವರ ದೇವಾಲಯ ಕೂಡ ಪ್ರಮುಖ ದೇವಾಲಯವಾಗಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಪಟ್ಟದಕಲ್ಲಿನಲ್ಲಿರುವ ಉಳಿದ ಎಲ್ಲಾ ದೇವಾಲಯಗಳಿಗಿಂತ ವಿಸ್ತೀಣದಲ್ಲಿ ಚಿಕ್ಕದಾಗಿದ್ದು, ಸುಮಾರು ೩೦ ಅಡಿ ಉದ್ದ, ದಕ್ಷಿಣ ಉತ್ತರಕ್ಕೆ ಸುಮಾರು ೧೪ ಅಡಿ ಅಗಲವಾಗಿದೆ. ಪ್ರಸ್ತುತ ಈ ದೇವಾಲಯವು ಭಾರತೀಯ ಪುರಾತತ್ವ ಇಲಾಖೆಯ ಪೋಷಣೆಯಿಂದ ಜೀರ್ಣೋದ್ಧಾರಗೊಂಡಿರುವುದು. ಇದರ ಗರ್ಭಗೃಹ ಚಿಕ್ಕದಾಗಿದ್ದು ಅದರ

ಒಳಭಾಗದಲ್ಲಿ ಚೌಕಾಕಾರದ ಪೀಠದಲ್ಲಿ ಕಪ್ಪುಶಿಲೆಯ ಲಿಂಗವಿದೆ. ಈ ದೇವಾಲಯ ಪ್ರದಕ್ಷಿಣ ಪಥವಿಲ್ಲದ ನಿರಂಧಾರ ದೇವಾಲಯವಾಗಿದೆ. ಗರ್ಭಗೃಹದ ಮೇಲೆ ರೇಖಾನಾಗರ ಮಾದರಿಯ ಬಾಗುಳ್ಳ ಶಿಖರವಿದೆ. ಸುಖನಾಸದಲ್ಲಿ ತಾಂಡವ ನೃತ್ಯದಲ್ಲಿ ನಿರತನಾದ ಶಿವನ ಶಿಲ್ಪವಿದೆ. ದೇವಾಲಯದ ಹೊರಭಿತ್ತಿಗಳ ಕೋಷ್ಠಕಗಳಲ್ಲಿರುವ ಪ್ರಧಾನ ಶಿಲ್ಪಗಳು ಭಗ್ನಗೊಂಡಿವೆ.[೩೫] ಉತ್ತರ ಭಾಗದ ಗೋಡೆಯಲ್ಲಿ ಅರ್ಧನಾರೀಶ್ವರ ಪರಶು ಶಂಖಗಳನ್ನು ಹಿಡಿದ ಹರಿಹರ ಮತ್ತು ದಕ್ಷಿಣದ ಗೋಡೆಯಲ್ಲಿ ಲಕುಲೀಶರ ಉಬ್ಬುಶಿಲ್ಪಗಳಿವೆ. ಇದರ ಜಾಲಂಧರಗಳು ಸ್ವಸ್ತಿಕ ವಿನ್ಯಾಸಗಳಿಂದ ಕೂಡಿದ್ದು ಸುಂದರವಾಗಿವೆ.

ಹೊರಮಂಟಪದ ಬಾಗಿಲುವಾಡವನ್ನು ದಳ, ಪುಷ್ಪ, ಹೂಬಳ್ಳಿ, ರತ್ನಹಾರದ ಕೆತ್ತನೆಯಿರುವ ಸುಂದರ ಶಾಖೆಗಳಿಂದ ಸುಂದರಗೊಳಿಸಲಾಗಿದೆ. ಹೀಗೆ ಗರ್ಭಗೃಹದ ಬಾಗಿಲುವಾಡವನ್ನು ಹಲವು ಕೆತ್ತನೆಗಳಿಂದ ಅಲಂಕರಿಸಲಾಗಿರುವುದನ್ನು ನೋಡುತ್ತೇವೆ. ಜೊತೆಗೆ ನಂದಿ ದೇವತೆಗಳು ತಮ್ಮ ವಾಹನಗಳ ಮೇಲೆ ನಿಂತಿರುವಂತೆ ಕೆತ್ತನೆಗಳಿದ್ದರೆ ಗರ್ಭಗೃಹದ ಬಾಗಿಲ ಮೇಲಿನ ಪಟ್ಟಿಕೆಯಲ್ಲಿ ಚತುರ್ಭುಜ ಹೊಂದಿರುವ ಶಿವನ ಮೂರ್ತಿಶಿಲ್ಪವಿದೆ. ತ್ರಿನೇತ್ರ ಶಿವನು ಮೇಲಕ್ಕೆತ್ತಿದ ಕೈಗಳಲ್ಲಿ ಸರ್ಪ ಹಾಗೂ ತ್ರಿಶೂಲಗಳನ್ನು ಹಿಡಿದಿದ್ದಾನೆ. ಈತನ ಪಕ್ಕದಲ್ಲಿ ಪಾರ್ವತಿಯ ಮೂರ್ತಿಶಿಲ್ಪವನ್ನು ಕೆತ್ತಲಾಗಿದೆ. ಶಿವನ ಬಲಭಾಗದಲ್ಲಿ ಬ್ರಹ್ಮ ಮತ್ತು ಎಡಭಾಗದಲ್ಲಿ ವಿಷ್ಣುವಿನ ಮೂರ್ತಿಶಿಲ್ಪಗಳಿವೆ. ಇವರಿಬ್ಬರು ಚತುರ್ಭುಜಗಳನ್ನು ಹೊಂದಿರುವುದರಿಂದ[೩೬] ಇದೊಂದು ಉತ್ತಮ ಮೂರ್ತಿಶಿಲ್ಪ ಸಂಯೋಜನೆಯಾಗಿದೆ. ಒಟ್ಟಾರೆ ಕಾಡಸಿದ್ಧೇಶ್ವರ ದೇವಾಲಯದ ವಾಸ್ತು ಮತ್ತು ಮೂರ್ತಿಶಿಲ್ಪ ಲಕ್ಷಣಗಳನ್ನು ಗಮನಿಸಿದರೆ ಇದು ಪ್ರಾಯಶಃ ೮ನೇ ಶತಮಾನದಲ್ಲಿ ನಿರ್ಮಾಣಗೊಂಡಿರಬಹುದೆಂದು ಅಭಿಪ್ರಾಯಿಸಲಾಗಿದೆ.

**ಜಂಬುಲಿಂಗ ದೇವಾಲಯ** : ಈಶ್ವರ ದೇವಾಲಯದ ದಕ್ಷಿಣಕ್ಕೆ ಸ್ವಲ್ಪದೂರದಲ್ಲಿಯೇ ಜಂಬುಲಿಂಗ ದೇವಾಲಯವಿರುವುದು. ಇವೆರಡು ದೇವಾಲಯಗಳ ವಾಸ್ತು ರಚನೆಯನ್ನು ಗಮನಿಸಿದರೆ ಒಂದೇ ರಚನೆಯಂತಿದ್ದು ಏಕಕಾಲದಲ್ಲಿ ನಿರ್ಮಿತವಾಗಿರಬಹುದೆಂದು ಊಹಿಸಬಹುದು. ಈ ದೇವಾಲಯವು ಗರ್ಭಗೃಹ ಹಾಗೂ ಸಭಾಮಂಟಪವನ್ನು ಹೊಂದಿದ್ದು ನಿರಂಧಾರ ದೇವಾಲಯವಾಗಿದೆ. ಅಧಿಷ್ಠಾನವು ತ್ರಿಪಟ್ಟ, ಕುಮುದ, ಕಪೋತದ ಭಾಗಗಳಿಂದ ಕೂಡಿದೆ. ಹೊರಭಿತ್ತಿಗಳಲ್ಲಿ ಮೂರು ದೇವಕೋಷ್ಠಗಳಿವೆ.[೩೭] ಉತ್ತರ ಕೋಷ್ಠದಲ್ಲಿ ಚತುರ್ಭುಜ ಹೊಂದಿರುವ ವಿಷ್ಣುವಿನ ಮೂರ್ತಿಶಿಲ್ಪವಿದ್ದು ಶಂಕ, ಚಕ್ರವನ್ನು ಅದರಲ್ಲಿ ಮೂಡಿಬಂದಿರುವ

ವಿಷ್ಣು ಹಿಡಿದಿದ್ದಾನೆ. ತಲೆಯ ಹಿಂಭಾಗದಲ್ಲಿ ಪ್ರಭಾವಳಿ ಕೆತ್ತನೆ ಇದೆ, ದಕ್ಷಿಣ ಭಾಗದ ಕೋಷ್ಠದಲ್ಲಿ ಪರಶುಧಾರಿಯಾದ ಶಿವನು ನಿಂತಿರುವಂತೆ ಉಬ್ಬುಶಿಲ್ಪದಲ್ಲಿ ಚಿತ್ರಿಸಲಾಗಿದೆ. ಕೊಡಲಿಯ ಅಲಗು ಒಳಮುಖವಾಗಿರುವಂತೆ ಕೆತ್ತಿರುವುದು ಕುತೂಹಲಕಾರಿಯಾಗಿದೆ. ಪ್ರಸ್ತುತ ಈ ಮೂರ್ತಿಶಿಲ್ಪವು ಹಾಳಾದ ಸ್ಥಿತಿಯಲ್ಲಿದ್ದು ಪಶ್ಚಿಮ ಕೋಷ್ಠದ ದೇವಶಿಲ್ಪವು ಗುರುತಿಸಲಾಗದಷ್ಟು ಮೂಲಸ್ವರೂಪವನ್ನು ಕಳೆದುಕೊಂಡಿದೆ.

ಗಾಳಿ, ಬೆಳಕಿಗಾಗಿ ಆಯತಾಕಾರದ ಎರಡು ಜಾಲಂಧರಗಳು ಗೋಡೆಯನ್ನು ಅಲಂಕರಿಸಿವೆ. ಗೋಡೆಯ ಮೇಲಿನ ಅಂಚಿನಲ್ಲಿ ಹಂಸಮಾಲೆಯನ್ನು ಕಂಡರಿಸಲಾಗಿದೆ. ಇದು ಚಾಲುಕ್ಯ ದೇವಾಲಯಗಳ ವಾಸ್ತು ಶಿಲ್ಪ ಶೈಲಿಯಲ್ಲಿ ವಿಶೇಷವಾಗಿದೆ. ಗರ್ಭಗುಡಿಯ ಮೇಲೆ ರೇಖಾನಾಗರ ಶೈಲಿಯ ಬಾಗುಳ್ಳ ಶಿಖರವಿದೆ.[೩೮] ಅದರ ಮೇಲಿದ್ದ ಅಮಲಕವು ಪ್ರಸ್ತುತ ಸಂದರ್ಭದಲ್ಲಿ ಕಾಣಸಿಗುವುದಿಲ್ಲ. ಸುಖಾಸನದಲ್ಲಿ ನರ್ತಿಸುವ ಶಿವನ ಚಿತ್ತಾಕರ್ಷಕ ಶಿಲ್ಪವಿದ್ದು, ಇದಕ್ಕೆ ಎಂಟು ಕೈಗಳಿವೆ, ಹೀಗೆ ಶಿವನ ಮೂರ್ತಿಶಿಲ್ಪವನ್ನು ಕೆತ್ತಿರುವ ಕೌಶಲ್ಯ ವ್ಯಕ್ತವಾಗಿದೆ. ಸಭಾಮಂಟಪದ ಬಾಗಿಲುವಾಡವು ಐದು ಶಿಲ್ಪ ಪಟ್ಟಿಕೆಗಳನ್ನೊಳಗೊಂಡು ಚಲುವಿನ ಚೌಕಟ್ಟಾಗಿದೆ. ಗರ್ಭಗೃಹದ ಬಾಗಿಲು ಕೂಡ ಇಂತಹದೇ ಲಕ್ಷಣ ಹೊಂದಿದ್ದು ಅದು ಚಿಕಣಿ ಶಿಲ್ಪಗಳಿಂದ ಒಡಮೂಡಿ ಮತ್ತಷ್ಟು ಅಂದವನ್ನು ಹೆಚ್ಚಿಸಿಕೊಳ್ಳಲು ಯಶಸ್ವಿಯಾಗಿದೆ. ದ್ವಾರದ ಎಡಬಲಗಳಲ್ಲಿ ಸುಮಾರು ೩ ಅಡಿ ಎತ್ತರದ ದ್ವಾರಪಾಲಕರನ್ನು ಕೆತ್ತಲಾಗಿದೆ. ಗರ್ಭಗೃಹದಲ್ಲಿ ಕಪ್ಪುಶಿಲೆಯ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ಎತ್ತರವಾದ ವೇದಿಕೆ ಇದ್ದು ಅದರ ಮೇಲೆ ಗಂಟೆಯ ಹಾರ ಮತ್ತು ಹಣೆಪಟ್ಟಿಯನ್ನು ಹೊಂದಿರುವ ನಂದಿಯ ವಿಗ್ರಹವಿದೆ. ಇದು ಮೂಲತಃ ನಂದಿಮಂಟಪವಾಗಿದೆ.

**ಗಳಗನಾಥ ದೇವಾಲಯ** : ಜಂಬುಲಿಂಗ ದೇವಾಲಯದ ಮುಂದೆ ಮತ್ತೊಂದು ಶೈವ ದೇವಾಲಯವಿದೆ. ಗಳಗನಾಥ ಎಂಬ ಹೆಸರಿನ ಈ ದೇವಾಲಯದ ತಲ ವಿನ್ಯಾಸವೂ ಗರ್ಭಗೃಹ, ಅಂತರಾಳ, ನವರಂಗ ಮಂಟಪ, ಸಭಾಮಂಟಪ, ಅರ್ಧಮಂಟಪ ಮತ್ತು ಪ್ರದಕ್ಷಿಣಾಪಥವನ್ನೊಳಗೊಂಡಿತ್ತು ಎಂಬುದನ್ನು ಈಗ ಉಳಿದಿರುವ ಭಾಗಗಳು ಸೂಚಿಸುತ್ತವೆ. ಪೂರ್ವ ಮುಖಮಂಟಪ, ಉತ್ತರದ ಅರ್ಧಮಂಟಪ ಮತ್ತು ಸಭಾ ಮಂಟಪಗಳು ಕಾಲಾನಂತರದಲ್ಲಿ ಅಳಿದು ಹೋಗಿವೆ. ದಕ್ಷಿಣದ ಅರ್ಧಮಂಟಪ ಮಾತ್ರ ಉಳಿದುಕೊಂಡಿದೆ. ಪ್ರದಕ್ಷಿಣಾಪಥದ ಪಶ್ಚಿಮ ಮತ್ತು ಉತ್ತರದ ಹೊರಭಿತ್ತಿಗಳು ಬಹುಮಟ್ಟಿಗೆ ನಾಶವಾಗಿವೆ. ದಕ್ಷಿಣ ಬದಿಯ ಅರ್ಧ ಮಂಟಪದಲ್ಲಿ ಶಿವನ ಮಧ್ಯಮ ಗಾತ್ರದ ಶಿಲ್ಪವಿದೆ. ಶಿವನು ದೊಡ್ಡದಾದ

ರುಂಡಮಾಲೆಯನ್ನು ಜನಿವಾರದಂತೆ ಧರಿಸಿದ್ದಾನೆ.[೩೯] ಜಡೆಯಲ್ಲಿಯೂ ಒಂದು ರುಂಡಮಾಲೆಯಿದ್ದು ಅಷ್ಟಭುಜಧಾರಿಯಾದ ಶಿವನ ಕೈಗಳಲ್ಲಿ ಡಮರು, ಖಡ್ಗ, ಗುರಾಣಿ, ತ್ರಿಶೂಲಗಳನ್ನು ಹಿಡಿದಿದ್ದಾನೆ.

ಗರ್ಭಗೃಹದ ಮೇಲಿರುವ ರೇಖಾನಾಗರ ಶೈಲಿಯ ಶಿಖರವು ತುಂಬಾ ಆಕರ್ಷಕವಾಗಿದೆ. ಈ ದೇವಾಲಯದ ಸುಖನಾಸಿ ಭಾಗವು ಭಗ್ನವಾಗಿದ್ದು ಶಿಖರವು ಒಳಗೆ ಪೊಳ್ಳಾಗಿರುವುದು ಕಂಡುಬರುತ್ತದೆ. ಶಿಖರದ ಭಾಗ ಬಹುಮಟ್ಟಿಗೆ ಆಲಂಪುರದ ವಿಶ್ವಬ್ರಹ್ಮ ದೇವಾಲಯದ ಶಿಖರವನ್ನು ಹೋಲುತ್ತದೆ. ಅಂತರಾಳದ ಬಾಗಿಲುವಾಡ ನಾಲ್ಕು ಶಾಖೆಗಳಿಂದ ಕೂಡಿದ್ದು, ಇದರ ಲಲಾಟಬಿಂಬದಲ್ಲಿ ಶಿವನ ಮೂರ್ತಿಶಿಲ್ಪವಿದೆ. ಇದರ ಪಕ್ಕದಲ್ಲಿ ಸಂಗೀತ ವಾದ್ಯದ ಪರಿಕರಗಳನ್ನು ಹಿಡಿದು ನಿಂತಿರುವ ಸಂಗೀತಗಾರನ ಮೂರ್ತಿಶಿಲ್ಪವನ್ನು ಕೆತ್ತಲಾಗಿದ್ದು ಅವುಗಳು ಭಗ್ನಾವಸ್ಥೆ ಸ್ಥಿತಿಯಲ್ಲಿವೆ. ಗರ್ಭಗೃಹದಲ್ಲಿ ಹಸಿರು ಮಿಶ್ರಿತ ಕಪ್ಪುಶಿಲೆಯ ಲಿಂಗವಿದೆ, ಇದರ ನಿರ್ಮಾಣದ ತಾಂತ್ರಿಕ ಸ್ವರೂಪವನ್ನು ಇಲ್ಲಿ ಗುರುತಿಸಬಹುದಾಗಿದೆ. ಲಿಂಗದಲ್ಲಿ ಶಿವಾಂಶ, ವಿಷ್ಣು ಅಂಶ ಮತ್ತು ಬ್ರಹ್ಮಾಂಶ ಎಂಬ ಭಾಗಗಳನ್ನು ಪ್ರತಿಬಿಂಬಿಸಲಾಗಿದೆ. ಈ ಮೂರು ಲಕ್ಷಣದ ಭಾಗಗಳನ್ನು ಗಳಗನಾಥ ದೇವಾಲಯದಲ್ಲಿನ ಲಿಂಗದಲ್ಲಿ ಕಾಣುತ್ತೇವೆ. ಬ್ರಹ್ಮ ಭಾಗವಾಗಿರುವ ಕೆಳಭಾಗವು ನೆಲದಲ್ಲಿರುತ್ತದೆ, ಇದು ಚೌಕಾಕಾರದ್ದಾಗಿರುತ್ತದೆ.

**ಪಾಪನಾಥ ದೇವಾಲಯ** : ವಿರೂಪಾಕ್ಷ ದೇವಾಲಯದ ಮಹಾದ್ವಾರದಿಂದ ದಕ್ಷಿಣಕ್ಕೆ ಸ್ವಲ್ಪ ದೂರದಲ್ಲಿ ಮಲಪ್ರಭಾ ನದಿ ದಂಡೆಯ ಮೇಲೆ ಇದನ್ನು ನಿರ್ಮಿಸಲಾಗಿದೆ. ಇದನ್ನು ಮೊದಲು 'ಪಾಪನಾಶ' ಗುಡಿ ಎಂದೂ, ಕಾಲಾಂತರದಲ್ಲಿ ಪಾಪನಾಥೇಶ್ವರ ದೇವಾಲಯ ಎಂಬ ಹೆಸರಿನಿಂದ ಕರೆಯಲಾಗಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಎರಡು ಸಭಾಮಂಟಪಗಳನ್ನು ಹೊಂದಿರುವುದು ವಿಶೇಷವಾಗಿದೆ. ಇದರ ತಲವಿನ್ಯಾಸದಲ್ಲಿ ಗರ್ಭಗೃಹ, ಮುಖಮಂಟಪದ ಜೊತೆಗೆ ದೊಡ್ಡ ಮಂಟಪ, ಚಿಕ್ಕ ಮಂಟಪ, ಪ್ರದಕ್ಷಿಣಾಪಥ ಮತ್ತು ಉತ್ತರ ಹಾಗೂ ದಕ್ಷಿಣ ಹೊರಭಿತ್ತಿಯ ಅರ್ಧಮಂಟಪಗಳ ಭಾಗಗಳನ್ನು ಹೊಂದಿರುವಂತೆ ನಿರ್ಮಿಸಲಾಗಿದೆ. ಗರ್ಭಗೃಹದ ಮೇಲೆ ರೇಖಾನಾಗರ ಶೈಲಿಯ ಔತ್ತರೆಯ ಶಿಖರವಿದೆ. ಆದರೆ ಇದರ ಎತ್ತರವೂ ದೇವಾಲಯದ ಉದ್ದಕ್ಕೆ ಪ್ರಮಾಣಬದ್ಧವೆನಿಸಿ ಮೇಲಿಕ್ಕೆ ಹೋದಂತೆ ಕಿರಿದಾಗುತ್ತದೆ. ದೇವಾಲಯವು ಸೂರ್ಯ ಮಂದಿರ ಇಲ್ಲವೇ ವಿಷ್ಣುಗುಡಿಯಾಗಿರಬೇಕು ಎಂಬುದು ಹೆನ್ರಿ ಕಜೆನ್ಸ್ ಮೊದಲಾದ ವಿದ್ವಾಂಸರ ನಿಲುವಾಗಿದೆ.[೪೦]

ಇದಕ್ಕೆ ಆಧಾರವಾಗಿ ಅವರು ಹೇಳುವ ಪ್ರತಿಮೆಗಳು ಅರ್ಪಣಾತ್ಮಕ ವಿಗ್ರಹಗಳಿಲ್ಲ, ಹಾಗಾಗಿ ಅವರ ಅಭಿಪ್ರಾಯಗಳನ್ನು ಸ್ವೀಕರಿಸಲಾಗದು.

ವಿರೂಪಾಕ್ಷ ದೇವಾಲಯವನ್ನು ನಿರ್ಮಿಸಿದ ಪ್ರಖ್ಯಾತ ಸ್ಥಪತಿ ಸರ್ವಸಿದ್ದಿ ಆಚಾರಿಯ ಶಿಷ್ಯನಾದ 'ರೇವಡಿ ಓವಜನು' ದೇವಾಲಯದ ಬಲಭಾಗವನ್ನು ರಚಿಸಿದನೆಂಬುದು ಈ ದೇವಾಲಯದಲ್ಲಿನ ಶಾಸನವೊಂದರಿಂದ ತಿಳಿಯುತ್ತದೆ. ದೇವಾಲಯದ ಮುಖಮಂಟಪದ ಅಧಿಷ್ಠಾನ ಭಾಗದಲ್ಲಿ ಗಳ ಭಾಗವು ಪ್ರಧಾನವಾಗಿದ್ದು ಅದು ಪ್ರಾಣಿ ಶಿಲ್ಪಗಳಿಂದ ಕೂಡಿರುವುದನ್ನು ಗಮನಿಸುತ್ತೆವೆ. ಮುಖಮಂಟಪದ ಎರಡು ಅರ್ಧಕಂಬಗಳ ಮೇಲೆ ದ್ವಾರಪಾಲಕರ ಕೆತ್ತನೆ ಮಾಡಲಾಗಿದೆ. ಬಾಗಿಲುವಾಡವು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು, ಲಲಾಟ ಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪವಿದೆ, ಮುಖಮಂಟಪವನ್ನು ಆನೆ ಮತ್ತು ಸಿಂಹ ಮುಖಗಳಿರುವ ವ್ಯಾಳಿಗಳು ಎತ್ತಿ ಹಿಡಿದಂತಿವೆ. ಇಲ್ಲಿರುವ ಬಹುತೇಕ ಹೆಚ್ಚಿನ ಸಂಖ್ಯೆಯ ಮಂಟಪಗಳ ಹಾಗೂ ಗರ್ಭಗುಡಿಯ ಲಲಾಟದಲ್ಲಿ ಗಜಲಕ್ಷ್ಮೀಯ ಶಿಲ್ಪವಿದ್ದು, ಗರ್ಭಗೃಹದಲ್ಲಿ ಕಪ್ಪು ಶಿಲೆಯ ಲಿಂಗವಿದೆ. ಯೋನಿ ಪೀಠವು ಮರಳುಗಲ್ಲಿನದಾಗಿದೆ. ದೇವಾಲಯದ ಹೊರಭಿತ್ತಿಗಳಲ್ಲಿ ಹಲವಾರು ವಿಧದ ಶಿಲ್ಪಗಳಿವೆ ರಾವಣ, ಇಂದ್ರಜಿತ್, ಕುಂಭಕರ್ಣ, ಯುದ್ಧದ ಸನ್ನಿವೇಶ, ವಾನರ ಸೈನ್ಯ, ರಾಮ-ಲಕ್ಷ್ಮಣ, ಹನುಮಂತ, ವಿಭೀಷಣ, ಸುಗ್ರೀವರ[೪೧] ಪುರಾಣ ಪುರುಷರ ಮೊದಲಾದ ಹಲವು ವಿಧದ ರೀತಿಯ ಕಥಾನಕ ಮೂರ್ತಿಶಿಲ್ಪಗಳಿವೆ.

**ಜೈನ ದೇವಾಲಯ** : ಪಟ್ಟದಕಲ್ಲಿನ ದೇವಾಲಯ ಸಂಕೀರ್ಣದಿಂದ ಸುಮಾರು ೫೦೦ ಮೀ ದೂರದಲ್ಲಿ ಹೊಸಪಟ್ಟದಕಲ್ಲು ಗ್ರಾಮವಿದೆ. ಇದು ಪಟ್ಟದಕಲ್ಲಿನ ಏಕಮಾತ್ರ ಜಿನಾಲಯವಾಗಿದೆ. ಇದನ್ನು ಜೈನನಾರಾಯಣ ದೇವಾಲಯ ಎಂದು ಕರೆಯುತ್ತಾರೆ. ಪ್ರಸ್ತುತ ಇದರ ಗರ್ಭಗೃಹದಲ್ಲಿ ಅಸಹಜವೆನಿಸುವ ಲಿಂಗವಿದೆ. ಅದರ ಮೂಲ ಪೀಠದ ಭಾಗ ನಾಶವಾಗಿದ್ದು ಅದರಲ್ಲಿ ಜೋಡಣೆಯಾಗಿರುವ ಲಿಂಗದ ಭಾಗವಿದೆ ಎಂಬುದು ಸ್ಪಷ್ಟವಾಗುತ್ತದೆ. ದೇವಾಲಯದಲ್ಲಿ ಅರ್ಪಣಾತ್ಮಕ ಶಿಲ್ಪಗಳಿಲ್ಲ. ಉತ್ತರ ಗೋಡೆಯಲ್ಲಿರುವ ಪದ್ಮಾಸನದಲ್ಲಿ ಕುಳಿತ ತೀರ್ಥಂಕರನ ಮೂರ್ತಿಶಿಲ್ಪ ಮತ್ತು ದೇವಾಲಯದ ಪಕ್ಕದಲ್ಲಿ ನಡೆಸಲಾದ ಉತ್ಖನನದಲ್ಲಿ ದೊರೆತ ಜಿನ ವಿಗ್ರಹವನ್ನು ಲಕ್ಷಿಸಿ ಇದನ್ನು ಜೈನ ದೇವಾಲಯವೆಂದು ಸರಿಯಾಗಿಯೇ ಗುರುತಿಸಲಾಗಿದೆ.[೪೨] ಎರಡು ಅಂತಸ್ತಿನ ವಾಸ್ತುಶಿಲ್ಪಂತೆ ಇದರಲ್ಲಿಯೂ ಒಂದರ ಮೇಲೆ ಒಂದರಂತೆ ಎರಡು ಗರ್ಭಗೃಹಗಳಿರುವುದು ತುಂಬಾ ವಿಶೇಷವಾಗಿದೆ. ಇದರ ಆಧಾರದಿಂದ ದೇವಾಲಯದ ಮುಖಮಂಟಪದ ಗೋಡೆಯ ಭಾಗದಲ್ಲಿ ಆನೆಗಳ ಕೊರಳಲ್ಲಿ ಘಂಟಾಮಾಲ

ಹಣೆಯ ಮೇಲೆ ಆಭರಣವುಳ್ಳ ದೊಡ್ಡ ಗಾತ್ರದ ಆನೆಯೊಂದಿದ್ದು, ಅದರ ಮೇಲೆ ಮಾವುತ ಕುಳಿತಿರುವ ಸುಂದರವಾದ ಉಬ್ಬುಶಿಲ್ಪವಿರುವ ಪಟ್ಟಿಗಳನ್ನು ರಚಿಸಲಾಗಿದೆ.[೪೩] ಸೊಂಡಿಲಲ್ಲಿ ಕಮಲ ಪುಷ್ಪಗಳಿವೆ, ಜಿನಾಲಯದ ಮುಖಮಂಟಪದ ಭಾಗವು ವಿಶಾಲವಾಗಿದೆ. ತಳವಿನ್ಯಾಸದಲ್ಲಿ ಇದು ಗರ್ಭಗೃಹ, ಅಂತರಾಳ, ಮುಖಮಂಟಪ, ಪ್ರದಕ್ಷಣಾಪಥದ ಭಾಗವನ್ನು ಒಳಗೊಂಡಿದೆ.[೪೪]

ಮುಖಮಂಟಪದಲ್ಲಿ ಕಕ್ಷಾಸನಗಳಿವೆ. ಅದರ ಹಿಂಭಾಗದಲ್ಲಿ ಪೂರ್ಣಕಲಶ, ಸಿಂಹ, ಕೊಳಲುವಾದಕ ಮೊದಲಾದ ಶಿಲ್ಪಗಳನ್ನು ಕೆತ್ತಲಾಗಿದೆ. ಮುಖಮಂಟಪದಲ್ಲಿ ನಾಲ್ಕು ಕಂಬಗಳಿದ್ದು ಅವುಗಳ ಬೋದುಗೆಗಳು ದುಂಡನೆಯ ತಲೆದಿಂಬುಗಳಂತೆ ವೃತ್ತಾಕಾರವಾಗಿ ಇರುವುವು. ಈ ಅಲಂಕರಣೆಗಳು ದೇವಾಲಯ ವಾಸ್ತುಶಿಲ್ಪದಲ್ಲಿ ಒಡಮೂಡಿರುವ ವಿಶೇಷಗಳಲ್ಲಿ ಒಂದಾಗಿದೆಯೆಂದು ಅಭಿಪ್ರಾಯಿಸಬಹುದು. ಹೊರಗೋಡೆಗಳು ಮುಂಚಾಚುಗಳಿಂದ ಕೂಡಿವೆ. ಸಭಾಮಂಟಪ ಮತ್ತು ಪ್ರಧಾನ ಗರ್ಭಗೃಹಗಳ ನಡುವೆ ವಿಶಾಲವಾದ ಅಂತರಾಳವಿದ್ದರೆ, ಗರ್ಭಗೃಹದ ಬಾಗಿಲುವಾಡದ ಮೇಲ್ಭಾಗದಲ್ಲಿ ಕಲಾತ್ಮಕ ಕೆತ್ತನೆಯಿದೆ. ವಿಶಿಷ್ಟ ಬಗೆಯ ಮಕರ ತೋರಣವಿದ್ದು ಇಷ್ಟು ಹೊರತುಪಡಿಸಿದರೆ ದೇವಾಲಯದಲ್ಲಿ ಹೆಚ್ಚಿನ ಶಿಲ್ಪಾಲಂಕಾರವಿಲ್ಲ.

**ಕಾಶಿವಿಶ್ವನಾಥ ದೇವಾಲಯ** : ಮಲ್ಲಿಕಾರ್ಜುನ ದೇವಾಲಯದ ಉತ್ತರಕ್ಕೆ ಸುಮಾರು ಹತ್ತು ಅಡಿ ಅಂತರದಲ್ಲಿರುವ ಮಲ್ಲಿಕಾರ್ಜುನ ದೇವಾಲಯವಿದೆ. ಕ್ರಿ.ಶ. ಸುಮಾರು ೭೫೦ ರ ಕಾಲಕ್ಕೆ ಸೇರಿದ ಈ ದೇವಾಲಯದ ತಲವಿನ್ಯಾಸದಲ್ಲಿ ಅಂತರಾಳ ಮತ್ತು ಸಭಾಮಂಟಪದ ಭಾಗಗಳನ್ನು ರಚಿಸಿರುವುದನ್ನು ಕಾಣುತ್ತೇವೆ. ಇದರಲ್ಲಿ ಯಾವುದೇ ರೀತಿಯ ಪ್ರದಕ್ಷಣಾಪಥವಿಲ್ಲ. ಹೀಗಾಗಿ ಇದು ನಿರಾಂಧಾರ ದೇವಾಲಯ ಎಂಬುದು ತಿಳಿದುಬರುತ್ತದೆ. ಮುಖಮಂಟಪದ ಭಾಗವು ಪ್ರಸ್ತುತ ಇಲ್ಲವಾದರು ಅದರ ಕುರುಹುಗಳಿಂದ ಅಲ್ಲಿ ಮಂಟಪವಿತ್ತು ಎಂಬ ವಿಷಯವನ್ನು ಸ್ಪಷ್ಟಪಡಿಸಬಹುದು. ಮುಂಭಾಗದಲ್ಲಿ ಸುಮಾರು ಮೂರು ಅಡಿ ಎತ್ತರದ ಅಧಿಷ್ಠಾನದ ಮೇಲೆ ನಂದಿ ವಿಗ್ರಹವಿದೆ. ದೇವಾಲಯದ ಆಕರ್ಷಕವಾದ ಶಿಖರವು ನಾಗರ ಶೈಲಿಯದ್ದು ನೋಡಲು ಆಕರ್ಷಕವಾಗಿದೆ. ನಾಲ್ಕೂ ಬದಿಗಳಲ್ಲಿ ಐದು ಲಂಬ ಪಟ್ಟಿಕೆಗಳು ಶಿಖರದ ತಳದಿಂದ ತುದಿಯವರೆಗೂ ಚಾಚಿವೆ. ಮಧ್ಯದ ಮೂರು ಪಟ್ಟಿಕೆಗಳು ಗವಾಕ್ಷಿ ವಿನ್ಯಾಸಗಳಿಂದಾಗಿವೆ. ಶಿಖರದ ನಾಲ್ಕು ಮೂಲೆಗಳಲ್ಲಿ ಅಮಲಕಗಳು ಮತ್ತು ಚೈತ್ಯಗವಾಕ್ಷಗಳು ಒಂದರ ಮೇಲೆ ಇನ್ನೊಂದರಂತೆ

ಪುನರಾವೃತ್ತಿಯಾಗುತ್ತಾ ನಿರ್ಮಾಣಗೊಂಡಿವೆ. ಗರ್ಭಗೃಹ ದ್ವಾರದ ಎರಡೂ ಬದಿಗಳಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಗರ್ಭಗೃಹದಲ್ಲಿ ಕಪ್ಪುಶಿಲೆಯ ಲಿಂಗವಿದೆ, ಯೋನಿ ಪೀಠವು ಮರಳು ಕಲ್ಲಿನದು[೪೫] ಛತ್ತಿನಲ್ಲಿ ಕಮಲ ಪುಷ್ಪದ ಸುಂದರ ಚಿತ್ತಾರವಿದೆ.

ಸಭಾಮಂಟಪವು ೧೦ ಅರ್ಧ ಕಂಬಗಳು ಮತ್ತು ನಾಲ್ಕು ಬಿಡಿ ಕಂಬಗಳಿಂದ ನಿರ್ಮಿತವಾಗಿವೆ. ಸಭಾಮಂಟಪದ ಅಲಂಕರಣ ಮತ್ತು ಕಂಬ ವಿನ್ಯಾಸಗಳು ಆಲಂಪುರದಲ್ಲಿರುವ ವಿಶ್ವಬ್ರಹ್ಮ ದೇವಾಲಯದ ಶೈಲಿಯನ್ನು ಹೋಲುತ್ತವೆ. ಇಲ್ಲಿನ ಕಂಬಗಳಲ್ಲಿ ಹಲವು ರೀತಿಯ ಮೂರ್ತಿಶಿಲ್ಪಗಳು ತ್ರಿಪುರಾಂತಕ ಶಿವನು ರಥದಲ್ಲಿ ನಿಂತು ಬಾಣ ಬಿಡುತ್ತಿರುವ ದೃಶ್ಯವಿದ್ದು ಬ್ರಹ್ಮನು ಶಿವನ ಸಾರಥಿಯಾಗಿದ್ದಾನೆ. ಕೆಳಗೆ ಮೂಲೆಯಲ್ಲಿ ಸಿಂಹವಾಹಿನಿ ದುರ್ಗೆಯ ಚಿಕಣಿ ಶಿಲ್ಪವಿದೆ. ಈ ಶಿಲ್ಪಗಳು ಆಗ್ನೇಯ ಕಂಬದ ಪೂರ್ವ ಭಾಗದಲ್ಲಿದೆ. ಲಿಂಗೋದ್ಭವ ಮೂರ್ತಿ ಲಿಂಗದ ಮೇಲೆ ಕಮಲದ ಬಲಗಡೆ ಬ್ರಹ್ಮ ಮತ್ತು ಎಡಗಡೆ ವಿಷ್ಣು ಕೈ ಮುಗಿದು ನಿಂತಿರುವಂತೆ ಕೆತ್ತಲಾಗಿದೆ, ಈ ಮೂರ್ತಿಶಿಲ್ಪ ನೈಋತ್ಯ ಕಂಬದ ಪೂರ್ವಭಾಗದಲ್ಲಿದೆ, ಚತುರ್ಭುಜ ಶಿವನು ಪಾದದವರೆಗೆ ಚಾಚಿದ ಅಧೋವಸ್ತ್ರ ಧರಿಸಿದ್ದಾನೆ. ಕೈಯಲ್ಲಿ ಸರ್ಪವಿದ್ದು,[೪೬] ಆತನ ಬಲಬದಿಯಲ್ಲಿ ನರ್ತಿಸುವ ಭೃಂಗಿ ಗೋಚರಿಸುತ್ತಾನೆ. ಈ ಮೂರ್ತಿಶಿಲ್ಪದ ವಾಯುವ್ಯ ಕಂಬದ ಪೂರ್ವಭಾಗದಲ್ಲಿ ದೇವಕಿಯು ಮಂಚದ ಮೇಲೆ ಮಲಗಿದ್ದಾಳೆ. ವಸುದೇವನು ಬಾಲಕೃಷ್ಣನನ್ನು ಯಶೋಧೆಯ ಮಡಿಲಿಗೆ ನೀಡುತ್ತಿದ್ದಾನೆ. ಅಲ್ಲದೇ ಈ ಮೂರ್ತಿಶಿಲ್ಪದ ಕೆಳಭಾಗದಲ್ಲಿ ಗೋವರ್ಧನಗಿರಿ ಎತ್ತುವ ಮತ್ತು ಕಾಳಿಯನ್ನು ಮರ್ದಿಸುವ ದೃಶ್ಯಗಳಿವೆ. ದೇವಾಲಯದ ಹೊರ ಗೋಡೆಗಳ ಮೇಲ್ಭಾಗದಲ್ಲಿ ಹೂಮಾಲೆಯನ್ನು ಹೊತ್ತುಕೊಂಡು ಹಾರುತ್ತಿರುವ ಗಣರ ಸಾಲಿನ ಸುಂದರವಾದ ಕೆತ್ತನೆಯಿದೆ.

**ಚಂದ್ರಶೇಖರ ದೇವಾಲಯ** : ಈ ದೇವಾಲಯವು ಗಳಗನಾಥ ಗುಡಿಯ ದಕ್ಷಿಣಕ್ಕೆ ಮತ್ತು ವಿಜಯೇಶ್ವರ ದೇವಾಲಯಗಳಿಗೆ ದಕ್ಷಿಣ ಮತ್ತು ಉತ್ತರ ಭಾಗಕ್ಕೆ ಸಮೀಪದಲ್ಲಿನ ಸಂಕೀರ್ಣ ದೇವಾಲಯಗಳಲ್ಲಿ ಒಂದಾಗಿದೆ. ಇದರ ವಾಸ್ತುಶಿಲ್ಪದ ತಳವಿನ್ಯಾಸದಲ್ಲಿ ಗರ್ಭಗೃಹ ಮತ್ತು ಮುಖಮಂಟಪದ ಭಾಗಗಳಿಂದ ರಚನೆಗೊಂಡಿದೆ. ಇದು ಅತ್ಯಂತ ಸರಳವಾಗಿ ನಿರ್ಮಾಣಗೊಂಡಿದ್ದು, ಗರ್ಭಗೃಹದ ಮೇಲೆ ಯಾವುದೇ ರೀತಿಯ ಶಿಖರಗಳು ಕಂಡುಬರುವುದಿಲ್ಲ. ಅಲ್ಲದೇ ಯಾವುದೇ ಮೂರ್ತಿಶಿಲ್ಪ, ಉಬ್ಬುಶಿಲ್ಪ, ಜಾಲಂಧರ ಹಾಗೂ ಇತರೆ ಲಕ್ಷಣಗಳು ಚಂದ್ರಶೇಖರ ದೇವಾಲಯದ ವಾಸ್ತುಶಿಲ್ಪದ ರಚನೆಗಳಲ್ಲಿ

ಕಂಡುಬರುವುದಿಲ್ಲ. ಗರ್ಭಗೃಹದ ಬಾಗಿಲಿನಲ್ಲಿ ದ್ವಾರಪಾಲಕರ ಶಿಲ್ಪಗಳಿದ್ದು, ಅವುಗಳು ಕೂಡ ಸಾಕಷ್ಟು ಹಾಳಾಗಿವೆ. ಆದರೆ ಬಲಭಾಗದ ದ್ವಾರಪಾಲಕ ಮೂರ್ತಿಶಿಲ್ಪ ಮಾತ್ರ ಅಲ್ಪಸ್ವಲ್ಪ ಉಳಿದಿವೆ. ದೇವಾಲಯದ ಮುಂಭಾಗದಲ್ಲಿ ಸುಮಾರು ಎರಡು ಅಡಿ ಎತ್ತರದ ಪೀಠದ ಮೇಲ ನಂದಿ ಶಿಲ್ಪವಿದೆ. ಇದನ್ನು ಗಂಟಾಸರ ಮತ್ತು ಹಣೆಪಟ್ಟಿಯಿಂದ ಅಲಂಕರಿಸಿರುವಂತೆ ಕೆತ್ತಲಾಗಿದೆ. ಇದರ ನಿರ್ಮಾಣದ ಕುರಿತು ಯಾವುದೇ ಶಾಸನ ಹಾಗೂ ಇತರೆ ಲಿಖಿತ ದಾಖಲೆಗಳಿಲ್ಲ. ಹೀಗಾಗಿ ಈ ದೇವಾಲಯದ ಪ್ರಾಚೀನತೆ ತಿಳಿಯುವುದು ಕಷ್ಟವಾಗಿದೆ. ಆದರೆ ಗರ್ಭಗೃಹದಲ್ಲಿನ ಲಿಂಗದ ಆಧಾರದಿಂದ ಚಂದ್ರಶೇಖರ ದೇವಾಲಯವನ್ನು ಕ್ರಿ.ಶ. ೭೫೦ ರಲ್ಲಿ ನಿರ್ಮಿಸಲಾಗಿದೆ ಎನ್ನಬಹುದು. ಇದಕ್ಕೆ ಪೂರಕವಾಗಿ 'ಜಾರ್ಜ್ ಮಿಶೆಲ್‌ರು' ಈ ದೇವಾಲಯದ ವಾಸ್ತುಶಿಲ್ಪದ ಲಕ್ಷಣಗಳ ಹಿನ್ನೆಲೆಯಿಂದ ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣಗೊಂಡಿದೆ ಎಂದು ಅಂದಾಜಿಸಿದ್ದಾರೆ. ಪ್ರಸ್ತುತ ಭಾರತೀಯ ಪುರಾತತ್ವ ಇಲಾಖೆ ವ್ಯಾಪ್ತಿಗೊಳಪಟ್ಟಿರುವ ಚಂದ್ರಶೇಖರ ದೇವಾಲಯವನ್ನು ಇದೇ ಇಲಾಖೆಯವರು ಜೀರ್ಣೋದ್ಧಾರಗೊಳಿಸಿದ್ದಾರೆ.[೪೭]

**ಪಟ್ಟದಕಲ್ಲಿನ ಮಹತ್ವ**

ಕಲಾ ಇತಿಹಾಸಕಾರ ಕ್ಯಾಥ್ಲೀನ್ ಕಮ್ಮಿಂಗ್ಸ್ ಅವರ ಪ್ರಕಾರ, ಪಟ್ಟದಕಲ್ಲಿನ ಸ್ಮಾರಕಗಳು ಡೆಕ್ಕನ್ ಪ್ರದೇಶದಲ್ಲಿ ಧರ್ಮ, ಸಮಾಜ ಮತ್ತು ಸಂಸ್ಕೃತಿಯ, ವಿಶೇಷವಾಗಿ ಹಿಂದೂ ಮತ್ತು ಜೈನ ಧರ್ಮದ ದೇವಾಲಯಗಳ ನಿರ್ಮಾಣಕ್ಕೆ ಐತಿಹಾಸಿಕವಾಗಿ ಮಹತ್ವದ ಉದಾಹರಣೆಯಾಗಿವೆ ಹಾಗೂ ೮ನೇ ಶತಮಾನದ ಸಂದರ್ಭದಲ್ಲಿನ ಭಾರತದ ಧಾರ್ಮಿಕ ದೃಷ್ಟಿಕೋನದ ಅಭಿವ್ಯಕ್ತಿಯಾಗಿದೆಯೆಂದು ಅಭಿಪ್ರಾಯಿಸಲಾಗಿದೆ. ಹಿಂದೂ ಧರ್ಮಶಾಸ್ತ್ರದಲ್ಲಿ ಧರ್ಮ (ಕರ್ತವ್ಯ, ಸದ್ಗುಣ, ಸದಾಚಾರ) ಮತ್ತು ಮೋಕ್ಷ (ವಿಮೋಚನೆ) ಎಂಬ ಸಂಘರ್ಷದ ಪರಿಕಲ್ಪನೆಗಳನ್ನು ವ್ಯಕ್ತಪಡಿಸುತ್ತಾರೆ. ವಿಶೇಷವಾಗಿ ಪಾಶುಪತ ಶೈವಪಂಥಕ್ಕೆ ಸೇರಿದ ಚಿತ್ರಗಳು, ಕೆಲವು ನಾಸ್ತಿಕ ಚಿತ್ರಗಳು ಅಲ್ಲದೇ ಅವುಗಳ ಸಾಪೇಕ್ಷ ಸ್ಥಳ ಮತ್ತು ಅನುಕ್ರಮಣಿಕೆಯ ಅಂಶಗಳನ್ನು ಒಳಗೊಂಡಿರುವ ಹಾಗೂ ಹಳ್ಳಿಗಾಡಿನ ಜನರ ಮತ್ತು ಸಾಂಸ್ಕೃತಿಕ ಜೀವನ ತ್ಯಜಿಸುವ ಸನ್ಯಾಸಿಗಳ ಧಾರ್ಮಿಕ ಸಂಪ್ರದಾಯದ ಐತಿಹಾಸಿಕ ವಿವರಗಳನ್ನು ಹೇಗೆ ವ್ಯಕ್ತಪಡಿಸುತ್ತದೆ ಎಂದು ಅವರು ಹೇಳುತ್ತಾರೆ.[೪೮]

ಧರ್ಮದ ಅಭಿವ್ಯಕ್ತಿ ವಿಶೇಷವಾಗಿ ರಾಜ-ಧರ್ಮ (ರಾಜಯೋಗ ಪ್ರಾಧಿಕಾರ ಮತ್ತು ಕರ್ತವ್ಯ) ಮತ್ತು ಮೋಕ್ಷ ಸಾಧನೆಗೆ ಉದಾಹರಣೆಯಾಗಿ ಪಟ್ಟದಕಲ್ಲಿನ ವಿವಿಧ

ದೇವಾಲಯಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ರಾಮಾಯಣದಿಂದ ರಾಮನ ಜೀವನ ಕಥೆಯ ಉದಾಹರಣೆಗಳನ್ನು ಬಳಸಿಕೊಂಡು ಪ್ರಾಚೀನ ಸಂದರ್ಭದಲ್ಲಿ ವಿವಿಧ ಆಯಾಮಗಳಲ್ಲಿ ಚಿತ್ರಿಸಲಾಗಿದೆ. ಆದರೆ ಎರಡನೆಯದನ್ನು ಲಕುಲೀಶ, ನಟರಾಜ, ಯೋಗ ಮತ್ತು ಹಲವಾರು ತಪಸ್ವಿಗಳ ಚಿತ್ರಗಳೊಂದಿಗೆ ವ್ಯಕ್ತಪಡಿಸಲಾಗಿದೆ.[೪೯] ಪಟ್ಟದಕಲ್ಲಿನಲ್ಲಿ ವಿಶೇಷವಾಗಿ ಕಂಡುಬರುವ ಇತರ ಚಿತ್ರಣವೆಂದರೆ ಪುರುಷ ಮತ್ತು ಪ್ರಕೃತಿ ನಡುವೆ ಆತ್ಮ ಮತ್ತು ವಸ್ತು, ಪುಲ್ಲಿಂಗ ಮತ್ತು ಸ್ತ್ರೀಲಿಂಗ.[೫೦]

ಪಟ್ಟದಕಲ್ಲಿನಲ್ಲಿರುವ ದೇವಾಲಯಗಳು ಏಕೀಕರಣ ಮತ್ತು ಪ್ರಯೋಗದತ್ತ ಚಾಲುಕ್ಯರ ಒಲವನ್ನು ಸಂಕೇತಿಸುತ್ತವೆ. ಇದರ ಪರಿಣಾಮವಾಗಿ ಉತ್ತರ ಮತ್ತು ದಕ್ಷಿಣ ಭಾರತದ ವಾಸ್ತುಶಿಲ್ಪ ಶೈಲಿಗಳು ವಿಲೀನಗೊಳ್ಳುತ್ತವೆ. ಪಟ್ಟದಕಲ್ಲು, ಐಹೊಳೆ ಮತ್ತು ಬಾದಾಮಿಯಲ್ಲಿನ ವಾಸ್ತುಶಿಲ್ಪವನ್ನು ಒಟ್ಟಿಗೆ ನೋಡಿದಾಗ ಇದು ವಿಶೇಷವಾಗಿ ಸ್ಪಷ್ಟವಾಗುತ್ತದೆ. ಐಹೊಳೆ ೫ನೇ ಶತಮಾನದಲ್ಲಿ ಈ ಶೈಲಿಗಳ ಏಕೀಕರಣಕ್ಕೆ ಕಾರಣವಾಗುವ ಪರಿಕಲ್ಪನೆಗಳಿಗೆ ಮಾದರಿಯಾಗಿ ಕಾರ್ಯನಿರ್ವಹಿಸಿತು. ಕ್ರಿ.ಶ. ೬ ಮತ್ತು ೭ನೇ ಶತಮಾನಗಳಲ್ಲಿ ಈ ವಾಸ್ತುಶಿಲ್ಪವು ಬಾದಾಮಿಯಲ್ಲಿ ಮತ್ತಷ್ಟು ಪರಿಷ್ಕರಿಸಲಾಯಿತು. ಇದರ ಪರಾಕಾಷ್ಠೆಯು ಯುನೆಸ್ಕೋ ವಿವರಿಸಿದಂತೆ, "೭ ಮತ್ತು ೮ನೇ ಶತಮಾನಗಳಲ್ಲಿ, ಉತ್ತರ ಮತ್ತು ದಕ್ಷಿಣ ಭಾರತದ ವಾಸ್ತುಶಿಲ್ಪದ ಸಾಮರಸ್ಯದ ಮಿಶ್ರಣವನ್ನು ಸಾಧಿಸಿದ ಸಾರಸಂಗ್ರಹಿತ ಕಲೆಯಾಗಿದೆ."[೫೧]

ಪಟ್ಟದಕಲ್ಲಿನಲ್ಲಿ ವಿಭಿನ್ನವಾದ ಅವಶೇಷಗಳಿಂದ ಸೂಚಿಸಲ್ಪಟ್ಟಂತೆ ಗ್ರಾಮವು ಪ್ರಾಚೀನ ಕಾಲದಿಂದಲೂ ವಸತಿ ನೆಲೆಯ ಪ್ರದೇಶವಾಗಿದೆ. ಈ ಗ್ರಾಮದ ಉತ್ತರ ದಿಕ್ಕಿನ ಉತ್ತರದ ದೇವಾಲಯಗಳ ಒಂದು ಪ್ರಮುಖ ಸಮೂಹ, ದಕ್ಷಿಣ ಭಾಗದಲ್ಲಿ ಮತ್ತೊಂದು ಸಣ್ಣ ಸಂಕೀರ್ಣವಿದೆ. ಇದನ್ನು ಗ್ರಾಮವೆನಿಸಿದರೆ ಒಂದು ಸಣ್ಣ ರಕ್ಷಣಾತ್ಮಕ ನಿಬಂಧನೆ, ಅಧಿಕಾರದ ಸ್ಪಷ್ಟ ಸ್ಥಾನವಿಲ್ಲ, ಆದರೆ ಧಾರ್ಮಿಕ ಸ್ಮಾರಕಗಳ ಅಗಾಧ ಉಪಸ್ಥಿತಿ, ದೊಡ್ಡದಾದ ಮತ್ತು ಸಣ್ಣ, ಇವೆಲ್ಲವೂ ಪಟ್ಟದಕಲ್ಲು ಪ್ರಾಚೀನ ಕಾಲದಲ್ಲಿ ಒಂದು ಪವಿತ್ರ ಧಾರ್ಮಿಕ ಕೇಂದ್ರವಾಗಿತ್ತು ಎಂದು ಸೂಚಿಸುತ್ತದೆ. ಇದು ರಾಜಮನೆತನದ ವಿಧಿವಿಧಾನವನ್ನು (ರಾಜಾಭಿಷೇಕಾ) ನಡೆಸಿದ ಸ್ಥಳ ಎಂಬ ಖ್ಯಾತಿಯನ್ನು ಹೊಂದಿದೆ. ಅದನ್ನು ಹೇಳುವ ಯಾವುದೇ ಸಮಕಾಲೀನ ದಾಖಲೆಗಳಿಲ್ಲ. ಆದರೆ ಇದು ಸಾಕಷ್ಟು ನಂಬಲರ್ಹವಾಗಿದೆ. ಪಟ್ಟದಕಲ್ಲು ಅಥವಾ ಪಟ್ಟದಕಿಸುವೊಳಲ್ ಎಂಬ ಹೆಸರು ಇದನ್ನು ಸೂಚಿಸುತ್ತದೆ, ಏಕೆಂದರೆ ಪಾನಾ ಎಂಬುದು ರಾಜನ ತಲೆಯ ಮೇಲೆ ಪವಿತ್ರ ಸಮಯದಲ್ಲಿ ಇರಿಸಲಾಗಿರುವ (ರಾಜಯೋಗ್ಯ ಕರಾರು

ಪತ್ರ) ಆಚರಣೆಯ ಕಲ್ಲಿನ ಆಸನವಾಗಿದೆ. ದೇವಾಲಯಗಳ ಅಡಿಪಾಯವನ್ನು ರಾಜ ವಿಜಯಾದಿತ್ಯ ಮತ್ತು ೨ನೇ ವಿಕ್ರಮಾದಿತ್ಯನ ರಾಣಿಯರ ಶಾಸನಗಳು ದಾಖಲಿಸಿವೆ. ಪಟ್ಟದಕಲ್ಲು ಬಹುಶಃ ತಮ್ಮ ಅಧಿಕಾರ ಕೇಂದ್ರವನ್ನು ಬಾದಾಮಿಯಲ್ಲಿ ಸ್ಥಾಪಿಸಿದ ರಾಜರ ಪವಿತ್ರ ಕೇಂದ್ರವಾಗಿದೆ. ನೆರೆಹೊರೆಯಲ್ಲಿ ಮತ್ತೊಂದು ಪವಿತ್ರ ನಗರವಿದೆ, ಅದು ಮಹಾಕೂಟ. ಮಹಾಕೂಟ ನಿಜವಾಗಿಯೂ ಹೆಚ್ಚಿನ ಪ್ರಾಮುಖ್ಯತೆಯ ಪವಿತ್ರ ಕೇಂದ್ರವಾಗಿದೆ. ಆದರೆ ಇದು ವಿಭಿನ್ನವಾಗಿದೆ, ಏಕೆಂದರೆ ಅದು ಒಂದೇ ರಾಜ, ಮೂಲ ಮತ್ತು ಪಾತ್ರವನ್ನು ಹೊಂದಿಲ್ಲ. ಪಟ್ಟದಕಲ್ಲಿನ ಇತಿಹಾಸವು ಬಾದಾಮಿಯ ಚಾಲುಕ್ಯ ರಾಜರ ಪೂರ್ಣ ಅವಧಿಯೊಂದಿಗೆ ಹೋಗುತ್ತದೆ. ಪ್ರಾಚೀನ ಕಾಲದಿಂದಲೂ ಪಟ್ಟದಕಲ್ಲು ಹೀಗೆ ಧಾರ್ಮಿಕ ಕೇಂದ್ರವಾಗಿ ಅದರ ಹಲವು ಚಟುವಟಿಕೆಗಳನ್ನು ಸಾವಿರಾರು ವರ್ಷಗಳ ಮುಂದುವರೆದುಕೊಂಡು ಬಂದಿದೆ ಎಂದು ಶಾಸನಗಳು ದೃಢೀಕರಿಸುತ್ತವೆ.

ಪಟ್ಟದಕಲ್ಲು ದೇವಾಲಯದ ಪ್ರತಿಯೊಂದು ಗರ್ಭಗೃಹದಲ್ಲಿ ಒಂದೊಂದು ಲಿಂಗ ಇದೆ. ಅವುಗಳ ಪ್ರತಿಯೊಂದರಲ್ಲೂ ದಕ್ಷಿಣ ಬಾಹ್ಯ ಭಿತ್ತಿಯ ಮೇಲಿರುವ ಒಂದು ಜಾಗದಲ್ಲಿ ಲಕುಲೀಶನ ಚಿತ್ರವಿದೆ. ಪಟ್ಟದಕಲ್ಲು ಒಂದು ಶೈವ ಕೇಂದ್ರ ಎಂದು ಹೇಳಲು ಇವು ಸಾಕಷ್ಟು ಪೂರಕವಾದ ಆಕರಗಳಾಗಿವೆ. ಅದು ಲಿಂಗ ಪ್ರತಿನಿಧಿಸುವ ಸಾಧ್ಯವಾದ ಪೂಜಾ ಕೇಂದ್ರವಾಗಿ ಕಂಡುಬರುತ್ತದೆ. ವಿಜಯೇಶ್ವರ ದೇವಾಲಯದ ಕಂಬದ ಮೇಲೆ ವಿದ್ಯಾಶಿವ ಎಂಬ ಹೆಸರನ್ನು ಕೆತ್ತಲಾಗಿದೆ. ಕ್ರಿ.ಶ. ೭೫೪ರ ಸಂಸ್ಕೃತ ಶಾಸನದಲ್ಲಿ ಉಲ್ಲೇಖಿಸಿರುವಂತೆ, ವಿಜಯೇಶ್ವರ ದೇವಾಲಯದಲ್ಲಿ ಕೆತ್ತಲಾದ ಕಂಬದಲ್ಲಿ ಪಾಶುಪತ ಪಾದ್ರಿಯ ಚಿತ್ರ ೧೨ನೇ ಶತಮಾನದವರೆಗೆ ಪ್ರಾಬಲ್ಯವನ್ನು ತೋರಿಸಿ ಶೈವಸಿದ್ಧಾಂತ ತಂತ್ರಗಳಲ್ಲಿ ವಿವರಿಸಿದ ಆಚರಣೆಗಳಲ್ಲಿ ಕಾರ್ಯ ನಿರ್ವಹಿಸುವ ಪುರೋಹಿತರಲ್ಲಿ ವಿದ್ಯಾಶಿವ, ಜೈನಶಿವಾ ಎಂಬ ಹೆಸರುಗಳು ಪ್ರಚಲಿತದಲ್ಲಿದ್ದದ್ದು ತಿಳಿಯುತ್ತವೆ. ಲೋಕೇಶ್ವರ, ತ್ರೈಲೋಕ್ಯೇಶ್ವರ, ವಿಜಯೇಶ್ವರ, ಪಾಪನಾಥ ದೇವಾಲಯಗಳ ಸುತ್ತಮುತ್ತಲ ಪ್ರದೇಶಗಳಲ್ಲಿ ಸ್ಥಾಪಿಸಲಾದ ಹಲವಾರು ಸಣ್ಣ ಲಿಂಗಗಳು ಪಾಶುಪತ ಮಹಾವ್ರತದ ಆಚರಣೆಗೆ ಸಾಕ್ಷಿಯಾಗಿ ಕಂಡುಬರುತ್ತವೆ. ಅವು ತೀರ್ಥಯಾತ್ರೆಯ ಅಭ್ಯಾಸದ ಸಾಕ್ಷಿಗಳಾಗಿರಬಹುದು. ಈ ಪವಿತ್ರ ಕೇಂದ್ರದಲ್ಲಿ ತ್ರಿಶೂಲ ಸ್ತಂಭವನ್ನು ಸ್ಥಾಪಿಸಲು ನದಿಯ ಉತ್ತರ ಭಾಗದ ಸ್ಥಳದಿಂದ ಬಂದ ಜೈನಶಿವಾ ಮತ್ತು ಅವರ ಮಾತುಗಳನ್ನು ಉಲ್ಲೇಖಿಸಲು, "ಅದೃಷ್ಟಶಾಲಿ ಭಗವಾನ್ ವಿಜಯೇಶ್ವರರ ನಿವಾಸದಲ್ಲಿ ಆಶ್ರಯ ಪಡೆದಿದ್ದಾನೆ"[೫೨] ಎಂಬುದು ಒಂದು ಗಮನಾರ್ಹ ಉದಾಹರಣೆಯಾಗಿದೆ. ಹಂಪಿಗೆ

ಹೋಲಿಸಬಹುದಾದ ಪಟ್ಟದಕಲ್ಲು ಒಂದು ಪ್ರಮುಖ ಯಾತ್ರಾ ಕೇಂದ್ರವಾಗಿದೆ. ಅಲ್ಲಿನ ಚತುರ್ಮುಖ ಲಿಂಗದಲ್ಲಿ ವಿರೂಪಾಕ್ಷ ಆರಾಧನೆಯನ್ನು ನಡೆಸುತ್ತಿದ್ದರು ಎಂಬುದಕ್ಕೆ ಈ ಲಿಂಗಗಳೇ ಸಾಕ್ಷಿಯಾಗಿವೆ.

ದೇವಾಲಯದಲ್ಲಿ ನಡೆಸುವ ಆಚರಣೆಗಳ ಬಗ್ಗೆ ನೇರ ಸೂಚನೆಗಳನ್ನು ನೀಡುವುದಿಲ್ಲ. ಆದರೆ ಆ ಸಮಯದಲ್ಲಿ ಪ್ರಚಲಿತದಲ್ಲಿದ್ದ ಶೈವಸಿದ್ಧಾಂತ ಆಚರಣೆಗಳ ಪ್ರಾಬಲ್ಯ ನಮಗೆ ತಿಳಿದಿದೆ. ಈ ಶೈವ ಚಳವಳಿಯ ಅತ್ಯಂತ ಹಳೆಯ ತಂತ್ರಗಳು ಆ ಅವಧಿಗೆ ಸೇರಿದವು ಮತ್ತು ಭಾರತದಾದ್ಯಂತ ವಿಸ್ತರಿಸಿಕೊಂಡವುಗಳಾಗಿವೆ. ಪಾಶುಪತ ತಪಸ್ವಿಗಳಂತಹ ಪಾಶುಪತಸೂತ್ರ ತಪಸ್ವಿಗಳ ಅಭ್ಯಾಸಗಳ ಬಗ್ಗೆ ನಮ್ಮಲ್ಲಿ ಪಠ್ಯಗಳಿವೆ. ಅವರ ಅಭ್ಯಾಸಗಳಲ್ಲಿ ಜ್ಞಾನ ಸೇರಿದೆ. ಪೂಜಾ ಪ್ರಕ್ರಿಯೆ, ಸ್ಥಾಪಿಸುವ ಸಂಕೀರ್ಣ ಆಚರಣೆಗಳು, ಸ್ಮಾರಕದ ಪವಿತ್ರೀಕರಣ, ಹಬ್ಬಗಳನ್ನು ಆಚರಿಸಲು ಇತ್ಯಾದಿ ಉಲ್ಲೇಖದ ಏಕೈಕ ಪಠ್ಯಗಳು ನಮ್ಮ ದಿನಗಳವರೆಗೆ ಉಳಿದುಕೊಂಡಿರುವ ಶೈವಸಿದ್ಧಾಂತ ತಂತ್ರಗಳು. ಪಟ್ಟದಕಲ್ಲಿನಲ್ಲಿ ಪ್ರಚಲಿತದಲ್ಲಿರುವ ಲಿಂಗ ಪೂಜೆ ಶೈವಸಿದ್ಧಾಂತಕ್ಕೆ ಸಮರ್ಪಿಸಲಾಗಿದೆ. ಲಿಂಗ ಎಂಬ ಪದವನ್ನು ಅದರ ಮೂಲ ಅರ್ಥದಲ್ಲಿ ಚಿಹ್ನೆಯಾಗಿ ಮಾತ್ರ ತೆಗೆದುಕೊಳ್ಳಲಾಗಿದೆ. ಮಾನವನ ಮಾತು ಮತ್ತು ಆಲೋಚನೆಗೆ ಪ್ರವೇಶಿಸಲಾಗದ ಪರಶಿವನ ಅಭಿವ್ಯಕ್ತಿಯ ಮೊದಲ ಹಂತವೆಂದರೆ ಶೈವಸಿದ್ಧಾಂತ.[೫೩] ಶೈವ ಮೂಲತಃ ಬ್ರಹ್ಮಂತ್ರಗಳು ಎಂಬ ಐದು ಮಂತ್ರಗಳಿಂದ ಮಾಡಲ್ಪಟ್ಟ ಒಂದು ಘಟಕವಾಗಿದೆ. ಜ್ಞಾನದ ಮುಖ್ಯ ಹಂತಗಳಲ್ಲಿ ನಿರಂತರವಾಗಿ ಪಠಿಸುವ ಐದು ಮಂತ್ರಗಳು ಆಧಾರಿತ ಮುಖಗಳಾಗಿ ವ್ಯಕ್ತವಾಗುತ್ತವೆ. ವಿರಳವಾಗಿ ಲಿಂಗದಲ್ಲಿ ಪ್ರತಿನಿಧಿಸಲ್ಪಡುತ್ತವೆ, ಅವುಗಳೆಂದರೆ ಮೇಲಕ್ಕೆ ನೋಡುವುದು, ತತ್ಪುರುಷ ಪೂರ್ವಕ್ಕೆ ನೋಡುವುದು, ದಕ್ಷಿಣಕ್ಕೆ ಅಘೋರಾ, ಪಶ್ಚಿಮಕ್ಕೆ ಸದೋಜಾತ, ಉತ್ತರಕ್ಕೆ ವಾಮದೇವ. ಪ್ರತಿಯೊಂದು ಮುಖಕ್ಕೂ ನಿರ್ದಿಷ್ಟ ಸ್ವರೂಪವಿದೆ. ಅಘೋರಾ ಭಯಂಕರ ಅಂಶ ಸದ್ಯೋಜಾತ ಧ್ಯಾನಸ್ಥ ಮತ್ತು ಪ್ರಶಾಂತ ಅಂಶ, ವಾಮದೇವ ಸುಂದರ ಮತ್ತು ಸ್ತ್ರೀಲಿಂಗ ಅಂಶ. ಕೆಲವು ದೇವಾಲಯಗಳ ಬಾಹ್ಯ ಗೋಡೆಗಳ ಮೇಲೆ ಶೈವ ಪುರಾಣದ ವೈವಿಧ್ಯಮಯ ವ್ಯಕ್ತಿಗಳಿಂದ ಪ್ರತಿನಿಧಿಸಲ್ಪಟ್ಟಿರುವ ಶಿವನ ಪೂರ್ಣ ಅಭಿವ್ಯಕ್ತಿಯ ಮಟ್ಟದಲ್ಲಿ, ಈ ಪಾತ್ರಗಳನ್ನು ಹೊಂದಿರುವ ಚಿತ್ರಗಳನ್ನು ಹೆಚ್ಚಾಗಿ ಪ್ರದರ್ಶಿಸಲಾಗುತ್ತದೆ. ನಾಲ್ಕೂ ದಿಕ್ಕುಗಳಲ್ಲಿ ಇದನ್ನು ವಿತರಿಸಲಾಗುತ್ತದೆ. ಸಕ್ಕೈವಾ ಪರಿಕಲ್ಪನೆಯು ಖಂಡಿತವಾಗಿಯೂ ಲೋಕೇಶ್ವರ ದೇವಾಲಯದ

ಗೋಡೆಗಳ ಮೇಲೆ ವಿಭಿನ್ನ ಚಿತ್ರಗಳನ್ನು ವಿಲೇವಾರಿ ಮಾಡುವ ಕ್ರಮವನ್ನು ನಿಯಂತ್ರಿಸುವ ತತ್ವವಾಗಿದೆ.[೫೪]

ಲಿಂಗ ತ್ರಿಪಕ್ಷೀಯ, ಅದರ ಬುಡದಲ್ಲಿ ಚದರ, ಮಧ್ಯಭಾಗದಲ್ಲಿ ಅಷ್ಟಭುಜಾಕೃತಿ ಅದರ ಮೇಲಿನ ಭಾಗದಲ್ಲಿ ದುಂಡಾಗಿದೆ. ಮೂರು ಭಾಗಗಳು ಕ್ರಮವಾಗಿ ಬ್ರಹ್ಮ, ವಿಷ್ಣು ಮತ್ತು ರುದ್ರರ ಅಭಿವ್ಯಕ್ತಿಗಳಾಗಿವೆ. ಈ ತ್ರಿಪಕ್ಷೀಯ ಇತ್ಯರ್ಥವು ತ್ರೈಲೋಕೇಶ್ವರ ದೇವಾಲಯದ ಸಂದರ್ಭದಲ್ಲಿ ಸ್ಮಾರಕಕ್ಕೆ ವಿಸ್ತರಿಸಲ್ಪಟ್ಟಿದೆ. ವಿಮಾನವನ್ನು ಸೂಕ್ಷ್ಮವಾಗಿ ಗಮನಿಸಿದರೆ ಅಡಿಪಾಯ ಮತ್ತು ಪ್ರತಿಯೊಂದು ತಲಗಳು ಒಂದು ಚದರ ಯೋಜನೆಯನ್ನು ಹೊಂದಿವೆ. ಗುಮ್ಮಟದಂತಹ ಶಿಖರವನ್ನು ಬೆಂಬಲಿಸುವ ತಲವು ಅಷ್ಟಭುಜಾಕೃತಿಯ ಲಕ್ಷಣವನ್ನು ಹೊಂದಿದೆ. ಶಿಖರ ವೃತ್ತಾಕಾರದ ಮಾದರಿಯಲ್ಲಿ ನಿರ್ಮಾಣಗೊಂಡಿದ್ದು, ಇದರ ಪರಿಣಾಮವಾಗಿ ಸರ್ವೋಚ್ಚ ದೇವರ ದೈವಿಕ ಪರಿಕಲ್ಪನೆಯನ್ನು ಇದರಲ್ಲಿ ವ್ಯಕ್ತಪಡಿಸಲಾಗಿದೆ. ನಾಗರ ಮತ್ತು ದ್ರಾವಿಡ ಶೈಲಿಯ ಸ್ಮಾರಕಗಳಲ್ಲಿ ವಿವರಣಾತ್ಮಕ ವರ್ಗೀಕರಣವನ್ನು ಅನುಸರಿಸಿದ್ದೇವೆ. ಪಟ್ಟದಕಲ್ಲಿನ ದ್ರಾವಿಡ ಶೈಲಿಯು ವಿಜಯಾದಿತ್ಯನ ಕಾಲದಲ್ಲಿ ಪ್ರಾರಂಭವಾಯಿತು ಎಂದು ಅಭಿಪ್ರಾಯಿಸಲಾಗಿದೆ. ಈ ಸ್ಮಾರಕಗಳ ಸಂಪೂರ್ಣ ಮತ್ತು ಸಾಪೇಕ್ಷ ಕಾಲಾನುಕ್ರಮಗಳು ನಮಗೆ ಕಾಲ್ಪನಿಕವಾಗಿ ಉಳಿದಿವೆ. ಆದರೆ ಸ್ಮಾರಕಗಳ ನಿರ್ಣಾಯಕ ಕಾಲಾನುಕ್ರಮವನ್ನು ನೀಡುವುದು ಕಷ್ಟಕರವಾಗಿದೆ. ಸೌಂದರ್ಯದ ದೃಷ್ಟಿಕೋನದಿಂದ ಹೇಳುವುದದಾರೆ ಎರಡೂ ಶೈಲಿಗಳು ಸ್ಮಾರಕಗಳಲ್ಲಿ ಒಡಮೂಡಿವೆ. ಅವು ಎರಡನ್ನು ಒಳಗೊಂಡ ಏಕತೆಯನ್ನು ಹೊಂದಿದ ಲಕ್ಷಣಗಳೆಂದು ಪರಿಭಾವಿಸಬಹುದಾಗಿದೆ. ಅನುಪಾತದ ಸಮತೋಲನದಲ್ಲಿ ಒಂದು ಸ್ಮಾರಕವಿದೆ. ಸ್ಮಾರಕವು ನಾಗರ ಅಥವಾ ದ್ರಾವಿಡ ಆಗಿರಲಿ, ಅದು ಸಣ್ಣದಾಗಲಿ ಅಥವಾ ದೊಡ್ಡದಾಗಿರಲಿ, ಒಂದು ವಿಸ್ತಾರದಲ್ಲಿ ನಿರ್ಮಿಸಲ್ಪಟ್ಟಿದೆ. ಅಥವಾ ಮಾರ್ಪಾಡುಗಳ ಹಲವು ಹಿಗ್ಗುವಿಕೆಗಳಿಗೆ ಒಳಪಟ್ಟಿರುತ್ತದೆ. ಅದು ಸ್ಥಳೀಯ ಅಥವಾ ಮೂಲ ಪಟ್ಟದಕಲ್ಲು ಉಪ–ಶೈಲಿಯ ಎಂದು ಹೇಳಬಹುದು. ಬಾದಾಮಿ, ಮಹಾಕೂಟ, ಐಹೊಳೆ ಇತ್ಯಾದಿಗಳಲ್ಲಿನ ಇತರ ಸ್ಮಾರಕಗಳ ಶಿಲ್ಪಗಳು ಇಲ್ಲಿರುವ ಸ್ಮಾರಕಗಳು ಪರಸ್ಪರ ಹೋಲಿಕೆಯಾಗುತ್ತವೆ. ಅಲ್ಲದೇ ಮಹಾಕೂಟ ಹತ್ತಿರ ಇರುವ ಸ್ಮಾರಕಗಳು ಇನ್ನು ಹೆಚ್ಚಿನ ಸಂಬಂಧ ಹೊಂದಿವೆಯೆಂದು ತೋರುತ್ತವೆ.

ಕೆಲವು ಶಿಲ್ಪಿಗಳ ಹೆಸರನ್ನು ಅವರ ಕೆತ್ತನೆಯ ಕೆಳಗೆ ಅಥವಾ ಮೇಲ್ಭಾಗದಲ್ಲಿ ದಾಖಲಿಸಲಾಗಿದೆ. ಪ್ರಾಚೀನ ಭಾರತದ ಕಲಾವಿದರು ಸ್ವತಃ ಒಂದು ಕಲಾಕೃತಿಗೆ ಸಹಿ

ಹಾಕುವುದು ವಾಡಿಕೆಯಾಗಿರಲಿಲ್ಲ. ಕಲಾವಿದರ ಹೆಸರಿನ ಉಪಸ್ಥಿತಿಯು ಅವರು ರಚಿಸಿದ ಮಾಸ್ಟರ್ ಯೋಜನೆ ಉತ್ತಮ ಗುಣಮಟ್ಟದ ಅವರ ಪೋಷಕರಿಂದ ಗುರುತಿಸಲ್ಪಟ್ಟಿದೆ. ಪಟ್ಟದಕಲ್ಲಿನಲ್ಲಿ ಹಲವಾರು ಸ್ಮಾರಕಗಳು, ಬಹುಶಃ ಕುಟುಂಬಗಳಿಂದಲೇ ನಿರ್ಮಾಣಗೊಂಡ ಶಿಲ್ಪಗಳಾಗಿವೆ. ಆದರೆ ಶಿಲ್ಪಗಳ ಗಮ್ಯಸ್ಥಾನದಿಂದ ಉಂಟಾಗುವ ವ್ಯತ್ಯಾಸಗಳನ್ನು ನಾವು ಪ್ರತ್ಯೇಕಿಸಬೇಕಾಗಿದೆ. ಲೋಕೇಶ್ವರ ದೇವಸ್ಥಾನದೊಳಗಿನ ಉತ್ತರ ಉಪ ಮಂದಿರದ ಮಹೀಷಾಸುರಮರ್ಧನದಲ್ಲಿನ ದೈವಿಕ ಶಕ್ತಿಯ ಅದ್ಭುತ ಭವ್ಯ ನಿರೂಪಣೆಯಾಗಿದೆ. ಹೊರ ಗೋಡೆಗಳ ಮೇಲೆ ದೊಡ್ಡ ಶಿಲ್ಪಗಳಿವೆ. ಲೋಕೇಶ್ವರ ದೇವಾಲಯವು ಶ್ರೇಷ್ಠ ಕಲಾಕೃತಿಗಳನ್ನು ಹೊಂದಿದೆ. ಅದೇ ದೇವಾಲಯದ ಒಳಗೆ ಗೊಡೆಗಂಬಗಳ ತಳದಲ್ಲಿ ದಂಪತಿಗಳ ಶಿಲ್ಪಗಳು ಮತ್ತು ಸ್ತಂಭಗಳ ಮೇಲೆ ಕಡಿಮೆ ಪರಿವಾರದಲ್ಲಿರುವ ಸಣ್ಣ ಸಮೂಹಗಳಾಗಿವೆ. ಪಾಪನಾಥ ದೇವಾಲಯದ ಅತ್ಯುತ್ತಮ ಶಿಲ್ಪಗಳಿಗೆ ಬಹುಮುಖ್ಯ ಉದಾಹರಣೆಗಳೆಂದರೆ ಅವರ ಮೇಲ್ಛಾವಣಿಯಲ್ಲಿರುವ ಶಿಲ್ಪಗಳು. ಲೋಕೇಶ್ವರ ದೇವಸ್ಥಾನದಲ್ಲಿ ಸೋರುವಿಕೆಯಿಂದಾಗಿ ಮೇಲ್ಛಾವಣಿಗಳು ಹೆಚ್ಚಿನ ಪ್ರಮಾಣದಲ್ಲಿ ಉಳಿದು ಬಂದಿಲ್ಲ.

ಉತ್ತರ ಪ್ರವೇಶದಲ್ಲಿ ದೊಡ್ಡ ಹಜಾರ ಶಿಲ್ಪಿಗಳು ಭಾರತೀಯ ಕಲಾಕೃತಿಗಳ ಮಾನದಂಡಕ್ಕೆ ಅನುಗುಣವಾಗಿ ಮಾನವ ದೇಹದ ಆದರ್ಶ ಸೌಂದರ್ಯವನ್ನು ಕರಗತ ಮಾಡಿಕೊಂಡಿದ್ದಂತೆ ಕಾಣುತ್ತವೆ. ಅತ್ಯಂತ ಸೊಗಸಾದ ಪಟ್ಟದಕಲ್ಲು ಮಾನದಂಡಗಳು ಅವರ ಭಾವನೆಗಳ ಅಭಿವ್ಯಕ್ತಿಯನ್ನು ಕರಗತ ಮಾಡಿಕೊಂಡಿದ್ದಾರೆಂದು ಹೇಳಲು ಸ್ಪಷ್ಟ ಉದಾಹರಣೆಗಳಾಗಿವೆ. ಅವರು ಧಾರ್ಮಿಕ ಚಿಂತಕರು, ಕವಿಗಳು, ನರ್ತಕರು, ಸಂಗೀತಗಾರರು ಆಗಿದ್ದರು. ಅವರು ಇಡೀ ಸಂಸ್ಕೃತಿಯಿಂದ ಪ್ರಭಾವಿತರಾಗಿದ್ದರು. ಭರತನ ನಾಟ್ಯಶಾಸ್ತ್ರವು ಅವರಿಗೆ ತಿಳಿದಿತ್ತು. ಅವರ ರಸ ಮತ್ತು ಭಾವ ಸಿದ್ಧಾಂತವನ್ನು ಶಿಲ್ಪಕಲೆಗಳಿಗೆ ಅನ್ವಯಿಸುವುದು ಸೂಕ್ತವಾಗಿದೆ. ಕಥೆಯ ಅನುಕ್ರಮವನ್ನು ನಿರೂಪಿಸಿದ ಭಾವನೆಗಳ ಅನುಕ್ರಮ, ವಿರಹ, ಕೋಪ ಮತ್ತು ಅರಾಮದ ಶಾಂತಿಯೊಂದಿಗೆ ಕಡಿಮೆ ಪರಿವಾರವನ್ನು ಪ್ರತಿನಿಧಿಸುವ ಉತ್ತಮ ಕಲ್ಪನೆಯನ್ನು ಹೊಂದಿದ್ದ ಶಿಲ್ಪಿಗಳು ಆ ಕಾಲದಲ್ಲಿದ್ದರೆಂದು ಅಭಿಪ್ರಾಯಿಸಲಾಗಿದೆ.

ಪಟ್ಟದಕಲ್ಲು ದೇವಾಲಯಗಳ ಪ್ರತಿಮಾಶಾಸ್ತ್ರಕ್ಕೆ ಸಂಬಂಧಿಸಿದಂತೆ ಮತ್ತು ವಿಶೇಷವಾಗಿ ಲೋಕೇಶ್ವರ ಮತ್ತು ತ್ರೈಲೋಕೇಶ್ವರರ ಪ್ರತಿಮೆಗಳಿಗೆ ಸಂಬಂಧಿಸಿದಂತೆ ಸಂಪುಟಗಳನ್ನು ಬರೆಯಬಹುದು. ಕಲಾವಿದರು ಭಾರತೀಯ ಪುರಾಣಗಳ ಬಗ್ಗೆ ಸಂಪೂರ್ಣ ಜ್ಞಾನವನ್ನು ಹೊಂದಿದ್ದರು, ಅಲ್ಲದೇ ಸಮಕಾಲೀನ ಸಾಹಿತ್ಯ ಮತ್ತು ಜಾನಪದ ಕಥೆಗಳನ್ನೂ ಸಹ ಚೆನ್ನಾಗಿ

ಮುಡಿಸಿಕೊಂಡರು. ಕನ್ನಡ ಸಾಹಿತ್ಯ ಇನ್ನೂ ಅಷ್ಟೊಂದು ಜನಪ್ರಿಯವಾಗಿರಲಿಲ್ಲ. ಆದರೆ ಸಂಸ್ಕೃತವು ಹೆಚ್ಚಿನ ವಿಸ್ತಾರ ಪಡೆದಿತ್ತು. ಲೋಕೇಶ್ವರ ಮತ್ತು ತ್ರೈಲೊಕೇಶ್ವರ ದೇವಾಲಯದ ಕಂಬಗಳ ವಿವಿಧ ಮುಂಭಾಗಗಳಲ್ಲಿ ಪ್ರತಿನಿಧಿಸುವ ಕಲ್ಲಿನ ಚಪ್ಪಡಿ ಮೇಲೆ ಮಲಗಿರುವ ಪ್ರಣಯಾರ್ತ ಮಹಿಳೆಯ ಪ್ರಾತಿನಿಧ್ಯದಿಂದ, ಕಾಳಿದಾಸನ ಶಾಕುಂತಾಲಾ ಬಹಳ ಜನಪ್ರಿಯವಾಗಿತ್ತು ಮತ್ತು ಒಂದಕ್ಕಿಂತ ಹೆಚ್ಚು ಬಾರಿ ಜಾರಿಗೆ ಬಂದಿತು ಎಂಬುದು ಸ್ಪಷ್ಟವಾಗುತ್ತದೆ. ಚಾಲುಕ್ಯ ಸ್ಮಾರಕಗಳಲ್ಲಿ ಕಿರಾತಾರ್ಜುನೀಯ ಕಥೆಯನ್ನು ಮೊದಲ ಬಾರಿಗೆ ವ್ಯಾಖ್ಯಾನಿಸಿದ ಶ್ರೇಯಸ್ಸು ಈ ಎರಡು ಸ್ಮಾರಕಗಳ ಕಲಾವಿದರಿಗೆ ಸಲ್ಲುತ್ತದೆ. ಶಿಲ್ಪಕಲೆಗಳಲ್ಲಿನ ವ್ಯಕ್ತಿಗಳ ಚಲನವಲನಗಳಿಂದ ನಿರ್ಣಯಿಸಬಹುದಾದ ಸಂಗತಿ ಏನೆಂದರೆ ಭಾರವಿ ಅವರ ಕಿರತಾರ್ಜುನೀಯದ ಪದ್ಯಗಳನ್ನು ಶಿಲ್ಪಿಗಳು ಆಯ್ಕೆ ಮಾಡುವ ವಿಷಯವನ್ನು ಅವರು ನಿರ್ಮಿಸಿರುವ ನೃತ್ಯ ಸಂಯೋಜನೆ ಶಿಲ್ಪಗಳಿಂದ ಸ್ಪಷ್ಟವಾಗುತ್ತವೆ. ಆ ನೃತ್ಯ ಚಲನೆಗಳು ಅಲ್ಲಿನ ಕಲ್ಲಿನ ಮೇಲೆ ಕಂಡುಬಂದಿವೆ. ಅಹಲ್ಯ ಮತ್ತು ಇಂದ್ರನ ಕಥೆ ವಾಲ್ಮೀಕಿಯ ರಾಮಾಯಣದಲ್ಲಿ ಕಂಡುಬರುತ್ತದೆ. ರಾಮಯಣದಲ್ಲಿ ಅಹಲ್ಯ ಮತ್ತು ಇಂದ್ರನ ಸಭೆ ಬಹಳ ಪ್ರತ್ಯೇಕವಾಗಿದೆ ಆದರೆ ಶಿಲ್ಪಗಳಲ್ಲಿ ಇದು ಗಮನಾರ್ಹವಾಗಿ ಆಡಂಬರವಾಗಿದೆ. ಕಥೆಯ ಮತ್ತೊಂದು ಆವೃತ್ತಿಯನ್ನು ಕ್ರಿ.ಶ. ೯ನೇ ಶತಮಾನದ ಯೋಗಾವಸಿಷ್ಠದಲ್ಲಿ ನಿರೂಪಿಸಲಾಗಿದೆ. ಈ ಪಠ್ಯವು ಪ್ರಾತಿನಿಧ್ಯದ ಮೂಲದಲ್ಲಿ ಇರಬಾರದು. ಬಹುಶಃ, ಸ್ಥಳೀಯ ಜಾನಪದ ಕಥೆಯು ಕಲಾವಿದರಿಗೆ ಇದನ್ನು ಶಿಲ್ಪಕಲೆಯಲ್ಲಿ ವ್ಯಾಖ್ಯಾನಿಸಲು ಪ್ರೇರಣೆ ನೀಡಿರಬೇಕು. ನಂತರ ಯೋಗಾವಸಿಷ್ಠ ಲೇಖಕನು ಅದನ್ನು ಯೋಗದ ತತ್ವಗಳಿಗೆ ತಕ್ಕಂತೆ ಮಾರ್ಪಡಿಸಿರಬೇಕು. ಕುಬೇರನ ಹೆಂಡತಿಯನ್ನು ಪ್ರೀತಿಸುವ ಇಂದ್ರನ ಕಥೆ ನರಸಿಂಹ ಪುರಾಣದಲ್ಲಿರುವ ಅಪರೂಪದ ಕಥೆ. ಆ ಕಥೆಯನ್ನು ತ್ರೈಲೊಕೇಶ್ವರದಲ್ಲಿನ ಒಂದು ಸ್ತಂಭದ ಮುಂಭಾಗಗಳಲ್ಲಿ ಚಿತ್ರಿಸಲಾಗಿದೆ.[೫೫]

ಅಂತೆಯೇ ಭಾರತೀಯ ಸಂಸ್ಕೃತಿಯ ಜ್ಞಾನದ ಆಳವನ್ನು ಸೂಚಿಸುವ ಇನ್ನೂ ಅನೇಕ ಶಿಲ್ಪಗಳಿವೆ. ಪಟ್ಟದಕಲ್ಲಿನ ಶಿಲ್ಪಿಗಳು ಪುರಾಣ ಮತ್ತು ಸಾಹಿತ್ಯದ ವಿವಿಧ ಮೂಲಗಳಿಂದ ಹಲವು ಪ್ರಸಂಗಗಳನ್ನು ಸೆಳೆಯಲು ಪಠ್ಯಗಳಲ್ಲಿ ಆಳವಾಗಿ ಹೋಗಿದ್ದಾರೆ. ನಮ್ಮ ಕೆಲಸವು ಈ ಅಸಾಮಾನ್ಯ ಚಿತ್ರಗಳ ಸಾಗರದಲ್ಲಿ ಇಳಿಯುವಂತಿದೆ. ನಮ್ಮ ಜ್ಞಾನದ ಮಿತಿಯಲ್ಲಿ ಅನೇಕ ಚಿತ್ರಗಳನ್ನು ಸಂಕೇತಿಸುವ ಪ್ರಯತ್ನವನ್ನು ನಾವು ಮಾಡಿದ್ದೇವೆ. ಕೆಲವು ನಮ್ಮ ಸಂಪರ್ಕವನ್ನು ಮೀರಿವೆ. ಮುಂಬರುವ ವಿದ್ವಾಂಸರಿಗಾಗಿ ನಾವು ಅವರನ್ನು ಬಿಟ್ಟಿದ್ದೇವೆ.

ಶಾಸನಗಳ ವಿಷಯವೂ ಇದೇ ಆಗಿದೆ. ಕೆಲವು ಅಪರೂಪದ ಪದಗಳಾದ ಬಳ್ಳಿಗಾವರ್ತೆ ಇಲ್ಲಾ, ತೆಂಕಣದಾಸಿ ಸೂತ್ರಧಾರಿ ಇತ್ಯಾದಿ. ವಿದ್ವಾಂಸರು ಬಳ್ಳಿಗಾವರ್ತೆ ಇಲ್ಲಾವನ್ನು "ಅಡಿಕೆ ಎಲೆಗಳ ಮೇಲಿನ ತೆರಿಗೆ ವಿನಾಯಿತಿ" ಎಂದು ಅನುವಾದಿಸಿದ್ದಾರೆ.[೫೬]

ರಾಜಮನೆತನದ ದಂಪತಿಗಳು ಹೊಸ ವಾಸ್ತುಶಿಲ್ಪದ ಅಂಶಗಳನ್ನು ಪರಿಚಯಿಸುವ ವಾಸ್ತುಶಿಲ್ಪಿಗಳ ಸಾಹಸವನ್ನು ಹೆಚ್ಚಿಸುವಾಗ ಅಡಿಕೆ ಎಲೆಗಳ ಮೇಲಿನ ವಿನಾಯಿತಿ ತೆರಿಗೆ ಸಂದರ್ಭದಿಂದ ಹೊರಗಿದೆ. ನಾಗರ ಶೈಲಿಯ ಗವಕ ಆಭರಣದ ಉಲ್ಲೇಖವನ್ನು ಬಳ್ಳಿಗಾವರ್ತೆ ಎಂಬ ಪದದಲ್ಲಿ ನೋಡುತ್ತೇವೆ, ಇದನ್ನು ಸಾಲುಗಳಲ್ಲಿ ಪುನರಾವರ್ತಿಸಲಾಗುತ್ತದೆ ಮತ್ತು ಲೋಕೇಶ್ವರ ದೇವಾಲಯದ ವಾಸ್ತುಶಿಲ್ಪಿ ತ್ಯಜಿಸಿದರು, ಏಕೆಂದರೆ ಅದು ವಾಸ್ತುಶಿಲ್ಪದ ಸಂದರ್ಭಕ್ಕೆ ಸಂಬಂಧಿಸಿದೆ. "ರೇಖೆಗಳ ಮೇಲಿನ ತೆರಿಗೆ ವಿನಾಯಿತಿ" ಎಂಬ ಇನ್ನೊಂದು ವ್ಯಾಖ್ಯಾನವನ್ನು ಇತ್ತೀಚೆಗೆ ವಿದ್ವಾಂಸರಾದ ಪಾಡಿಗಾರ ಪ್ರಸ್ತಾಪಿಸಿದ್ದಾರೆ. ವಾಸ್ತುಶಿಲ್ಪಿ ಪೋಷಕರು ನೀಡಿದ ಪ್ರತಿಫಲವಾಗಿ ಸಂದರ್ಭಕ್ಕೆ ಹೊಂದಿಕೊಳ್ಳಬಹುದು. ವಿಜಯೇಶ್ವರ (ಸಂಗಮೇಶ್ವರ) ದೇವಾಲಯವನ್ನು ರಾಜ ವಿಜಯಾದಿತ್ಯ (ಕ್ರಿ.ಶ. ೬೯೫–೭೩೩) ರಾಜ ೨ನೇ ವಿಕ್ರಮಾದಿತ್ಯನ ತಂದೆ ನಿರ್ಮಿಸಿದ. ಪಲ್ಲವ ರಾಜ ರಾಜಾಸಿಂಹಾ ರಾಜ ವಿಜಯಾದಿತ್ಯನ ಸಮಕಾಲೀನ. ಅವರು ಅದೇ ಅವಧಿಯಲ್ಲಿ ತಮ್ಮ ರಾಜಧಾನಿ ಕಂಚಿಯಲ್ಲಿ ಕೈಲಾಸನಾಥ ದೇವಾಲಯವನ್ನು ನಿರ್ಮಿಸಿದರು. ಎರಡೂ ದೇವಾಲಯಗಳು ದಕ್ಷಿಣ ಅಥವಾ ಡ್ರಾವಿಡ ಶೈಲಿಯಲ್ಲಿವೆ. ಆದರೆ ನಿಕಟ ಪರೀಕ್ಷೆಯಲ್ಲಿ ಅವರ ಯೋಜನೆ ಮತ್ತು ಪರಿಕಲ್ಪನೆಯು ಪ್ರಮುಖ ವ್ಯತ್ಯಾಸಗಳನ್ನು ಹೊಂದಿವೆಯೆಂದು ತಿಳಿಸುತ್ತದೆ. ಪಟ್ಟದಕಲ್ಲಿನ ದೇವಾಲಯಗಳನ್ನು ನಿರ್ಮಿಸಲು ರಾಜನು ಕಂಚಿಯಿಂದ ವಾಸ್ತುಶಿಲ್ಪಿಗಳನ್ನು ಕರೆತಂದನು ಎಂಬ ಈ ಅಭಿವ್ಯಕ್ತಿಯನ್ನು ಖಚಿತಪಡಿಸುವ ಪುರಾವೆ ಸ್ಪಷ್ಟವಾಗಿಲ್ಲ.

ಶಾಸನಗಳ ಶಬ್ದಕೋಶವು ಅಧ್ಯಯನದ ಪ್ರಮುಖ ವಿಷಯವಾಗಿದೆ. ಅವರು ಕಲಾವಿದರು ಮತ್ತು ಪೋಷಕರ ಬಳಕೆ, ಆರಾಧಕರ ಅಭ್ಯಾಸಗಳ ಬಗ್ಗೆ ಅಮೂಲ್ಯವಾದ ಮಾಹಿತಿಯನ್ನು ನೀಡುತ್ತಾರೆ. ಅಲ್ಲಿ, ನರ್ತಕರು ಮತ್ತು ಸಂಗೀತಗಾರರ ಹೆಸರುಗಳನ್ನು ನಾವು ಕಾಣುತ್ತೇವೆ. ಶಾಸನಗಳ ಸಂಖ್ಯೆ ಚಿಕ್ಕದಾಗಿದೆ, ಆದರೆ ಅವು ಒದಗಿಸುವ ಮಾಹಿತಿಯ ಪ್ರಮಾಣವು ಅಗಾಧವಾಗಿದೆ. ಶಾಸನಶಾಸ್ತ್ರಜ್ಞ ಮತ್ತು ಇತಿಹಾಸಕಾರರಾಗಿ ನಾವು ಈ ವಿಷಯಗಳ ಬಗ್ಗೆ ನಮ್ಮ ಅಭಿಪ್ರಾಯಗಳನ್ನು ನೀಡಿದ್ದೇವೆ. ಆದರೆ ನಾವು ಅವುಗಳನ್ನು ಹೇರುವುದಿಲ್ಲ. ವ್ಯಾಖ್ಯಾನದ ತೊಂದರೆ ಮತ್ತು ಅನಿಶ್ಚಿತತೆಗಳು ಅವುಗಳನ್ನು ಅಧ್ಯಯನಕ್ಕೆ

ತೆರೆದಿಡುತ್ತವೆ. ತೀರ್ಮಾನಕ್ಕೆ ನಾವು ಈ ಪಟ್ಟದಕಲ್ಲು ತಾಣವು ದಕ್ಷಿಣ ಭಾರತದ ಇತಿಹಾಸದ ಒಂದು ದೊಡ್ಡ ಅವಧಿಯ ಸಾಕ್ಷಿಯಾಗಿದೆ. ಶೈವ ಧರ್ಮ, ಪಾಶುಪಾತ ಚಳವಳಿ ಸಾಕ್ಷಿಯಾಗಿದೆ. ಆದರೆ ಭಾರತೀಯ ಸಂಸ್ಕೃತಿಯ ಅತ್ಯುತ್ತಮ ಅಂಶಗಳ ನಿಜವಾದ ಉದಾಹರಣೆಯಾಗಿದೆ. ವಿಶ್ವದ ನಾಗರಿಕತೆಯ ಅತ್ಯುತ್ತಮ ನಿರ್ಮಾಣಗಳಲ್ಲಿ ಇದು ಒಂದಾಗಿದೆ.

ಪ್ರಾಚೀನ ದೇವಾಲಯಗಳನ್ನು ಸಂರಕ್ಷಿಸುವಲ್ಲಿ ಪುರಾತತ್ವ ಸರ್ವೇಕ್ಷಣ ಇಲಾಖೆಯು ಯಶಸ್ವಿಯಾಗುತ್ತಿದೆ. ಪಟ್ಟದಕಲ್ಲಿನ ಸಮೀಪದಲ್ಲಿರುವ ಜೈನ ದೇವಾಲಯದ ಮುಖ್ಯಭಾಗಗಳು ಬಹಳ ದುಸ್ಥಿತಿಯಲ್ಲಿದ್ದ ಕಾರಣ ದೇವಾಲಯದ ಜೀರ್ಣೋದ್ಧಾರವನ್ನು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಧಾರವಾಡ ವಲಯವು ಡಾ.ಎಸ್.ಟಿ. ವೆಂಕಟೇಶಯ್ಯ ಅಧೀಕ್ಷಕ ಪುರಾತತ್ವ ವಿದ್ವಾಂಸ ಅವರ ಮಾರ್ಗದರ್ಶನದಲ್ಲಿ "ಭಗವಾನ್ ಮಹಾವೀರ ತೀರ್ಥಂಕರ ೨೬೦೦ನೆಯ ಜನ್ಮಕಲ್ಯಾಣಕ ಮಹೋತ್ಸವ"[೫೭] ಆಚರಣೆಯ ಅಂಗವಾಗಿ ಹಮ್ಮಿಕೊಂಡ ಜೈನ ದೇವಾಲಯಗಳ ಸಂರಕ್ಷಣಾ ಯೋಜನೆ ಅಡಿಯಲ್ಲಿ ದೇವಾಲಯದ ಭಾಗಗಳನ್ನು ಬಿಚ್ಚಿ, ಛಾಯಾಚಿತ್ರ, ನಕ್ಷೆಗಳ ಮೂಲಕ ದಾಖಲಿಸಿಕೊಂಡು. ವಾಸ್ತು ಭಾಗಗಳನ್ನು ತುಂಬಾ ಜಾಗರೂಕತೆಯಿಂದ ಹಂತ ಹಂತವಾಗಿ ವೈಜ್ಞಾನಿಕವಾಗಿ ದಾಖಲಿಸುತ್ತಾ ತುಕ್ಕು ನಿರೋಧಕ ಉಕ್ಕಿನ ಸಲಾಕಿಗಳನ್ನು ಉಪಯೋಗಿಸಿ ಜೋಡಿಸಿ ಪುನಃ ಮೊದಲಿನಂತೆ ಜೋಡಿಸಲಾಯಿತು. ಕಳೆದು ಹೋದ ವಾಸ್ತು ಭಾಗಗಳನ್ನು ಹೊಸದಾಗಿ ಸೇರಿಸಿ ನಿರ್ಮಿಸಲಾಗಿದೆ ಅದೇ ರೀತಿಯಾಗಿ ಸಂಗಮೇಶ್ವರ ದೇವಾಲಯ, ವಿರೂಪಾಕ್ಷ ದೇವಾಲಯಕ್ಕೆ ಹೊಂದಿಕೊಂಡಂತೆ ಮನೆಗಳನ್ನು ನಿರ್ಮಿಸಿಕೊಂಡಿರುವುದನ್ನು ತೆಗೆಸಿ ದೇವಾಲಯಗಳ ಜೀರ್ಣೋದ್ಧಾರ ಮಾಡಿ ಸಂರಕ್ಷಣೆ ಮಾಡಿದ್ದಾರೆ.

ಭಾರತ ಸರ್ಕಾರದ ೧೯೦೪ರ ಪ್ರಾಚೀನ ಸ್ಮಾರಕಗಳ ಸಂರಕ್ಷಣಾ ಕಾಯ್ದೆ[೫೮] ಹಾಗೂ ೧೯೫೮ರ ಪ್ರಾಚೀನ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಹಾಗೂ ಅವಶೇಷಗಳ ಕಾಯ್ದೆಗೆ[೫೯] ಅನುನುಗುಣವಾಗಿ ಸ್ಥಳೀಯ ಸ್ಮಾರಕ ಸಮೂಹಗಳ ಸಂರಕ್ಷಣೆಯ ಕುರಿತು ಅವುಗಳ ಪ್ರಾಮುಖ್ಯತೆ ಕುರಿತು ಸ್ಥಳೀಯರಿಗೆ, ಸ್ಥಳೀಯೇತರ ಮತ್ತು ಇತರರಿಗೆ ತಿಳಿಸುವ ಪ್ರಯತ್ನವನ್ನು ಯುನೆಸ್ಕೋ ಅಂಗ ಸಂಸ್ಥೆಯಾದ "ಐಕಮಸ್" ಪ್ರತಿವರ್ಷ ಏಪ್ರಿಲ್ ೧೮ನ್ನು ವಿಶ್ವಪರಂಪರೆಯ ದಿನವೆಂದು[೬೦] ಘೋಷಿಸಿದೆ. ಆದುದರಿಂದ ಆ ದಿನ ಜನರನ್ನು ಪ್ರೋತ್ಸಾಹಿಸಲು ಪಟ್ಟದಕಲ್ಲು ಸ್ಮಾರಕಗಳ ಬಗೆಗೆ ಅರಿವು ಮೂಡಿಸಲು ಹಲವು

ಕಾರ್ಯಕ್ರಮಗಳನ್ನು ನಡೆಸುವುದರ ಮೂಲಕ ಜನಸಾಮಾನ್ಯರಲ್ಲಿ ಸ್ಮಾರಕಗಳ ಬಗೆಗೆ ಗೌರವ ಹಾಗೂ ಒಲವು ಹೆಚ್ಚಿಸುವ ದೃಷ್ಟಿಯಿಂದ ಪ್ರಾತ್ಯಕ್ಷಿಕೆ, ಭಿತ್ತಿ ಚಿತ್ರಗಳನ್ನು ಪ್ರದರ್ಶಿಸುವ ಮೂಲಕ ಜನರು ಸ್ಮಾರಕಗಳ ರಕ್ಷಣೆಯಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳಲು ಪ್ರೇರಣೆ ನೀಡಲಾಗುತ್ತಿದೆ.

**ಪಟ್ಟದಕಲ್ಲು ವಿಶ್ವಪಾರಂಪರಿಕ ತಾಣದ ನಿರ್ವಹಣೆಯ ಸಮಸ್ಯೆಗಳು ಹಾಗೂ ಪ್ರವಾಸಿಗಳ ಸಮಸ್ಯೆಗಳು :**

ರಾಜ್ಯ ಸಂರಕ್ಷಿತ ಅನೇಕ ಸ್ಮಾರಕಗಳನ್ನು ಸಂರಕ್ಷಿಸುವುದು ಬಹುಕಾಲದಿಂದ ಅಗತ್ಯವಾಗಿದ್ದರಿಂದ. ಸ್ಮಾರಕಗಳ ಸಂರಕ್ಷಣೆ, ಪ್ರಾಚ್ಯವಸ್ತು ಮತ್ತು ಐತಿಹಾಸಿಕ ಮಹತ್ವವುಳ್ಳ ಹಲವಾರು ಸ್ಮಾರಕಗಳು ಜೀರ್ಣಾವಸ್ಥೆಯ ಸಮಸ್ಯೆಯನ್ನು ಸಂರಕ್ಷಣಾ ಕಾರ್ಯಯೋಜನೆ ನಿಭಾಯಿಸುತ್ತದೆ. ನಮ್ಮ ಪ್ರಾಚೀನ ಸಂಸ್ಕೃತಿಯನ್ನು ಪ್ರತಿನಿಧಿಸುವ ಸ್ಮಾರಕಗಳನ್ನು ಪರೀಕ್ಷಿಸಲು ಮತ್ತು ಸಂರಕ್ಷಿಸಲು ಅದು ಸಹಾಯ ಮಾಡುತ್ತದೆ. ವಾಸ್ತುಶಿಲ್ಪ ಪರಿಪೂರ್ಣತೆಯ ನೆಲೆ ಪಡೆದ ಈ ಸಮುಚ್ಚಯವು ಆಧುನೀಕರಣದ ದುಷ್ಪರಿಣಾಮವನ್ನು ಅನುಭವಿಸಿದೆ. ದೇವಾಲಯಗಳ ಆಸುಪಾಸುಗಳೆಲ್ಲಾ ದನಗಳ ಕೊಟ್ಟಿಗೆ, ಬವಣೆಗಳ ವಟ್ಟಿಗೆ, ಅಡುಗೆಯ ಮಸಿ ಮುಂತಾದವು ಹಳ್ಳಿಗರಿಂದ ಕಳೆದ ಒಂದು ಶತಮಾನ ಹಾಗೂ ತತ್ಪೂರ್ವದಲ್ಲಿ ಆವರಿಸಿದ್ದವು. ಭಾರತ ಸರ್ಕಾರದ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ಪರಿಣಾಮದಿಂದ ಇವುಗಳನ್ನು ತೆರವುಗೊಳಿಸಲಾಗಿದೆ. ೧೯೭೫–೭೬ರ ಸುಮಾರಿಗೆ ಪುರಾತತ್ವ ವಿದ್ವಾಂಸರಾದ ಡಾ. ಎಸ್. ಆರ್. ರಾವ್ ಅವರ ನೇತೃತ್ವದಲ್ಲಿ ಸುಮಾರು ೧೦೦ ಮನೆಗಳನ್ನು 'ಆಕ್ವಾಯರ್' ಮಾಡಿ, ದೇವಾಲಯಗಳ ಸುತ್ತಲಿನ ಪ್ರದೇಶಗಳನ್ನು ಸ್ವಚ್ಛಗೊಳಿಸಿ, ಉದ್ಯಾನವನವನ್ನು ನಿರ್ಮಿಸಲಾಯಿತು. ಇಲ್ಲಿನ ದೇವಾಲಯಗಳ ಸುಂದರ ಪರಿಸರ ಹಾಗೂ ನಿರಾಶ್ರಿತರ ಪುನರ್ವಸತಿಯನ್ನು ಹೊಸ ಪಟ್ಟದಕಲ್ಲಿನಲ್ಲಿ ಇತ್ತಿಚೀಗಷ್ಟೇ ನಿರ್ಮಿಸಲಾಗಿದೆ.[೬೧]

ಪ್ರಸ್ತುತ ದೇವಾಲಯ ಸಮೂಹಗಳ ದಕ್ಷಿಣಭಾಗದಲ್ಲಿ ಹಳೆಯ ಪಟ್ಟದಕಲ್ಲಿನ ಗ್ರಾಮ ಭಾಗಶಃ ಇನ್ನು ಉಳಿದುಕೊಂಡಿದ್ದು ಸುಮಾರು ೨೦೦ ಮನೆಗಳಿವೆ. ಇವೆಲ್ಲವುಗಳನ್ನು ಒಂದು ಬಿಡದೆ, ಸಂಪೂರ್ಣವಾಗಿ 'ಆಕ್ವಾಯರ್' ಮಾಡಿ ಪರಿಹಾರ ಧನ ನೀಡಿ ಆ ಜನರನ್ನೆಲ್ಲ ಹೊಸ ಪಟ್ಟದಕಲ್ಲಿನ ಪುನರ್ವಸತಿಗಾಗಿ ನಿರ್ದೇಶಿಸಬಹುದು.[೬೨] ಈ ಪ್ರಕ್ರಿಯೆಗೆ ಸುಮಾರು ೧೫೦–೨೦೦ ಲಕ್ಷ ರೂಪಾಯಿಗಳು ಬೇಕಾಗಬಹುದು ಎಂಬ ಅಂದಾಜು. ಇದನ್ನು ಯುನೆಸ್ಕೋದ 'ವಿಶ್ವಪಾರಂಪರಿಕ ಸಮಿತಿ'ಯಿಂದ ಪಡೆಯಲು ಕ್ರಮಕೈಗೊಳ್ಳಬಹುದು. ಕೇಂದ್ರ

ಸರಕಾರಕ್ಕಾಗಲೀ ರಾಜ್ಯ ಸರ್ಕಾರಕ್ಕಾಗಲಿ ಯಾವುದೇ ರೀತಿಯ ಆರ್ಥಿಕ ಭಾರ ಬೀಳುವುದಿಲ್ಲ ಈ ರೀತಿ ಕೊನೆಯ 'ಅಕ್ವಾಯರ್' ಮಾಡಿ, ಎಲ್ಲ ಜಾಗವನ್ನು ಸ್ವಾಧೀನಪಡಿಸಿಕೊಂಡು, ಸುಂದರವಾದ ಉದ್ಯಾನವನ್ನು ಅಲ್ಲಿ ಬೆಳೆಸಿದರೆ ಈ ವಿಶ್ವಪರಂಪರೆಯ ಸ್ಮಾರಕ ತನ್ನ ಮೊದಲಿನ ಚಾಲುಕ್ಯ ಸಾಮ್ರಾಜ್ಯದ ಆ ಸಮಕಾಲೀನ ವೈಭವವನ್ನು ಪುನರ್‌ಸ್ಥಾಪಿಸುವಲ್ಲಿ ಎರಡು ಮಾತಿಲ್ಲ. ಈ ಪರಿವರ್ತನೆಯ ಕಡೆಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರ ಗಮನ ಹರಿಸಿದರೆ ಪ್ರತಿವರುಷ ಏರ್ಪಡಿಸುವ 'ಪಟ್ಟದಕಲ್ಲು ಉತ್ಸವ'ಕ್ಕೆ ಸಾಧ್ಯವಾದಷ್ಟು ವಿಫುಲ ಸ್ಥಳಾವಕಾಶ ದೊರೆಯುತ್ತವೆ.[೬೨]

ಸ್ಮಾರಕಗಳ ಸಂರಕ್ಷಣೆಯ ಕುರಿತು ಶಾಲಾ ಮಕ್ಕಳಿಗೆ ಪ್ರಬಂಧ ಸ್ಪರ್ಧೆಗಳನ್ನು ಏರ್ಪಡಿಸುವಂತೆ ಸ್ಮಾರಕಗಳ ಚಿತ್ರವನ್ನು ಬಿಡಿಸುವ ಸ್ಪರ್ಧೆಯನ್ನು ಏರ್ಪಡಿಸುವುದು. ಶಾಲಾಕಾಲೇಜುಗಳಲ್ಲಿ ಎನ್.ಎಸ್.ಎಸ್ ಶಿಬಿರವನ್ನು ಏರ್ಪಡಿಸುವಂತಹ ಸಂದರ್ಭದಲ್ಲಿ ಈ ಹಳ್ಳಿಯ ಸಾಂಸ್ಕೃತಿಕ ಐತಿಹಾಸಿಕ ಇತಿಹಾಸ ಕುರಿತು ಒಂದು ದಿನದ ವಿಚಾರ ಸಂಕಿರಣವನ್ನು ಏರ್ಪಡಿಸಿ ಹಳ್ಳಿಯಲ್ಲಿನ ಪ್ರಾಚೀನ ಸ್ಮಾರಕಗಳ ಹಿನ್ನೆಲೆ ಮತ್ತು ಇತಿಹಾಸವನ್ನು ಸ್ಥಳೀಯ ಜನರಿಗೆ ತಿಳಿಸಬೇಕು ಅವುಗಳ ಸಂರಕ್ಷಣೆಯ ಕುರಿತು ಹಳ್ಳಿಯ ಜನರಲ್ಲಿ ಅರಿವು ಮೂಡಿಸಿ ಅವುಗಳನ್ನು ತುರ್ತಾಗಿ ಕಾಪಾಡಬೇಕು. ಹಳ್ಳಿಯಲ್ಲಿ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಆಡಳಿತ ಮತ್ತು ಹಣಕಾಸಿನ ವ್ಯವಹಾರವನ್ನು ಮಾಡುತ್ತಿರುವ ಸಂಘಗಳ ಹಾಗೆ ಸ್ಮಾರಕಗಳನ್ನು ರಕ್ಷಣೆ ಮಾಡಲು ಅಲ್ಲಿನ ಮುಖ್ಯ ದೇವಾಲಯಗಳ ಹೆಸರಿನ ಮೇಲೆ ಸಂಘ-ಸಂಸ್ಥೆಗಳನ್ನು ನಿರ್ಮಿಸಿಕೊಂಡು ಅವುಗಳ ರಕ್ಷಣೆಯನ್ನು ಮಾಡಬಹುದು. ಜೊತೆಗೆ ಜಿಲ್ಲಾಡಳಿತದ ವತಿಯಿಂದ ಕ್ಯಾಲೆಂಡರನ್ನು ತಯಾರಿಸುವಾಗ ಇಲ್ಲಿನ ಸ್ಮಾರಕಗಳ ಚಿತ್ರವನ್ನು ಹಾಕಿ ತಯಾರಿಸಿ ಅವುಗಳ ಬಗ್ಗೆ ಅರಿವನ್ನು ಮೂಡಿಸಬಹುದು. ಶಾಲೆಗಳಲ್ಲಿ ರಾಷ್ಟ್ರೀಯ ಹಬ್ಬಗಳನ್ನು ಆಚರಿಸುವಂತೆ ರಾಷ್ಟ್ರೀಯ ಸ್ಮಾರಕ ದಿನವನ್ನು ಸ್ಥಳೀಯ ಮಟ್ಟದಲ್ಲಿ ಆಚರಿಸಿ ಅವುಗಳ ಮಹತ್ವವನ್ನು (ಏಪ್ರಿಲ್ ೧೮ ವಿಶ್ವಪರಂಪರೆ ದಿನ) ಸಾರಬೇಕು. ಸ್ಥಳೀಯ ಸ್ಮಾರಕಗಳ ರಕ್ಷಣೆಗೆ ಪ್ರತಿಯೊಂದು ಹಳ್ಳಿಯಲ್ಲೂ ಪ್ರತಿ ತಿಂಗಳು ಗ್ರಾಮಸಭೆಯನ್ನು ನಡೆಸುವಾಗ ಹಳ್ಳಿಯ ಮೂಲಭೂತ ಸೌಕರ್ಯಗಳ ಕುರಿತು ಚರ್ಚಿಸುವ ರೀತಿಯಲ್ಲಿಯೇ ನೀರಿನ ಸಮಸ್ಯೆ, ಶೌಚಾಲಯಗಳ ನಿರ್ಮಾಣಗಳ ಜೊತೆಗೆ ತಮ್ಮ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಲ್ಲಿನ ಪ್ರಾಚೀನ ದೇವಾಲಯಗಳ ಜೀರ್ಣೋದ್ಧಾರ ಕೈಗೊಳ್ಳುವ ಮತ್ತು ಸಂರಕ್ಷಣೆ ಮಾಡುವುದರ ಕುರಿತು ವಿಷಯಗಳನ್ನು ಕಡ್ಡಾಯವಾಗಿ ಚರ್ಚಿಸಿ ಅವುಗಳ ಕುರಿತು

ತೆಗೆದುಕೊಂಡ ತೀರ್ಮಾನಗಳು ಮತ್ತು ಕಾರ್ಯಯೋಜನೆಯನ್ನು ಸರ್ಕಾರದ ಮೂಲಕ ಪರಿಶೀಲಿಸಿದಾಗ ಸ್ಮಾರಕಗಳ ಸಂರಕ್ಷಣೆಯನ್ನು ಸುವ್ಯವಸ್ಥಿತ ರೀತಿಯಲ್ಲಿ ಮಾಡಬಹುದು. ಆದರೆ ಸ್ಮಾರಕಗಳು ಎಷ್ಟೇ ಹೆಸರುವಾಸಿಯಾಗಿದ್ದರೂ ಕೂಡ ಅಲ್ಲಿ ಕೆಲವು ಸೌಲಭ್ಯಗಳ ಕೊರತೆ ಎದ್ದು ಕಾಣುತ್ತಿರುತ್ತವೆ. ಅಂತಹ ಕೊರತೆಗಳು ಪಟ್ಟದಕಲ್ಲು ವಿಶ್ವಪಾರಂಪರಿಕ ನೆಲೆಯಲ್ಲಿ ಯಾವ ರೀತಿಯಾಗಿವೆ ಎಂದು ಈ ಕೆಳಗಿನಂತೆ ತಿಳಿಯೋಣ.

**ಪ್ರವಾಸಿಗರ ಸಮಸ್ಯೆಗಳು :**

ಕ್ರಿ.ಶ. ಆರಂಭ ಕಾಲದಿಂದಲೂ ದೇಶ ಮತ್ತು ವಿದೇಶಿ ಪ್ರವಾಸಿಗರು ನಿರಂತರವಾಗಿ ಇಂತಹ ನೆಲೆಗಳಿಗೆ ಬರುತ್ತಿರುತ್ತಾರೆ. ಅವರಿಗೆ ಅಶ್ಯಕವಾಗಿ ಬೇಕಾದ ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಶೌಚಾಲಯ ವ್ಯವಸ್ಥೆ, ಉತ್ತಮವಾದ ಶುಚಿಯಾದ ಹೋಟೆಲ್‌ಗಳು–ಬಸ್‌ನಿಲ್ದಾಣಗಳು ತೀರ ಅವಶ್ಯಕವಾಗಿವೆ. ಇಂತಹ ಸೌಕರ್ಯಗಳನ್ನು ಪೂರೈಸುವುದರ ಬಗೆಗೆ ಹಾಗೂ ಅಭಿವೃದ್ಧಿಪಡಿಸುವ ಬಗೆಗೆ ಗಮನಹರಿಸಬೇಕಾಗಿದೆ, ಪಟ್ಟದಕಲ್ಲಿಗೆ ಬರುವ ಪ್ರವಾಸಿಗರಿಗೆ ಸೂಕ್ತ ಮಾಹಿತಿ ನೀಡುವ ಕೇಂದ್ರಗಳು ತಾಲೂಕು ಕೇಂದ್ರ ಬಾದಾಮಿ ಬಸ್‌ನಿಲ್ದಾಣದಲ್ಲಾಗಲಿ, ರೈಲ್ವೆ ನಿಲ್ದಾಣದಲ್ಲಾಗಲಿ ಇಲ್ಲದಿರುವುದು ಒಂದು ಕೊರತೆ. ಪಟ್ಟದಕಲ್ಲಿನಲ್ಲಿ ಒಂದು ವಾಚನಾಲಯ ಸ್ಥಾಪಿಸಿದರೆ ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ, ಆಸಕ್ತರಿಗೆ, ಪ್ರವಾಸಿಗರಿಗೆ ನೆರವಾಗಬಲ್ಲುದು. ಉಜ್ವಲ ಪರಂಪರೆಯ ನೆನಪು ಮಾಡಿಕೊಡುವ ಈ ಸ್ಮಾರಕಗಳ ಉಳಿವು ಇಂದು ಅಗತ್ಯವಾಗಿದೆ. ಮುಂದಿನ ಪೀಳಿಗೆಯವರಿಗೆ ಇವುಗಳ ಪರಿಚಯ ಮಾಡಿಕೊಡಲು ರಕ್ಷಿಸಬೇಕಾಗಿದೆ. ಬಿಸಿಲು ಮಳೆಗೆ ನರಳುತ್ತಿರುವ ಪಟ್ಟದಕಲ್ಲಿನ ಶಿಲ್ಪಕಲಾ ಕೃತಿಗಳು ಅಲ್ಲಿನ ವಸ್ತುಸಂಗ್ರಹಾಲಯದ ಮುಂಭಾಗದಲ್ಲಿಯೇ ಬಿದ್ದಿವೆ. ಮಲಪ್ರಭಾ ನದಿಯ ಹೆಚ್ಚುವರಿ ನೀರಿನ ಹರಿವಿನಿಂದಾಗಿ ಶಿಲ್ಪಕಲಾ ಸಂಗ್ರಹಾಲಯ ಮುಚ್ಚಿ ಒಳಗಿನ ಎಲ್ಲಾ ಶಿಲ್ಪಗಳನ್ನು ಹೊರಗೆ ಇಟ್ಟಿದ್ದಾರೆ ಇನ್ನೂ ಇದಕ್ಕೆ ಸಂಬಂಧಿಸಿದಂತೆ ಬೇಕಾದ ಮಾಹಿತಿಯನ್ನು ಪಡೆಯಲು ಹತ್ತಿರದ ಬಾದಾಮಿ ಅಥವಾ ಐಹೊಳೆಯ ವಸ್ತುಸಂಗ್ರಹಾಲಯಗಳಿಗೆ ಭೇಟಿ ನೀಡಬೇಕು. ಸಾರ್ವಜನಿಕರಿಗೆ ನಾಡಿನ ಸಂಸ್ಕೃತಿ–ಪರಂಪರೆಯ ನೆನಪು ಮಾಡಿಕೊಡುವ ಇಂತಹ ವಸ್ತುಸಂಗ್ರಹಾಲಯದ ಅವಶ್ಯಕತೆ ಇದೆ. ಪಟ್ಟದಕಲ್ಲಿನ ಕುರಿತು ಸ್ಥಳೀಯ ಪತ್ರಿಕೆಗಳು ಹೆಚ್ಚಿನ ಗತವೈಭವವನ್ನು ಸಾರಬೇಕಾದದ್ದು ಅವಶ್ಯಕವಾಗಿದೆ.[೬೪] ಈ ಹಿನ್ನೆಲೆಯಲ್ಲಿ ಮೇಲಿನ ಮಾಹಿತಿಯೊಂದಿಗೆ ಮುಖ್ಯವಾದ ಕೆಲವು ಸಮಸ್ಯೆಗಳನ್ನು ಈ ಕೆಳಗಿನಂತೆ ವಿವರಿಸಬಹುದು.

೧. **ಪ್ರವಾಸಿಗರಿಗೆ ಶೌಚಾಲಯದ ಸಮಸ್ಯೆ :** ಉತ್ತಮವಾದ ಶೌಚಾಲಯದ ಕೊರತೆಯಿದ್ದು, ದೇವಾಲಯಗಳ ಸಮೂಹದ ನದಿ ದಂಡೆಗೆ ಅಥವಾ ಗ್ರಾಮದಿಂದ ಹೊರಬರುವ ರಸ್ತೆ ಬದಿಗೊ ಹೆಚ್ಚಾಗಿ ಅವಲಂಬಿಸಲಾಗಿದೆ. ಇದು ವಿದೇಶಿಗರಷ್ಟೇ ಅಲ್ಲ ಸ್ಥಳೀಯ ಪ್ರವಾಸಿಗರಿಗೂ ತೊಂದರೆಯಾಗಿದೆ. ಇದಕ್ಕೂ ಮುಖ್ಯವಾಗಿ ಜೈನ ದೇವಾಲಯದ ಹತ್ತಿರದಲ್ಲಿ ಇನ್ನೂ ಕಷ್ಟಕರವಾದ ವಾತಾವರಣ ನಿರ್ಮಾಣವಾಗಿದೆ. ಹಾಗಾಗಿ ಇಲ್ಲಿ ಶೌಚಾಲಯಗಳ ನಿರ್ಮಾಣ ಮಾಡುವುದು ಅತ್ಯವಶ್ಯಕ.

೨. **ಕುಡಿಯುವ ನೀರಿನ ಸಮಸ್ಯೆ :** ಪ್ರವಾಸಿಗರಿಗೆ ಶುದ್ಧೀಕರಿಸಿದ ಕುಡಿಯುವ ನೀರಿನ ಸಮಸ್ಯೆ ಎದ್ದುಕಾಣುತ್ತಿದೆ. ಅಲ್ಲಿರುವ ಕೊಳಾಯಿ ನೀರು ಅನಾರೋಗ್ಯಕ್ಕೆ ಕಾರಣವಾಗಿದ್ದು, ಇಲ್ಲಿನ ಸಿಬ್ಬಂದಿ ಸರಿಯಾಗಿ ಕರ್ತವ್ಯ ನಿರ್ವಹಿಸುತ್ತಿಲ್ಲ. ಇನ್ನೂ ಜೈನ ದೇವಾಲಯಕ್ಕಂತು ನೀರಿನ ತೂಕದಷ್ಟೇ ಮೊತ್ತವನ್ನು ಕೊಟ್ಟು ನೀರು ಕೊಂಡುಕೊಳ್ಳಬೇಕಾದ ಅನಿವಾರ್ಯತೆಯಿದೆ. ಇದು ಪ್ರವಾಸಿಗರಿಗೆ ಪಟ್ಟದಕಲ್ಲಿನ ಮೇಲಿರುವ ಆಸಕ್ತಿಯನ್ನು ನಿರಾಸಕ್ತಿಯೆಡೆಗೆ ಕರೆದೊಯ್ಯುತ್ತದೆ.

೩. **ಮಾಹಿತಿ ಕೇಂದ್ರದ ಕೊರತೆ :** ವಿಶ್ವ ಪ್ರಸಿದ್ಧಿ ಪಡೆದ ಪಟ್ಟದಕಲ್ಲಿಗೆ ಬರುವ ಪ್ರವಾಸಿಗರಿಗೆ ಸೂಕ್ತ ಮಾಹಿತಿ ನೀಡುವ ಕೇಂದ್ರಗಳು ತಾಲೂಕು ಕೇಂದ್ರ ಬಾದಾಮಿ ಬಸ್‌ನಿಲ್ದಾಣದಲ್ಲಾಗಲಿ, ರೈಲ್ವೆ ನಿಲ್ದಾಣದಲ್ಲಾಗಲಿ ಇಲ್ಲದಿರುವುದು ಸಮಸ್ಯೆಯಾಗಿ ಪರಿಣಮಿಸಿದೆ. ಅನೇಕ ಪ್ರವಾಸಿಗರು ಬಾದಾಮಿ ಗುಹೆಗಳಿಗೆ ತೆರಳಿ ನಂತರ ತಮ್ಮ ಸ್ವಂತ ಸ್ಥಳಗಳಿಗೆ ಹಿಂದಿರುಗುತ್ತಾರೆ. ಬಸ್‌ನಿಲ್ದಾಣ ಅಥವಾ ರೈಲ್ವೆ ನಿಲ್ದಾಣಗಳಲ್ಲಿ ಪಟ್ಟದಕಲ್ಲು ಸ್ಮಾರಕಗಳಿಗೆ ಸಂಬಂಧಿಸಿದ ಯಾವ ಛಾಯಾಚಿತ್ರ ಅಥವಾ ಯಾವ ಮಾಹಿತಿ ನೀಡುವ ಕೇಂದ್ರಗಳಿಲ್ಲ. ಹಾಗಾಗಿ ಮಾಹಿತಿ ಕೇಂದ್ರದ ಕೊರತೆಯಿಂದಾಗಿ ಇಂತಹ ಪರಂಪರೆಯ ತಾಣಗಳಿಗೆ ಸ್ಥಳಗಳಿಗೆ ಭೇಟಿ ನೀಡಲು ತೊಂದರೆಯಾಗುತ್ತಿದೆ.

೪. **ಮಾಹಿತಿ ಫಲಕಗಳ ಕೊರತೆ :** ಪಟ್ಟದಕಲ್ಲಿನ ಬಗ್ಗೆಯಾಗಲಿ, ಸ್ಮಾರಕಗಳ ಬಗ್ಗೆಯಾಗಲಿ ಮಾಹಿತಿ ನೀಡುವಂತಹ ಫಲಕಗಳು ತಾಲೂಕು, ಜಿಲ್ಲಾ ಕೇಂದ್ರಗಳಲ್ಲಿ ಇಲ್ಲ. ಹಾಗೂ ಸಂಪೂರ್ಣ ಮಾಹಿತಿ ಒಂದೇ ಕಡೆ ಸಿಗುವಂತಹ ಮಾಹಿತಿ ಫಲಕ ಪಟ್ಟದಕಲ್ಲಿನ ಸ್ಮಾರಕ ಸಮೂಹದಲ್ಲಿ ಕೂಡ ಇಲ್ಲ.

೫. **ಸಾರಿಗೆ ಸಮಸ್ಯೆ :** ಪಟ್ಟದಕಲ್ಲಿಗೆ ಬಂದು ಹೋಗಲು ಬಾದಾಮಿಯಿಂದ ಮತ್ತು ಅಮೀನಗಡದಿಂದ ಕೆಲವು ಬಸ್ಸುಗಳು ಸೀಮಿತ ಸಮಯಕ್ಕೆ ಬಂದುಹೋಗುತ್ತವೆ. ಇದರಿಂದ ಪ್ರವಾಸಿಗರು ಸರಿಯಾದ ಸಮಯಕ್ಕೆ ಬಸ್ಸು ಇಲ್ಲದ ಕಾರಣ ಕಡಿಮೆ ಅವಧಿಗೆ ಸ್ಮಾರಕಗಳನ್ನು

ವೀಕ್ಷಿಸಲು ಪ್ರಯತ್ನಿಸುತ್ತಾರೆ. ಇದರಿಂದ ಸ್ಮಾರಕಗಳ ಜ್ಞಾನವಾಗಲಿ, ಸಂಸ್ಕೃತಿ ಬಗ್ಗೆಯಾಗಲಿ ತಿಳಿಯುವುದು ಕಷ್ಟಕರ. ಇನ್ನೂ ಸಂಶೋಧಕರಿಗೆ, ಬರವಣಿಗೆಗಾರರಿಗೆ ಬಸ್ಸುಗಳನ್ನು ಅವಲಂಬಿಸಿದ್ದರೆ ಹೇಳತೀರದು. ಪಟ್ಟದಕಲ್ಲು ಒಂದು ವಿಶ್ವಪಾರಂಪರಿಕ ತಾಣ ಎಂಬುದು ಹೆಮ್ಮೆಯ ವಿಚಾರ. ಸ್ಥಳೀಯವಾಗಿ ವಿದೇಶಗಳಿಂದ ಅನೇಕ ಪ್ರವಾಸಿಗರು ಇಲ್ಲಿಗೆ ಬರುತ್ತಾರೆ. ಈ ದೃಷ್ಟಿಯಿಂದ ತಾಲೂಕು ಹಾಗೂ ಜಿಲ್ಲಾ ಕೇಂದ್ರಗಳಿಂದ ಬಸ್ಸುಗಳ ಸೌಲಭ್ಯದ ಅವಶ್ಯಕತೆ ತುಂಬಾ ಇದೆ.

**೬. ಆಸನಗಳು ಮತ್ತು ಬೀದಿ ದೀಪಗಳ ಸಮಸ್ಯೆ :** ಪ್ರವಾಸಿ ಕೇಂದ್ರ ಅಥವಾ ಸುತ್ತಲಿನ ಪರಿಸರದಲ್ಲಿ ಪ್ರವಾಸಿಗರು ಕುಳಿತುಕೊಳ್ಳಲು ಆಸನಗಳು, ವಿಶ್ರಾಂತಿ ಕಟ್ಟೆಗಳ ಅವಶ್ಯಕತೆ ತುಂಬಾ ಇದೆ. ಆದರೆ ಪಟ್ಟದಕಲ್ಲು ಸ್ಮಾರಕ ಸಮೂಹದಲ್ಲಿ ಈ ರೀತಿಯ ವ್ಯವಸ್ಥೆ ಇಲ್ಲದಿರುವುದು ಕೊರತೆಯಾಗಿದೆ. ಜೊತೆಗೆ ಸ್ಮಾರಕ ಸಮೂಹದ ಪಕ್ಕದಲ್ಲಿರುವ ಬೀದಿಗಳಲ್ಲಿ ದೀಪಗಳ ಕೊರತೆ ಎದ್ದು ಕಾಣುತ್ತದೆ. ಜೊತೆಗೆ ಕೆಲವು ಉದ್ಯಾನವನಗಳಲ್ಲಿರುವಂತೆ ವಿಶ್ರಾಂತಿ ಆಸನಗಳಲ್ಲಿ ಅಕ್ಕಪಕ್ಕದಲ್ಲಿ ದೀಪಗಳ ವ್ಯವಸ್ಥೆಯ ಇಲ್ಲದಿರುವುದು, ಪಟ್ಟದಕಲ್ಲು ಸ್ಮಾರಕ ಸಮೂಹ ಮತ್ತೊಂದು ಕೊರತೆಯಾಗಿದೆ.

**೭. ಉತ್ತಮವಾದ ಹೋಟೆಲ್‌ಗಳ ಸಮಸ್ಯೆ :** ಪಟ್ಟದಕಲ್ಲಿಗೆ ಬರುವ ಪ್ರವಾಸಿಗರು ತಿಂಡಿ, ಊಟ ತೆಗೆದುಕೊಂಡು ಹೋಗುವುದು ತುಂಬಾ ಕಡಿಮೆ ಬದಲಾಗಿ ಅಲ್ಲಿನ ಹೋಟೆಲ್‌ಗಳ ಮೇಲೆ ಅವಲಂಬಿಸಿರುತ್ತಾರೆ. ಆದರೆ ಅಲ್ಲಿ ರುಚಿಯ ಜೊತೆಗೆ ಶುಚಿಯಾದ ಹೋಟೆಲ್‌ಗಳು ಸಿಗುವುದು ಕಷ್ಟವಾಗಿದೆ. ಸ್ಥಳೀಯರೇ ತಮ್ಮ ವ್ಯವಹಾರ ದೃಷ್ಟಿಯಿಂದ ಕೆಲವು ಶೇಡ್ ರೀತಿಯಲ್ಲಿ ಹೋಟೆಲ್‌ಗಳನ್ನು ನಿರ್ಮಾಣ ಮಾಡಿಕೊಂಡಿದ್ದಾರೆ ಅದರಲ್ಲಿ 'ಫೈಸ್ಟಾರ್ ಹೋಟೆಲ್‌ಗಳ' ಮೊತ್ತವನ್ನು ತೆಗೆದುಕೊಳ್ಳುತ್ತಾರೆ. ಅಂದರೆ ಕಡಿಮೆ ಆಹಾರ ತೂಕದಷ್ಟು ಹಣ ತೆಗೆದುಕೊಳ್ಳುತ್ತಾರೆ. ಜೊತೆಗೆ ಒಂದೇ ರೀತಿಯ ಊಟ ಅದು, ಮುಂಜಾನೆ ಮಾಡಿದ್ದಾಗಿರುತ್ತದೆ. ದೇಶ–ವಿದೇಶಗಳಿಂದ ನಾನಾ ಭಾಗಗಳಿಂದ ನಾನಾ ಆಹಾರ ಸಂಸ್ಕೃತಿಯಿಂದ ಪ್ರವಾಸಿಗರು ಪಟ್ಟದಕಲ್ಲಿಗೆ ಬಂದರೆ ಆಹಾರದ ವಿಚಾರದಲ್ಲಂತೂ ತುಂಬಾ ನಿರಾಶರಾಗಿ ಹಿಂದಿರುಗುತ್ತಾರೆ.

**೮. ತರಬೇತಿ ಪಡೆದ ಮಾರ್ಗದರ್ಶಿಗಳ ಕೊರತೆ :** ಪಟ್ಟದಕಲ್ಲಿನ ಸ್ಮಾರಕ ಸಮೂಹದ ಮುಂಭಾಗದಲ್ಲಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಯ ಕೆಲ ಫಲಕಗಳು ಕಂಡುಬಂದರೆ ಆ ಭಾಷೆಯನ್ನು ಸ್ಪಷ್ಟವಾಗಿ ವ್ಯಕ್ತಪಡಿಸುವ ಮಾರ್ಗದರ್ಶಕರಿಲ್ಲದಾಗಿದೆ. ಇದರಿಂದ ಪಟ್ಟದಕಲ್ಲು

ಸ್ಮಾರಕಗಳ ಒಳಾಂತರದಲ್ಲಿ ಹುದುಗಿರುವ ಬಾದಾಮಿ ಚಾಲುಕ್ಯರ ಕಾಲದ ಕಲೆ, ವಾಸ್ತುಶಿಲ್ಪ, ಸಂಸ್ಕೃತಿ, ಸಾಮಾಜಿಕ ಸಮಾನತೆ, ಆರ್ಥಿಕ ದೃಷ್ಟಿಯ ಮನೋಭಾವ, ಅವರ ರಾಜಕೀಯ ಚಿಂತನೆ ಸ್ಪಷ್ಟವಾಗಿ ನಿರೂಪಣೆ ಮಾಡಬಲ್ಲ ಮಾರ್ಗದರ್ಶಕರ ಕೊರತೆ ಪಟ್ಟದಕಲ್ಲಿನಲ್ಲಿದೆ. ಇವರಿಗೆ ಒಂದು ಪದವಿಯನ್ನು ಸೀಮಿತಗೊಳಿಸಿ ಪದವಿ ಆಧಾರದ ಮೇಲೆ ಅವರನ್ನು ಮಾರ್ಗದರ್ಶಿಗಳಾಗಿ ನೇಮಕ ಮಾಡಿಕೊಂಡು ಜೊತೆಗೆ ದೇಶ–ವಿದೇಶಗಳಿಂದ ಬರುವಂತಹ ಆಯಾ ಭಾಷೆಯ ಜನರಿಗೆ ಆಯಾ ಭಾಷೆಯಲ್ಲಿ ಪಟ್ಟದಕಲ್ಲು ಸ್ಮಾರಕಗಳ ಬಗ್ಗೆ ಮಾರ್ಗದರ್ಶನ ನೀಡುವಂತಹ ಮಾರ್ಗದರ್ಶಿಗಳ ನೇಮಕ ಅವಶ್ಯಕ.

೯. **ದುಬಾರಿ ಪ್ರವೇಶ ದರ** : ಐತಿಹಾಸಿಕ ಪಟ್ಟದಕಲ್ಲು ವೀಕ್ಷಣೆಗೆ ಬರುವ ಪ್ರವಾಸಿಗರಿಗೆ ದುಬಾರಿ ಪ್ರವೇಶದರದ ಬಿಸಿ ತಟ್ಟಿದೆ. ಭಾರತೀಯರಿಗೆ ರೂ.೪೦ ಹಾಗೂ ವಿದೇಶಿ ಪ್ರವಾಸಿಗರಿಗೆ ರೂ.೬೦೦ ಪ್ರವೇಶದರ ನಿಗದಿಗೊಳಿಸಿದ್ದಾರೆ. ಇದರಿಂದ ಪ್ರವಾಸಿಗರು ದುಬಾರಿಯಾದ ಪ್ರವೇಶ ದರಕ್ಕೆ ದ್ವಾರದ ಬಳಿ ಪ್ರವಾಸಿಗರು ಆಕ್ಷೇಪ ವ್ಯಕ್ತಪಡಿಸಿದ ಉದಾಹರಣೆ ಇದೆ.[೬೫] ರೂ.೩೫ ಪ್ರವೇಶದರ ಹಾಗೂ ಎಸಿ ದರ ರೂ.೫ ಸೇರಿ ೪೦ ರೂಪಾಯಿ ಭಾರತೀಯ ಪ್ರವಾಸಿಗರಿಂದ ಪಡೆಯುತ್ತಿದ್ದು ಪಟ್ಟದಕಲ್ಲು ಸ್ಮಾರಕಗಳನ್ನು ಹಾಗೂ ದೇವಾಲಯಗಳನ್ನು ವೀಕ್ಷಿಸುವ ಪ್ರವಾಸಿಗರಿಗೆ ಯಾವುದೇ ಮೂಲ ಸೌಕರ್ಯ ಇಲ್ಲದೆ ದುಬಾರಿ ಪ್ರವೇಶದರ ತೆಗೆದುಕೊಳ್ಳುತ್ತಿದ್ದಾರೆ. ಇದು ಪ್ರವಾಸಿಗರ ಸಂಖ್ಯೆಯ ಇಳಿಮುಖಕ್ಕೆ ಕಾರಣವಾಗಿದೆ.

೧೦. **ಸ್ವಚ್ಛತೆ ಕೊರತೆ** : ಪಟ್ಟದಕಲ್ಲು ಸ್ಮಾರಕ ಸಮೂಹದ ಒಳಗಡೆ ಸ್ವಚ್ಛತೆ ಇಲ್ಲ, ಗಲೀಜು ನೀರು ಅನುಪಯುಕ್ತ ವಸ್ತುಗಳು ಬಿದ್ದಿರುತ್ತವೆ.[೬೬] ಇವುಗಳನ್ನು ಎತ್ತಿಹಾಕುವ ಸೌಜನ್ಯತೆ ಯಾರಿಗೆ ಬರಬೇಕು, ವಿಶ್ವಮಟ್ಟದಲ್ಲಿ ಗುರುತಿಸಿಕೊಂಡಿರುವಂತಹ ಸ್ಮಾರಕ ಸಮೂಹದ ಒಳಗಡೆ ಹಾಗಾದರೆ ಹೊರಗಡೆ ನೋಡತೀರದು ಜೊತೆಗೆ ಈ ಸ್ಮಾರಕ ಸಮೂಹದಿಂದ ಜೈನ ದೇವಾಲಯಕ್ಕೆ ಹೋಗುವಂತಹ ಮಾರ್ಗದಲ್ಲಿ ಪರಿಸ್ಥಿತಿ ಇನ್ನು ಶೋಚನೀಯವಾಗಿದೆ.

೧೧. **ಮೂಲ ಸೌಕರ್ಯಗಳಿಲ್ಲದ ಜೈನ ದೇವಾಲಯ** : ಮೇಲೆ ತಿಳಿಸಿದಂತಹ ಅಷ್ಟು ಸಮಸ್ಯೆಗಳು ಪಟ್ಟದಕಲ್ಲು ಸ್ಮಾರಕ ಸಮೂಹಗಳಿಗಿರುವ ಸಮಸ್ಯೆಗಳಾದರೆ ವಿಶ್ವಪಾರಂಪರಿಕ ಪಟ್ಟಿಗೆ ಸೇರಿದಂತಹ ಪಟ್ಟದಕಲ್ಲು ಸ್ಮಾರಕ ಸಮೂಹದಿಂದ ಒಂದೂವರೆ ಕಿಲೋಮೀಟರ್ ದೂರದಲ್ಲಿರುವ ಜೈನ ದೇವಾಲಯವು ಅನಾಥವಾಗಿ ನಿಂತಿದೆ. ಹಾಗೆಯೇ ಯಾವುದೇ ಮೂಲ ಸೌಲಭ್ಯಗಳಿಲ್ಲದೇ ಭಿಕೊ ಎನ್ನುವಂತಿದೆ. ದೇವಾಲಯವೊಂದನ್ನು ಬಿಟ್ಟರೆ ಇಲ್ಲಿ

ಯಾವುದೇ ರೀತಿಯಾದಂತಹ ಸೌಕರ್ಯಗಳಿಲ್ಲ. ಈ ದೇವಾಲಯಕ್ಕೆ ಬೇಕಾಗುವಂತಹ ಪ್ರತ್ಯೇಕ ಸೌಕರ್ಯಗಳನ್ನು ಸಮಸ್ಯೆಗಳ ಒಳಗೆ ಹೇಳುವುದು ಅವಶ್ಯಕ.

- **ನೀರಿನ ವ್ಯವಸ್ಥೆ** : ಪ್ರವಾಸಿಗರು ಈ ದೇವಾಲಯಕ್ಕೆ ಕಡ್ಡಾಯವಾಗಿ ತಮ್ಮ ಬಳಿ ಕುಡಿಯಲು ನೀರು ತಂದರೆ ಮಾತ್ರ ಒಳ್ಳೆಯದು. ಇಲ್ಲವಾದರೆ ಕುಡಿಯಲು ಸಾಮಾನ್ಯವಾಗಿ ಇಲ್ಲಿ ಯಾವ ನೀರು ದೊರೆಯುವುದಿಲ್ಲ, ಹಾಗಾಗಿ ಇಲ್ಲಿಯೂ ಕೂಡ ಪ್ರತ್ಯೇಕವಾಗಿ ಕುಡಿಯುವ ನೀರಿನ ಸಮಸ್ಯೆಯನ್ನು ಬಗೆಹರಿಸುವುದು ತುಂಬಾ ಅವಶ್ಯಕವಾಗಿದೆ.
- **ಶೌಚಾಲಯಗಳು** : ಈ ದೇವಾಲಯದ ಬಳಿ ಪ್ರವಾಸಿಗರು ಶೌಚಾಲಯ ವಿಷಯದಲ್ಲಿ ತುಂಬಾ ತಡಕಾಡುತ್ತಾರೆ ಯಾಕೆಂದರೆ ಇಲ್ಲಿ ಸುಜ್ಜಿತ ಶೌಚಾಲಯಗಳ ವ್ಯವಸ್ಥೆ ಕಲ್ಪಿಸದೇ ಇರುವುದು.
- **ವಿಶ್ರಾಂತಿ ಕಟ್ಟೆ** : ವಿಶ್ರಾಂತಿಗಾಗಿ ಈ ದೇವಾಲಯದ ಬಳಿ ದೇವಾಲಯದ ಪೂರ್ವ ದ್ವಾರದ ಬಳಿ ಮುಂಭಾಗದಲ್ಲಿರುವ ಕಟ್ಟೆಗಳನ್ನು ಅವಲಂಬಿಸಲಾಗಿದೆ. ಇದರಿಂದ ಪ್ರವಾಸಿಗರು ಅಲ್ಲಿ ಮಲಗುವುದು, ತಮ್ಮ ಜೊತೆ ತಂದ ಬ್ಯಾಗ್ ಮತ್ತಿತರ ವಸ್ತುಗಳನ್ನು ಅಲ್ಲಿ ಇಡುವುದು, ಗಲೀಜು ಮಾಡುವುದು ಹೀಗೆ ಮುಂತಾದ ಅನ್ಯ ಚಟುವಟಿಕೆಗಳನ್ನು ಮಾಡುತ್ತಾರೆ. ಹಾಗಾಗಿ ದೇವಾಲಯದ ಆವರಣದಲ್ಲಿ ವಿಶ್ರಾಂತಿ ಕಟ್ಟೆಗಳ ಅಗತ್ಯತೆ ಇದೆ.
- **ಲಘು ಉಪಹಾರ ಕೇಂದ್ರ** : ಪ್ರವಾಸಿಗರು ಸಿಗುವ ತಿಂಡಿಗಳನ್ನೇ ಪಟ್ಟದಕಲ್ಲಿನಿಂದ ತೆಗೆದುಕೊಂಡು ಹೋಗಬೇಕಾದ ಪರಿಸ್ಥಿತಿ ಇಲ್ಲಿದೆ. ಹಾಗಾಗಿ ಅಂತಹ ವ್ಯವಸ್ಥೆಗಿಂತ ದೇವಾಲಯದ ಬಳಿಯಲ್ಲಿಯೇ ಒಂದು ಲಘು ಉಪಹಾರ ಕೇಂದ್ರ ತೆರೆದರೆ ತುಂಬಾ ಅನುಕೂಲವಾಗಲಿದೆ.
- **ಕಸದ ತೊಟ್ಟಿಗಳು** : ಎಲ್ಲೆಂದರಲ್ಲಿ ಬೀಸಾಡುವ ಕಾಗದದ ಚೂರುಗಳು, ಪ್ಲಾಸ್ಟಿಕ್ ಮುಂತಾದ ತ್ಯಾಜ್ಯ ವಸ್ತುಗಳನ್ನು ಹಾಕಲು ಕಸದಬುಟ್ಟಿಗಳ ಅವಶ್ಯಕತೆ ಇದೆ, ಇದನ್ನು ಒಂದು ಕಡೆ ಬುಟ್ಟಿಯಲ್ಲಿ ಹಾಕಿದರೆ ಪರಿಸರವೂ ಕೂಡ ಸ್ವಚ್ಛತೆಯಿಂದ ಕೂಡಿರಲು ಸಹಾಯಕವಾಗುತ್ತದೆ.

- **ಉದ್ಯಾನವನ ನಿರ್ಮಾಣ ಮತ್ತು ನಿರ್ವಹಣೆ** : ದೇವಾಲಯದ ಮುಂಭಾಗ ಅಕ್ಕಪಕ್ಕದಲ್ಲಿ ಸಾಕಷ್ಟು ಜಾಗವಿದೆ. ಇದನ್ನೆಲ್ಲಾ ಉದ್ಯಾನವನವನ್ನಾಗಿ ನಿರ್ಮಿಸಿದರೆ ಉತ್ತಮವಾದ ಪರಿಸರವನ್ನು ರಚಿಸಿದಂತಾಗುತ್ತದೆ. ಇದರಿಂದ ಪ್ರವಾಸಿಗರು ಕೂಡ ನೆಮ್ಮದಿಯಿಂದ ಹೋಗಿಬರಲು ಆಕರ್ಷಣೀಯವಾಗಿರುತ್ತದೆ. ಜೊತೆಗೆ ವಿಶ್ರಾಂತಿಗೂ ಅನುಕೂಲ ಮಾಡಿಕೊಟ್ಟಂತಾಗುತ್ತದೆ.

೧೧. **ವಸತಿ ವ್ಯವಸ್ಥೆಯ ಸಮಸ್ಯೆ** : ವಿಶ್ವಪಾರಂಪರಿಕ ನೆಲೆ ಪಟ್ಟದಕಲ್ಲಿಗೆ ಬಂದರೆ ಪ್ರವಾಸಿಗರು ತಾಲೂಕು ಕೇಂದ್ರ ಬಾದಾಮಿಯ ಲಾಡ್ಜ್‌ಗಳಲ್ಲಿ ಉಳಿದುಕೊಳ್ಳಬೇಕು. ಇಲ್ಲವಾದಲ್ಲಿ ಪ್ರವಾಸಿಗರು ತುಂಬಾ ಕಷ್ಟಪಡಬೇಕಾಗುತ್ತದೆ. ಯಾಕೆಂದರೆ ವಾಹನಗಳ ಸೌಕರ್ಯ ಕೂಡ ಸರಿಯಾಗಿಲ್ಲ, ಪಟ್ಟದಕಲ್ಲಿನಲ್ಲಿ ವಸತಿ ವ್ಯವಸ್ಥೆಯ ಕೊರತೆಯಿದ್ದು, ಇಲ್ಲಿ ಬಂದು ಹೋಗುವ ಅನೇಕ ಪ್ರವಾಸಿಗರು ಒಬ್ಬಂಟಿಯಾಗಿರುತ್ತಾರೆ. ಕುಟುಂಬ, ಸ್ನೇಹಿತರು, ಶಾಲಾ–ಕಾಲೇಜು ವಿದ್ಯಾರ್ಥಿಗಳು ಹೀಗೆ ಅನೇಕ ರೀತಿಯ ಪ್ರವಾಸಿಗರು ಬಂದು ಹೋಗುವುದರಿಂದ ಇವರಿಗೆ ಕೈಗೆಟುಕುವ ದರದಲ್ಲಿ ವಸತಿ ಸೌಲಭ್ಯದ ಅವಶ್ಯಕತೆ ಇದೆ.

**ವಿಶ್ವಪರಂಪರಾ ನೆಲೆ ಪಟ್ಟದಕಲ್ಲಿನಲ್ಲಿ ಅಭಿವೃದ್ಧಿ ಪಡಿಸಬಹುದಾದ ಯೋಜನೆಗಳು** :

ವಿಶ್ವಪಾರಂಪರಿಕ ನೆಲೆ ಪಟ್ಟದಕಲ್ಲನ್ನು ಅಭಿವೃದ್ಧಿಪಡಿಸುವ ಪ್ರಯತ್ನದ ಅಗತ್ಯವು ಸಂಬಂಧಪಟ್ಟ ಸಂಸ್ಥೆಗಳು ಮಾಡಬಹುದಾದ ಕೆಲವು ಅಭಿವೃದ್ಧಿ ಯೋಜನೆಗಳನ್ನು ಇಲ್ಲಿ ಗುರುತಿಸಲಾಗಿದೆ.

**೧. ಪಾರಂಪರಿಕ ಸ್ಮಾರಕಗಳಿಗೆ ತೆರಳುವ ಮಾರ್ಗಗಳನ್ನು ಅಭಿವೃದ್ಧಿಪಡಿಸುವುದು** :

ಪಾರಂಪರಿಕ ನೆಲೆ ಪಟ್ಟದಕಲ್ಲು ಸ್ಮಾರಕ ಸಮೂಹಕ್ಕೆ ಇರುವ ಮಾರ್ಗಗಳನ್ನು ಅಭಿವೃದ್ಧಿಪಡಿಸುವುದಕ್ಕೂ ಮುಂಚೆ ಅಲ್ಲಿ ಅಸ್ತಿತ್ವದಲ್ಲಿರುವ ಮಾರ್ಗಗಳನ್ನು ಸುಧಾರಿಸುವುದು, ಪಾದಚಾರಿ ಮಾರ್ಗಗಳನ್ನು ಸುಧಾರಿಸುವ ಯೋಜನೆಯ ಅಗತ್ಯತೆಯಿದೆ. ಮುಖ್ಯವಾಗಿ ಅಮೀನಗಡದಿಂದ ಮತ್ತು ಬಾದಾಮಿಯಿಂದ ಬರುವ ರಸ್ತೆ ಮಾರ್ಗವನ್ನು ಅಭಿವೃದ್ಧಿಪಡಿಸುವುದು ಹಾಗೂ ಪಟ್ಟದಕಲ್ಲು ಸ್ಮಾರಕ ಸಮೂಹದಿಂದ ಜೈನ ದೇವಾಲಯದವರೆಗಿನ ಮಾರ್ಗವನ್ನು ಅಭಿವೃದ್ಧಿಪಡಿಸಿ ಮುಖ್ಯ ರಸ್ತೆ ಮಾರ್ಗದಿಂದ ಜೈನ ದೇವಾಲಯದವರೆಗಿನ ಸುಮಾರು ೧೦೦ ಮೀಟರ್‌ನಷ್ಟಿರುವ ಪಾದಚಾರಿ ರಸ್ತೆ ಮಾರ್ಗವನ್ನು ಅಭಿವೃದ್ಧಿಪಡಿಸುವ ಯೋಜನೆಯನ್ನು ಮಾಡಬಹುದು. ಇದರಿಂದ ಪ್ರವಾಸಿಗರಿಗೆ ಉತ್ತಮ

ಮಾರ್ಗಗಳ ಸೌಕರ್ಯ ದೊರೆಯುವುದರ ಮೂಲಕ ಆರಾಮದಾಯಕ ಪ್ರಯಾಣ ಮಾಡುವಲ್ಲಿ ಯಶಸ್ವಿಯಾಗುತ್ತಾರೆ. ಈ ಮಾರ್ಗ ಮಧ್ಯದಲ್ಲಿ ವಿಶ್ರಾಂತಿಧಾಮಗಳು, ತ್ಯಾಜ್ಯ ತೊಟ್ಟಿಗಳು, ಕುಡಿಯುವ ನೀರಿನ ಘಟಕಗಳ ಸ್ಥಾಪನೆಯನ್ನು ಹಾಗೂ ಮಾರ್ಗಮಧ್ಯದ ಅಲ್ಲಲ್ಲಿ ಮಾರ್ಗಸೂಚಕ ಫಲಕಗಳನ್ನು ಅಳವಡಿಸಬೇಕು. ಇದರಿಂದ ಪ್ರವಾಸಿಗರು ಸರಿಯಾದ ಮಾರ್ಗದಿಂದ ಪಟ್ಟದಕಲ್ಲನ್ನು ತಲುಪಲು ಅನುಕೂಲವಾಗುತ್ತದೆ.

**೨. ವಾಹನ ನಿಲ್ದಾಣ ಹಾಗೂ ಮೂಲಭೂತ ಸೌಕರ್ಯಗಳ ವ್ಯವಸ್ಥೆಯನ್ನು ಕಲ್ಪಿಸುವುದು :**

ಪಟ್ಟದಕಲ್ಲು ಸ್ಮಾರಕ ಸಮೂಹದ ಮುಂಭಾಗದಲ್ಲಿ ವ್ಯವಸ್ಥಿತವಾದ ವಾಹನ ನಿಲ್ದಾಣವು ಇಲ್ಲದಿರುವುದು ದುರಂತವೇ ಸರಿ. ಪ್ರವಾಸಿಗರ ವಾಹನಗಳನ್ನು ನಿಲ್ಲಿಸಲು ವ್ಯವಸ್ಥಿತವಾದ ಒಂದು ನಿಲ್ದಾಣದ ಅವಶ್ಯಕತೆ ಇದೆ. ಕಾರು, ಪ್ರವಾಸಿ ಬಸ್ಸುಗಳು, ದ್ವಿಚಕ್ರ ವಾಹನಗಳು, ಕ್ರೂಸರ್ ಮುಂತಾದ ವಾಹನಗಳನ್ನು ನಿಲ್ಲಿಸಲು ಸಮೂಹದ ಹತ್ತಿರ ಮತ್ತು ಜೈನ ದೇವಾಲಯದ ಹತ್ತಿರ ಪಾರ್ಕಿಂಗ್‌ನ ಅವಶ್ಯಕತೆ ಇದೆ. ಇದರ ಜೊತೆಗೆ ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರಿನ ವ್ಯವಸ್ಥೆ, ಶೌಚಾಲಯಗಳು ಸಾಮಾನ್ಯವಾಗಿ ಪ್ರವಾಸಿಗರಿಗೆ ಬೇಕಾಗುವ ಆಹಾರ ಸಾಮಗ್ರಿಗಳ ಮಳಿಗೆಗಳು ಮುಂತಾದ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಅವಶ್ಯಕ.

**೩. ಧ್ವನಿ ಮತ್ತು ಬೆಳಕಿನ ಪ್ರದರ್ಶನದ ವ್ಯವಸ್ಥೆಯನ್ನು ಅಳವಡಿಸುವುದು :**

ಪಟ್ಟದಕಲ್ಲಿನಲ್ಲಿ ಸುಮಾರು ಹತ್ತು ದೇವಾಲಯಗಳು ಇರುವುದು ನಮಗೆ ತಿಳಿದಿರುವ ವಿಚಾರ. ಪ್ರತಿಯೊಂದು ತನ್ನದೇ ಆದ ಐತಿಹಾಸಿಕ ಹಿನ್ನೆಲೆ ಹೊಂದಿವೆ. ಲಭ್ಯವಿರುವ ಶಾಸನಗಳು ಮತ್ತು ಸಾಹಿತ್ಯಧಾರಗಳಿಂದ ತಿಳಿಯುತ್ತದೆ. ಇವುಗಳನ್ನು ಆಧಾರವಾಗಿಟ್ಟುಕೊಂಡು ಐತಿಹಾಸಿಕ ಮಾಹಿತಿಯನ್ನು ಕಥೆಯ ರೂಪದಲ್ಲಿ ಸೃಷ್ಟಿಮಾಡಿ, ಧ್ವನಿ ಮತ್ತು ಬೆಳಕಿನ ಪ್ರದರ್ಶನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು. ಈ ಯೋಜನೆಯನ್ನು ಸಿದ್ಧಪಡಿಸುವ ಮೂಲಕ ಅವಶ್ಯಕ ಸಾಮಗ್ರಿಗಳನ್ನು ಒದಗಿಸಿ ಅನುಷ್ಠಾನಗೊಳಿಸಬೇಕು. ಪಟ್ಟದಕಲ್ಲು ಉತ್ಸವದಲ್ಲಿ ಪ್ರದರ್ಶಿಸುವ ಮೂಲಕ ಜನಸಾಮಾನ್ಯರಿಗೆ ಇದರ ಬಗ್ಗೆ ಅರಿವು ಮೂಡಿಸಬೇಕಾದ ಅನಿವಾರ್ಯತೆಯಿದೆ.

**೪. ನೈಸರ್ಗಿಕ ಉದ್ಯಾನವನ ಅಭಿವೃದ್ಧಿಪಡಿಸುವುದು :**

ಉದ್ಯಾನವನವು ನೈಸರ್ಗಿಕ, ಅರೆ ನೈಸರ್ಗಿಕ ಅಥವಾ ನೆಟ್ಟ ಜಾಗವನ್ನು ಮಾನವನ ಸಂತೋಷ ಮತ್ತು ಮನರಂಜನೆಗಾಗಿ ಅಥವಾ ವನ್ಯಜೀವಿಗಳ ರಕ್ಷಣೆಗಾಗಿ ಮೀಸಲಿಡಲಾಗಿದೆ.

ಈ ಉದ್ಯಾನವನ ಮಾನವನ ಮನೋರಂಜನೆಗಾಗಿ ಮೀಸಲಾಗಿರುವ ಸ್ಥಳಗಳಾಗಿದೆ. ಪ್ರಸ್ತುತ ಉದ್ಯಾನವು ಸ್ಮಾರಕದ ಕಟ್ಟಡಗಳನ್ನು ಅಭಿವೃದ್ಧಿಪಡಿಸುವ ಹಿನ್ನೆಲೆಯಲ್ಲಿ ಅಭಿವೃದ್ಧಿಪಡಿಸಬೇಕಾದ ಉದ್ಯಾನವನವಾಗಬೇಕಿದೆ. ಪಟ್ಟದಕಲ್ಲಿನಲ್ಲಿ ಸು. ೫-೬ ಎಕರೆಗಳಲ್ಲಿ ಉದ್ಯಾನವನವನ್ನು ಅಭಿವೃದ್ಧಿಪಡಿಸಬೇಕು. ಇದರಲ್ಲಿ ಅನೇಕ ಮರಗಳನ್ನು ನೆಡಬೇಕು, ವಿಶ್ರಾಂತಿ ಕಟ್ಟೆಗಳು ಲಘು ಉಪಹಾರ ಕೇಂದ್ರಗಳು, ನೀರಿನ ತೊಟ್ಟಿಗಳು, ಸಂಗೀತ ಕಾರಂಜಿ, ಪ್ರಾಣಿ-ಪಕ್ಷಿಗಳು ಇದರಿಂದ ಪಟ್ಟದಕಲ್ಲು ಉದ್ಯಾನವನದಲ್ಲಿ ಹೆಚ್ಚಿನ ಗಿಡಮರಗಳು ಬೆಳೆಯುವುದುರಿಂದ ಪಕ್ಷಿ ಸಂಕುಲಕ್ಕೆ ಆಸರೆಯಾಗುತ್ತದೆ.

**೫. ಪಟ್ಟದಕಲ್ಲು ಉತ್ಸವ ಅಭಿವೃದ್ಧಿಪಡಿಸುವುದು :**

ಪಟ್ಟದಕಲ್ಲು ಉತ್ಸವದ ಮೂಲಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪಾರಂಪರಿಕವಾಗಿ ನಡೆದುಕೊಂಡು ಬಂದಿರುವ ಅಲ್ಲಿನ ಸಂಸ್ಕೃತಿಯನ್ನು ನಾಡಿಗೆ ತಿಳಿಸಬೇಕು. ಉತ್ಸವದಲ್ಲಿ ಸ್ಮಾರಕಗಳ ಸ್ಥಳೀಯ ಸಂರಕ್ಷಣಾಕಾರರಿಗೆ ಬಹುಮಾನ ಕೊಡುವ ಮೂಲಕ ಸ್ಥಳೀಯರಲ್ಲಿ ಸ್ಮಾರಕಗಳ ಬಗ್ಗೆ ಅರಿವು ಮೂಡಿಸಬಹುದು. ಈ ಹಿಂದೆ ನಡೆದ ಉತ್ಸವಗಳಲ್ಲಿ ಅನೇಕ ಕಾರ್ಯಗಳು ಜರುಗಿವೆ. ಸುಮಾರು ಮೂರು ದಿನಗಳವರೆಗೆ ಜರುಗಿದ ಈ ಉತ್ಸವದಲ್ಲಿ ಆಂಧ್ರಪ್ರದೇಶ, ಕೇರಳ, ಮಹಾರಾಷ್ಟ್ರ, ಅಸ್ಸಾಂ ಮತ್ತು ಮಣಿಪುರದ ಸಾಂಸ್ಕೃತಿಕ ಗುಂಪುಗಳು ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಪ್ರಸ್ತುತಪಡಿಸಿವೆ. ಈ ಸಂದರ್ಭದಲ್ಲಿ ಅನೇಕ ಗಾಯಕರಿಗೆ ಸನ್ಮಾನಿಸಿದ್ದಾರೆ. ಮುಖ್ಯವಾಗಿ ಇಲ್ಲಿ ಪಟ್ಟದಕಲ್ಲು ಸಾಂಸ್ಕೃತಿಕ ವೈಭವ ಹಾಗೂ ಬಾದಾಮಿ ಚಾಲುಕ್ಯರ ವೈಭವವನ್ನು ಪ್ರಸ್ತುತಪಡಿಸುವುದು ಅವಶ್ಯಕ.

**೬. ತ್ಯಾಜ್ಯ ತೊಟ್ಟಿಗಳನ್ನು ಆಳವಡಿಸುವುದು :**

ಪಟ್ಟದಕಲ್ಲು ಸ್ಮಾರಕ ಸಮೂಹದಲ್ಲಿ ಹಾಗೂ ಜೈನ ದೇವಾಲಯದಲ್ಲಿ ತ್ಯಾಜ್ಯ ತೊಟ್ಟಿಗಳನ್ನು ಆಳವಡಿಸಬೇಕು ಜೊತೆಗೆ ಸ್ವಚ್ಛತೆ ಕಾಪಾಡಬೇಕು. ದ್ರವರೂಪದ ತ್ಯಾಜ್ಯ ಹಾಗೂ ಘನರೂಪದ ತ್ಯಾಜ್ಯಗಳಿಗೆ ಪ್ರತ್ಯೇಕವಾದ ತೊಟ್ಟಿಗಳ ನಿರ್ಮಾಣದ ಅಗತ್ಯತೆ ಇದೆ. ಸಮೂಹದ ಹತ್ತಿರ ಸಾಮಾನ್ಯವಾಗಿ ಪ್ರವಾಸಿಗರು ಹಣ್ಣು ಹಂಪಲುಗಳನ್ನು, ಕುರುಕುಲು ತಿಂಡಿ, ಉಪಹಾರವನ್ನು ತರುವುದರಿಂದ, ಅದರಿಂದ ತ್ಯಾಜ್ಯ ವಸ್ತುಗಳು ಹೆಚ್ಚಾಗುತ್ತವೆ. ಜೊತೆಗೆ ಪ್ಲಾಸ್ಟಿಕ್‌ಗಳು ಸಹ ಹೆಚ್ಚಾಗಿ ಬೀಳುವುದರಿಂದ ಅಂತಹ ತ್ಯಾಜ್ಯಗಳನ್ನು ಒಂದು ಕಡೆ ಹಾಕಲು ತೊಟ್ಟಿಗಳ ಅವಶ್ಯಕತೆ ಇದೆ. ಇನ್ನುಳಿದಂತೆ ಕಸ-ಕಡ್ಡಿ ಪ್ರತಿದಿನ ಸ್ವಚ್ಛಗೊಳಿಸುತ್ತಿರಬೇಕು. ಇದಕ್ಕೆ ಪ್ರತ್ಯೇಕವಾಗಿ ಸ್ವಚ್ಛತಾ ಸಿಬ್ಬಂದಿಗಳ ಅವಶ್ಯಕತೆಯೂ ಇದೆ.

೭. ಆಹಾರ ಮಳಿಗೆಗಳು :

ಆಹಾರ ಮಳಿಗೆಗಳೆಂದರೆ ಕೇವಲ ಊಟಕ್ಕಾಗಿ ಅಲ್ಲದೆ ವಿಶ್ವಮಟ್ಟದಲ್ಲಿ ಮನ್ನಣೆ ಪಡೆದ ಪಟ್ಟದಕಲ್ಲಿಗೆ ಕರ್ನಾಟಕದಲ್ಲಿರುವ ಅನೇಕ ಸಾಂಸ್ಕೃತಿಕ ಆಹಾರ ಪದ್ಧತಿಯನ್ನು ಹೊಂದಿದ ಪ್ರವಾಸಿಗರು ಹೊರ ರಾಜ್ಯದ ಪ್ರವಾಸಿಗರು ವಿದೇಶಿ ಪ್ರವಾಸಿಗರು ಇಲ್ಲಿಗೆ ಬರುತ್ತಾರೆ. ಬಂದ ಪ್ರವಾಸಿಗರ ಆಹಾರ ಪದ್ಧತಿ ಬೇರೆಬೇರೆಯಾಗಿರುತ್ತದೆ. ಕೆಲವರು ಸ್ಥಳೀಯ ಆಹಾರ ಪದ್ಧತಿಯನ್ನು ಸವಿದರೆ ಇನ್ನೂ ಕೆಲವು ಪ್ರವಾಸಿಗರು ತಮ್ಮ ತಮ್ಮ ಆಹಾರ ಪದ್ಧತಿಯನ್ನು ಸ್ಥಳೀಯ ಮಟ್ಟದಲ್ಲಿರುವ ಹೋಟೆಲ್‌ಗಳಲ್ಲಿ ಬಯಸುತ್ತಿರುತ್ತಾರೆ. ಕೆಲವರು ಸಸ್ಯಹಾರಿಗಳು, ಮಾಂಸಹಾರಿಗಳು ಬರುವುದರಿಂದ ಯಾವೊಬ್ಬ ಪ್ರವಾಸಿಗರು ನಿರಾಶರಾಗದೇ ಎಲ್ಲಾ ರೀತಿಯ ಆಹಾರ ಪದಾರ್ಥಗಳು ದೊರೆಯುವ ಸ್ಥಳ ಇದಾಗಿದ್ದರೆ ತಮಗೆ ಅನುಕೂಲವಾಗುವ ಸ್ಥಳ ಇದೆಂದು ಭಾವಿಸಿ ಪ್ರವಾಸಿಗರು ಮತ್ತೆ ಮತ್ತೆ ಬರಲಿಕ್ಕೆ ಇಚ್ಚಿಸುತ್ತಾರೆ. ಹಾಗಾಗಿ ಆಹಾರ ಮಳಿಗೆಗಳ ಅವಶ್ಯಕತೆ ಇಲ್ಲಿದೆ.

೮. ಕರಕುಶಲ ಸಾಮಾಗ್ರಿ, ಮಾರಾಟ ಮತ್ತು ವಾಣಿಜ್ಯ ಮಳಿಗೆಗಳು :

ಒಂದು ಸ್ಮಾರಕ ಕೇಂದ್ರವೆಂದರೆ ಕೇವಲ ಸ್ಮಾರಕಗಳ ವೀಕ್ಷಣೆಯಷ್ಟೇ ಅಲ್ಲದೇ ಅನೇಕ ರೀತಿಯ ಗೃಹ ಉಪಯೋಗಿ ವಸ್ತುಗಳನ್ನು ಮಾರಾಟ ಮಾಡುವ ಮೂಲಕ ಪ್ರವಾಸಿಗರಿಗೆ ಸ್ಥಳೀಯ ಕರಕುಶಲ ಸಾಮಗ್ರಿಗಳನ್ನು ಪರಿಚಯ ಮಾಡುವುದಾಗಿದೆ. ಇದಕ್ಕೆ ಗೃಹಕೈಗಾರಿಕೆಗಳು, ವಾಣಿಜ್ಯ ಮಳಿಗೆಗಳು ಸಹಾಯಕವಾಗಬಲ್ಲವು. ಇತ್ತೀಚಿನ ದಿನಗಳಲ್ಲಿ ಗೃಹಪಯೋಗಕ್ಕೆ ಅನೇಕ ಆಧುನಿಕ ಉಪಕರಣಗಳ ಬಳಕೆಯಾಗುತ್ತಿದೆ, ಇದರಿಂದ ತಮ್ಮ ಮನೆ ಸುಂದರವಾಗಿ ಕಾಣಲು ಪ್ರಯತ್ನಿಸಿದಂತಾಗುತ್ತದೆ. ಇಂದಿನ ಶಿಲ್ಪಿಗಳು ಸೂಕ್ಷ್ಮ ಕೆತ್ತನೆಯಿಂದ ಎರಡು ಮೂರು ಅಡಿ ಉದ್ದಗಲದಲ್ಲಿ ಇಡೀ ಪಟ್ಟದಕಲ್ಲು ಸ್ಮಾರಕ ಸಮೂಹವನ್ನು ಒಂದು ಕಡೆ ಚಿತ್ರಿಸಬಲ್ಲವರಿದ್ದಾರೆ. ಅಂತಹ ಶಿಲ್ಪಗಳನ್ನು, ಛಾಯಾಚಿತ್ರಗಾರರ ಚಿತ್ರಗಳನ್ನು ಮಾರಾಟ ಮಾಡುವುದರ ಮೂಲಕ ವ್ಯವಹಾರ ಮತ್ತು ಸ್ಥಳೀಯ ಕಲಾವಿದರ ಪರಿಚಯ ಮುಖ್ಯವಾಗುತ್ತದೆ. ಜೊತೆಗೆ ಸ್ಥಳೀಯ ಆಹಾರ ಸಾಮಗ್ರಿಗಳು, ಕಾಳುಗಳು, ಉತ್ಪನ್ನಗಳ ಮಾರಾಟ ಕೂಡ ಇದರಲ್ಲಿ ಸೇರಿರುತ್ತವೆ.

೯. ವಸ್ತುಸಂಗ್ರಹಾಲಯದ ಅಭಿವೃದ್ಧಿ :

ಪ್ರಾಚೀನ ಪರಂಪರೆಯನ್ನು ಒಂದು ಕಡೆ ಇಟ್ಟು ಅವುಗಳನ್ನೆಲ್ಲಾ ಪ್ರವಾಸಿಗರಿಗೆ ವೀಕ್ಷಿಸುವ ಒಂದು ಕೇಂದ್ರ ವಸ್ತುಸಂಗ್ರಹಾಲಯ. ಇಂತಹದೊಂದು ಕೇಂದ್ರ ಪಟ್ಟದಕಲ್ಲಿನಲ್ಲಿ ಇಲ್ಲ ಎಂಬುದೊಂದು ದುರಂತವೇ ಸರಿ. ಪ್ರವಾಸಿಗರಿಗೆ ನೆರವಾಗಬಲ್ಲ, ಉಜ್ವಲ ಪರಂಪರೆಯ

ನೆನಪು ಮಾಡಿಕೊಡುವ ಸ್ಮಾರಕಗಳ ಉಳಿವಿಗಾಗಿ ಮುಂದಿನ ಪೀಳಿಗೆಯವರೆಗೆ ಇವುಗಳ ಪರಿಚಯ ಮಾಡಿಕೊಡಲು ಇರುವ ಸೌಲಭ್ಯವಿಲ್ಲದೆ, ಪಟ್ಟದಕಲ್ಲಿನ ಶಿಲ್ಪಕಲಾಕೃತಿಗಳು ಅಲ್ಲಿನ ವಸ್ತುಸಂಗ್ರಹಾಲಯದ ಮುಂಭಾಗದಲ್ಲಿಯೇ ಬಿಸಿಲು–ಮಳೆಯಿಂದ ಸಂರಕ್ಷಣೆಯಿಲ್ಲದೆ ಬಿದ್ದಿವೆ. ಮಲಪ್ರಭಾ ನದಿಯ ಹೆಚ್ಚುವರಿ ನೀರಿನ ಹರಿವಿನಿಂದಾಗಿ ಶಿಲ್ಪಕಲಾ ಸಂಗ್ರಹಾಲಯ ಮುಚ್ಚಿ ಒಳಗಿನ ಎಲ್ಲಾ ಶಿಲ್ಪಗಳನ್ನು ಹೊರಗಡೆ ಇಟ್ಟಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಬೇಕಾದ ಮಾಹಿತಿಯನ್ನು ಪಡೆಯಲು ಹತ್ತಿರದ ಬಾದಾಮಿ ಅಥವಾ ಐಹೊಳೆಯ ವಸ್ತುಸಂಗ್ರಹಾಲಯಗಳಿಗೆ ಭೇಟಿ ನೀಡಬೇಕು. ಹಾಗಾಗಿ ವಿಶ್ವಪರಂಪರೆ ನೆಲೆಯಾದ ಪಟ್ಟದಕಲ್ಲಿನಲ್ಲಿಯೇ ವಸ್ತುಸಂಗ್ರಹಾಲಯವನ್ನು ಅಭಿವೃದ್ಧಿಪಡಿಸುವುದು ಅಗತ್ಯವಾಗಿದೆ.

**೧೦. ಇಂಟರ್‌ಪ್ರಿಟೇಶನ್ ಕೇಂದ್ರ :**

ಇದು ಒಂದು ವ್ಯಾಖ್ಯಾನ ಕೇಂದ್ರ, ವಿವರಣಾತ್ಮಕ ಕೇಂದ್ರ ಅಥವಾ ಸಂದರ್ಶಕರ ವಿವರಣಾತ್ಮಕ ಕೇಂದ್ರ ಇರುವುದು ಅವಶ್ಯಕ. ನೈಸರ್ಗಿಕ, ಸಾಂಸ್ಕೃತಿಕ ಪರಂಪರೆಯ ಜ್ಞಾನವನ್ನು ಪ್ರಸಾರ ಮಾಡುವ ಸಂಸ್ಥೆಯಾಗಿದೆ. ಇಂತಹ ಕೇಂದ್ರಗಳು ಒಂದು ರೀತಿಯ ಹೊಸ ಶೈಲಿಯ ವಸ್ತುಸಂಗ್ರಹಾಲಯವಾಗಿದ್ದು, ಇದನ್ನು ಹೆಚ್ಚಾಗಿ ಸಾಂಸ್ಕೃತಿಕ, ನೈಸರ್ಗಿಕ ತಾಣಗಳಿಗೆ ಸಂಬಂಧಿಸಿದಂತೆ ಸಂದರ್ಶಕರ ಕೇಂದ್ರಗಳಾಗಿ ನಿರ್ಮಾಣ ಮಾಡಲಾಗುತ್ತದೆ. ಪಟ್ಟದಕಲ್ಲು ಸ್ಮಾರಕ ಸಮೂಹದ ಹತ್ತಿರ ಈ ತರಹದ ಒಂದು ಕೇಂದ್ರ ಅತ್ಯವಶ್ಯಕವಾಗಿ ಬೇಕಿದೆ. ಇದರಿಂದ ಪರಂಪರೆಯ ತಿಳುವಳಿಕೆಯನ್ನು ಹೆಚ್ಚಿಸಲು ಅನುಕೂಲವಾಗುತ್ತದೆ. ಬೌದ್ಧಿಕವಾಗಿ ನಾಡಿನ ಪರಂಪರೆಯನ್ನು ತಿಳಿಯುವ ಆಸಕ್ತಿ ಹೊಂದಿದ ಸಂದರ್ಶಕರಿಗೆ ಭಾವನಾತ್ಮಕ ಸಂಪರ್ಕಕ್ಕೆ ಸಹಾಯ ಮಾಡಲು ಮತ್ತು ಉತ್ತೇಜಿಸಲು ಸಾಮಾನ್ಯವಾಗಿ ದೃಶ್ಯ ಪ್ರದರ್ಶನಗಳ ಕಾರ್ಯಕ್ರಮ ಸಂವಹನ ವಿಧಾನಗಳನ್ನು ಬಳಸುತ್ತವೆ. ಈ ವ್ಯಾಖ್ಯಾನ ಕೇಂದ್ರದಲ್ಲಿ ಸ್ಥಳಕ್ಕೆ ಭೇಟಿ ನೀಡುವ ಸಂದರ್ಶಕರಿಗೆ ಸ್ಥಳದ ಮಹತ್ವವನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡುವ ಮೂಲಕ ಮತ್ತು ಸಂದರ್ಶಕರ ಸ್ವಂತ ವೈಯಕ್ತಿಕ ಜೀವನಕ್ಕೆ ಆ ಅರ್ಥಗಳನ್ನು ಸಂಪರ್ಕಿಸುವ ಮೂಲಕ ಸಂದರ್ಶಕರ ಅನುಭವವನ್ನು ಸುಧಾರಿಸುವುದು ಮತ್ತು ಉತ್ಕೃಷ್ಟಗೊಳಿಸುವುದು ಕೇಂದ್ರದ ಗುರಿಯಾಗಿರುತ್ತದೆ.

**೧೧. ಗ್ರಾಮೀಣ ಪ್ರವಾಸೋದ್ಯಮ :**

ಪ್ರವಾಸೋದ್ಯಮ ಸಾಮರ್ಥ್ಯವನ್ನು ಹೊಂದಿರುವ ಗ್ರಾಮೀಣ ಪ್ರದೇಶಗಳಲ್ಲಿ ಮೂಲಸೌಕರ್ಯಗಳ ಅಭಿವೃದ್ಧಿಗೆ ಅಸ್ತಿತ್ವದಲ್ಲಿರುವ ಗಮ್ಯಸ್ಥಾನ ಅಭಿವೃದ್ಧಿಯ

ಯೋಜನೆಯಡಿ ಬೆಂಬಲ ನೀಡಲಾಗುತ್ತಿದೆ. ಕಲೆ ಕರಕುಶಲ, ಕೈಮಗ್ಗ ಮತ್ತು ಜವಳಿಗಳಲ್ಲಿ ಪ್ರಮುಖ ಸಾಮರ್ಥ್ಯವನ್ನು ಹೊಂದಿರುವ ಗ್ರಾಮೀಣ ಸ್ಥಳಗಳಲ್ಲಿ ಮತ್ತು ಹಳ್ಳಿಗಳಲ್ಲಿ ಗ್ರಾಮೀಣ ಜೀವನ, ಕಲೆ, ಸಂಸ್ಕೃತಿ ಮತ್ತು ಪರಂಪರೆಯನ್ನು ಪ್ರದರ್ಶಿಸುವುದು ಇದರ ಉದ್ದೇಶವಾಗಿದೆ. ಸ್ಥಳೀಯ ಸಮುದಾಯಕ್ಕೆ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಲಾಭವಾಗುವುದರ ಜೊತೆಗೆ ಪರಸ್ಪರ ಸಮೃದ್ಧ ಅನುಭವಕ್ಕಾಗಿ ಪ್ರವಾಸಿಗರು ಮತ್ತು ಸ್ಥಳೀಯ ಜನಸಂಖ್ಯೆಯ ನಡುವಿನ ಸಂವಾದವನ್ನು ಶಕ್ತಗೊಳಿಸುವುದು ಇದರ ಉದ್ದೇಶ. ಈ ಯೋಜನೆಯಡಿಯಲ್ಲಿ, ಪ್ರವಾಸೋದ್ಯಮ ಮತ್ತು ಅದರ ಸಾಮಾಜಿಕ-ಆರ್ಥಿಕ ಪ್ರಯೋಜನಗಳನ್ನು ಗ್ರಾಮೀಣ ಮತ್ತು ಅದರ ಹೊಸ ಭೌಗೋಳಿಕ ಪ್ರದೇಶಗಳಿಗೆ ಹರಡಲು ಗ್ರಾಮ ಪ್ರವಾಸೋದ್ಯಮವನ್ನು ಪ್ರಾಥಮಿಕ ಪ್ರವಾಸೋದ್ಯಮ ಉತ್ಪನ್ನವಾಗಿ ಉತ್ತೇಜಿಸುವುದು, ಆ ಮೂಲಕ ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಗಳಿಗೆ ಹೊರಹೋಗುವುದನ್ನು ನಿಲ್ಲಿಸುತ್ತದೆ. ಗ್ರಾಮ ಮಟ್ಟದ ಕೌನ್ಸಿಲ್ ಕಾರ್ಯಯೋಜನೆ ಅನುಷ್ಠಾನದಲ್ಲಿ ಸ್ಥಳೀಯ ಸಮುದಾಯದ ಪಾಲ್ಗೊಳ್ಳುವಿಕೆಯ ಸಂವಾದಾತ್ಮಕ ವೇದಿಕೆಯಾಗಿದೆ. ಇದನ್ನು ಇತರ ಸಮುದಾಯ ಮಟ್ಟದ ಸಂಸ್ಥೆಗಳು ಮತ್ತಷ್ಟು ಬೆಂಬಲಿಸುತ್ತವೆ. ಸಂದರ್ಶಕರಿಗೆ, ಅವರ ಖರ್ಚು ಆತಿಥೇಯ ಸಮುದಾಯ ಸೇವಾ ಪೂರೈಕೆದಾರರಿಗೆ ಆದಾಯವನ್ನು ಸೃಷ್ಟಿಸುತ್ತದೆ. ನುರಿತ ಸ್ಥಳೀಯ ಕುಶಲಕರ್ಮಿಗಳು ನೀಡುವ ಕಲೆ ಮತ್ತು ಕರಕುಶಲತೆಗಳಲ್ಲಿ ಪ್ಯಾಕೇಜ್ ಮಾಡಲಾದ ಕಾರ್ಯಕ್ರಮಗಳ ಮೂಲಕ ಗ್ರಾಮೀಣ ಪ್ರವಾಸೋದ್ಯಮವು ಮೌಲ್ಯವನ್ನು ಸೇರಿಸುತ್ತದೆ. ಗ್ರಾಮ ಮನರಂಜನಾ ಗುಂಪುಗಳು ಸ್ಥಳೀಯ ಇತಿಹಾಸ ಮತ್ತು ಸಂಸ್ಕೃತಿ, ನೈಸರ್ಗಿಕ ಮತ್ತು ಮೌಖಿಕ ಸಂಪತ್ತನ್ನು ಅನಾವರಣಗೊಳಿಸುತ್ತವೆ. ಸಂದರ್ಶಕನು ಭಾರತದ ಗ್ರಾಮೀಣ ಸಂಪ್ರದಾಯಗಳೊಂದಿಗೆ ಮುಖಾಮುಖಿಯಾಗುತ್ತಾನೆ. ಇಲ್ಲಿಯವರೆಗೆ, ೨೮ ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಲ್ಲಿ ೧೫೩ ಗ್ರಾಮೀಣ ಪ್ರವಾಸೋದ್ಯಮ ಯೋಜನೆಗಳನ್ನು ಪ್ರವಾಸೋದ್ಯಮ ಸಚಿವಾಲಯವು ೩೬ ಗ್ರಾಮೀಣ ತಾಣಗಳನ್ನು ಒಳಗೊಂಡಂತೆ ಮಂಜೂರು ಮಾಡಿದೆ.

**೧೨. ಆಂಫಿಥಿಯೇಟರ್ :**

ಆಂಫಿಥಿಯೇಟರ್ ಎನ್ನುವುದು ಮನರಂಜನೆಗೆ ಪ್ರದರ್ಶನ ಮತ್ತು ಕ್ರೀಡೆಗಳಿಗೆ ಬಳಸುವ ತೆರೆದ ಸ್ಥಳವಾಗಿದೆ. ಈ ಪದವು ಪ್ರಾಚೀನ ಗ್ರೀಕ್ (ಆಂಫಿಥಿಯೆಟ್ರಾನ್) ನಿಂದ (ಆಂಫಿ), ಅಂದರೆ 'ಎರಡೂ ಬದಿಗಳಲ್ಲಿ' ಅಥವಾ 'ಸುತ್ತಲೂ' ಮತ್ತು (ಥೆಟ್ರಾನ್), ಅಂದರೆ 'ನೋಡುವ ಸ್ಥಳ'. ಪ್ರಾಚೀನ ರೋಮನ್ ಆಂಫಿಥಿಯೇಟರ್‌ಗಳು ಅಂಡಾಕಾರದ ಅಥವಾ

ವೃತ್ತಾಕಾರದಲ್ಲಿದ್ದವು. ಆಧುನಿಕ ತೆರೆದ ಗಾಳಿಯ ಕ್ರೀಡಾಂಗಣದಂತೆ ಕೇಂದ್ರ ಕಾರ್ಯಕ್ಷಮತೆಯ ಪ್ರದೇಶವನ್ನು ಸುತ್ತುವರೆದಿರುವ ಆಸನ ಶ್ರೇಣಿಗಳು. ಇದಕ್ಕೆ ವ್ಯತಿರಿಕ್ತವಾಗಿ ಪ್ರಾಚೀನ ಗ್ರೀಕ್ ಮತ್ತು ಪ್ರಾಚೀನ ರೋಮನ್ ಚಿತ್ರಮಂದಿರಗಳನ್ನು ಅರ್ಧವೃತ್ತದಲ್ಲಿ ನಿರ್ಮಿಸಲಾಗಿದ್ದು ಪ್ರದರ್ಶನ ಪ್ರದೇಶದ ಒಂದು ಬದಿಯಲ್ಲಿ ಶ್ರೇಣೀಕೃತ ಆಸನಗಳು ಏರುತ್ತಿವೆ. ಆಧುನಿಕ ಬಳಕೆಯಲ್ಲಿ, 'ಆಂಫಿಥಿಯೇಟರ್' ಥಿಯೇಟರ್ ಶೈಲಿಯ ಹಂತಗಳನ್ನು ಒಳಗೊಂಡಿರಬಹುದು, ಪ್ರೇಕ್ಷಕರು ಕೇವಲ ಒಂದು ಬದಿಯಲ್ಲಿ ಕುಳಿತುಕೊಳ್ಳಬಹುದು, ಸುತ್ತಿನಲ್ಲಿ ಚಿತ್ರಮಂದಿರಗಳು ಮತ್ತು ಸ್ಟೇಡಿಯಂ ಇರುತ್ತದೆ. ಒಂದೇ ರೀತಿಯ ಆಕಾರದ ನೈಸರ್ಗಿಕ ರಚನೆಗಳನ್ನು ಕೆಲವೊಮ್ಮೆ ನೈಸರ್ಗಿಕ ಆಂಫಿಥಿಯೇಟರ್ಸ್ ಎಂದು ಕರೆಯಲಾಗುತ್ತದೆ. ಈ ತರಹದ ಅಂಪಿಥಿಯೇಟರ್ ಪಾರಂಪರಿಕ ನೆಲೆಯಾದ ಪಟ್ಟದಕಲ್ಲು ಸ್ಥಳದಲ್ಲಿ ಇದ್ದರೆ ಪ್ರವಾಸೋದ್ಯಮಕ್ಕೆ ಹೊಸ ಹೊಸ ರೀತಿಯ ವಿಷಯವನ್ನು ನಡೆಸಲು ಸಹಾಯಕವಾಗಬಲ್ಲದು.

ಮೇಲಿರುವಂತಹ ಅಂಶಗಳನ್ನು ವಿಶ್ವಸಂಸ್ಥೆಯ ಅಂಗಸಂಸ್ಥೆಯಾದ ಯುನೆಸ್ಕೊ ಸ್ಥಳೀಯ ಮಟ್ಟದಲ್ಲಿ ಆರ್ಥಿಕ ವ್ಯವಸ್ಥೆ ರೂಪಿಸಲು ಹಾಗೂ ಪಾರಂಪರಿಕ ಮಟ್ಟದಲ್ಲಿ ಒಂದು ನೆಲೆಯನ್ನು ಅಭಿವೃದ್ಧಿಪಡಿಸಲು ಯೋಜನೆಗಳನ್ನು ಕೈಗೊಳ್ಳಬಹುದು. ಇದರಿಂದ ವ್ಯಾಪಾರ ವಹಿವಾಟು, ನಿರಂತರತೆಯ ಸಂಪರ್ಕ ಇದ್ದಂತಾಗುತ್ತದೆ. ಜೊತೆಗೆ ಪಟ್ಟದಕಲ್ಲಿನ ಕುರಿತು ಸ್ಥಳೀಯ ಪತ್ರಿಕೆಗಳು ಮಾಧ್ಯಮಗಳು ಹೆಚ್ಚಿನ ಗತವೈಭವವನ್ನು ಸಾರಬೇಕಾದದ್ದು ಅವಶ್ಯಕವಾಗಿದೆ. ಸಂರಕ್ಷಣಾ ಕಾರ್ಯ ಮುಖ್ಯವಾದಷ್ಟು ಜಾಹೀರಾತು ಕೂಡ ಅಷ್ಟೇ ಮುಖ್ಯ.

**ಪಟ್ಟದಕಲ್ಲಿಗೆ ಭೇಟಿ ನೀಡಿದ ಪ್ರವಾಸಿಗರ ಸಂಖ್ಯೆ**[೬೭]

| ಕ್ರಸಂ. | ವರ್ಷ | ಪ್ರವಾಸಿಗರ ಸಂಖ್ಯೆ |
|---|---|---|
| ೧ | ೨೦೧೫ | ೩೮೨೬೧೫ |
| ೨ | ೨೦೧೬ | ೩೪೧೭೮೪ |
| ೩ | ೨೦೧೭ | ೩೬೦೧೮೮ |

**ಕೊನೆ ಟಿಪ್ಪಣಿಗಳು**

೧. ಶೀಲಾಕಾಂತ ಪತ್ತಾರ, ೨೦೦೮, ಪಟ್ಟದಕಲ್ಲು ದರ್ಶನ, ಪು. ೧

೨. ಅದೇ, ಪು. ೩

೩. ಅಣ್ಣಿಗೇರಿ ಎ.ಎಂ., ೧೯೬೦, ಪಟ್ಟದಕಲ್ಲು ಗುಡಿಗಳು, ಪು. ೮

೪. ಶೀಲಾಕಾಂತ ಪತ್ತಾರ, ೨೦೦೮, ಪೂರ್ವೋಕ್ತ, ಪು. ೬
೫. ಅದೇ, ಪು. ೭
೬. ಕವಿಶಾಸಂ–೯, ಬಾಗಲಕೋಟ ಜಿಲ್ಲೆ, ಪಟ್ಟದಕಲ್ಲು ಶಾ.ಸಂ. ೧೦೧, ಅದೇ, ಪು. ೪
೭. ಕನ್ನಡ ವಿಷಯ ವಿಶ್ವಕೋಶ, ೨೦೦೯, ಇತಿಹಾಸ ಮತ್ತು ಪುರಾತತ್ವ, ಪು. ೬೦೯
೮. ಶೀಲಾಕಾಂತ ಪತ್ತಾರ, ೨೦೦೮, ಪೂರ್ವೋಕ್ತ, ಪು. ೪
೯. ಅದೇ, ಪು. ೧೧
೧೦. ಕವಿಶಾಸಂ–೯, ಬಾಗಲಕೋಟ ಜಿಲ್ಲೆ, ಪಟ್ಟದಕಲ್ಲು ಶಾ.ಸಂ. ೯೮
೧೧. ಅದೇ, ಪಟ್ಟದಕಲ್ಲು, ಶಾ.ಸಂ. ೧೦೧
೧೨. ಅದೇ, ಶಾ.ಸಂ. ೧೦೧
೧೩. ಶೀಲಾಕಾಂತ ಪತ್ತಾರ, ೨೦೦೮, ಪೂರ್ವೋಕ್ತ, ಪು. ೨
೧೪. ಅದೇ, ಪು. ೯೭
೧೫. ಅದೇ, ಪು. ೩
೧೬. ಅದೇ, ಪು. ೭
೧೭. ಅದೇ, ಪು. ೮
೧೮. ಅದೇ, ಪು. ೮
೧೯. ಅದೇ, ಪು. ೮
೨೦. ಅದೇ, ಪು. ೮–೯
೨೧. ಅದೇ, ಪು. ೯
೨೨. ಅದೇ, ಪು. ೯
೨೩. ಅದೇ, ಪು. ೯
೨೪. ಅದೇ, ಪು. ೧೦
೨೫. ಅದೇ, ಪು. ೧೧
೨೬. ಕನ್ನಡ ವಿಷಯ ವಿಶ್ವಕೋಶ, ೨೦೦೯, ಇತಿಹಾಸ ಮತ್ತು ಪುರಾತತ್ವ, ಪು. ೪೩೩
೨೭. ಅದೇ, ಪು. ೪೩೩
೨೮. ಶೀಲಾಕಾಂತ ಪತ್ತಾರ, ೨೦೦೮, ಪೂರ್ವೋಕ್ತ, ಪು. ೧೮

೨೯. ರಮೇಶ ಹೆಚ್., ೨೦೧೮, ಬಹುಶಿಸ್ತೀಯ ಸಾಂಸ್ಕೃತಿಕ ಸಂಕಥನ, ಲೇ, ಪೂಜಾ ಎಸ್.ಪಿ., ಲೇ, ಪಟ್ಟದಕಲ್ಲು ಸ್ಮಾರಕ ಸಮೂಹಗಳು, ಪು. ೧೯

೩೦. ಕವಿಶಾಸಂ–೯, ಪೂರ್ವೋಕ್ತ, ಶಾ.ಸಂ. ೧೦೦

೩೧. ಶೀಲಾಕಾಂತ ಪತ್ತಾರ, ೨೦೦೮, ಪೂರ್ವೋಕ್ತ, ಪು. ೨೮

೩೨. ಅದೇ, ಪು. ೨೮

೩೩. ಅದೇ, ಪು. ೫೪–೫೫

೩೪. ಅದೇ, ಪು. ೫೯

೩೫. ಅದೇ, ಪು. ೧೯

೩೬. ಅದೇ, ಪು. ೧೯

೩೭. ಅದೇ, ಪು. ೨೦

೩೮. ಅದೇ, ಪು. ೨೦

೩೯. ಅದೇ, ಪು. ೨೧

೪೦. ಅದೇ, ಪು. ೮೧

೪೧. ಅದೇ, ಪು. ೮೯

೪೨. ಅದೇ, ಪು. ೯೪

೪೩. ಅದೇ, ಪು. ೯೬

೪೪. ಅದೇ, ಪು. ೯೬

೪೫. ಅದೇ, ಪು. ೭೬

೪೬. ಅದೇ, ಪು. ೭೮

೪೭. ಅದೇ, ಪು. ೨೪

೪೮. Vasundara Filliozat, 2016, Saiva Monuments at Pattadakal, p.319

೪೯. Ibd, p. 319

೫೦. Ibd, p. 320

೫೧. Ibd, p. 321

೫೨. Ibd, p. 321

೫೩. Ibd, p. 322

೫೪. Ibd, p. 321

೫೫. Ibd, p. 322

೫೬. Ibd, p. 326

೫೭. ರಮೇಶ ಹೆಚ್., ೨೦೧೮, ಪೂರ್ವೋಕ್ತ, ಪು. ೨೨

೫೮. ಶಿವರುದ್ರಸ್ವಾಮಿ ಎಸ್.ಎನ್., ೨೦೦೫, ಭಾರತೀಯ ಪ್ರವಾಸೋದ್ಯಮ, ಪು. ೧೦೨

೫೯. ಅದೇ, ಪು. ೧೦೪

೬೦. ರಮೇಶ ಹೆಚ್., ೨೦೧೮, ಪೂರ್ವೋಕ್ತ, ಪು. ೨೨

೬೧. ನಾಗರಾಜ್ ಎಂ.ಜಿ., ಕೃಷ್ಣಮೂರ್ತಿ ಪಿ.ವಿ., (ಸಂ.), ೨೦೦೧, ಇತಿಹಾಸ ದರ್ಶನ, ಸಂ–೧೬ ಲೇ, ಜೋಷಿ ಎಸ್.ಕೆ., ಲೇ, ಕರ್ನಾಟಕದ ವಿಶ್ವಪಾರಂಪರಿಕ ತಾಣಗಳು, ಪು. ೧೫೦

೬೨. ಅದೇ, ಪು. ೧೫೦

೬೩. ಅದೇ, ಪು. ೧೫೦

೬೪. ರಮೇಶ ಹೆಚ್., ೨೦೧೮, ಪೂರ್ವೋಕ್ತ, ಪು. ೨೨

೬೫. ದಿನಪತ್ರಿಕೆ, ಹೊಸ ದಿಗಂತ, ದಿನಾಂಕ : ೨೯–೦೬–೨೦೧೯

೬೬. ಅದೇ, ಪತ್ರಿಕೆ

೬೭. ಕರ್ನಾಟಕ ಪ್ರವಾಸೋದ್ಯಮ ಇಲಾಖೆ, ಬಾಗಲಕೋಟೆ

## ಅಧ್ಯಾಯ – ಐದು

# ಸಂಭಾವ್ಯ ತಾಣಗಳ ಕುರಿತು ವಿವೇಚನೆ

### ಉತ್ತರಕರ್ನಾಟಕದ ಪ್ರಮುಖ ತಾಣಗಳು :
### ಐಹೊಳೆ, ಬಾದಾಮಿ, ಬಿಜಾಪುರ

### ದಕ್ಷಿಣಕರ್ನಾಟಕದ ಪ್ರಮುಖ ತಾಣಗಳು :
### ಬೇಲೂರು–ಹಳೇಬೀಡು, ಸೋಮನಾಥಪುರ, ಶ್ರವಣಬೆಳಗೊಳ

## ಅಧ್ಯಾಯ – ಐದು

# ಸಂಭಾವ್ಯ ತಾಣಗಳ ಕುರಿತು ವಿವೇಚನೆ

ವಿಶ್ವಪಾರಂಪರಿಕ ತಾಣಗಳ ಪಟ್ಟಿಯಲ್ಲಿ ಕರ್ನಾಟಕದ ಹಂಪಿ ಮತ್ತು ಪಟ್ಟದಕಲ್ಲು ಸ್ಥಳಗಳು ಸೇರಿದೆಯೆಂದು ಈಗಾಗಲೆ ತಿಳಿದುಕೊಂಡಿದ್ದೇವೆ. ಕರ್ನಾಟಕದಿಂದ ಇನ್ನೂ ಕೆಲವು ಸ್ಥಳಗಳು ಯುನೆಸ್ಕೋಗೆ ನಾಮ ನಿರ್ದೇಶನಗೊಂಡಿವೆ. ಅವುಗಳು ಕರ್ನಾಟಕದ ಉತ್ತರದ ಬಯಲುಸೀಮೆ ಹಾಗೂ ಈ ದಕ್ಷಿಣದ ಅರೆಮಲೆನಾಡು ಸೀಮೆಯಲ್ಲಿ ಕೇಂದ್ರಿಕೃತವಾಗಿರುವುವು. ಇವುಗಳು ಕೂಡಾ ಇತಿಹಾಸ ಕಾಲದಲ್ಲಿ ರಾಜಧಾನಿ ಕೇಂದ್ರಗಳು ಹಾಗೂ ಪ್ರಮುಖ ಪಟ್ಟಣಗಳಾಗಿದ್ದವು. ಪ್ರಸ್ತುತವಾಗಿ ಈ ಪ್ರದೇಶಗಳು ಕೂಡಾ ಕರ್ನಾಟಕದ ಐತಿಹಾಸಿಕ ಶಿಲ್ಪಕಲಾ ಕೇಂದ್ರಗಳಾಗಿ ಪ್ರಸಿದ್ಧಿ ಪಡೆದಿರುವುದನ್ನು ಗಮನಿಸಬಹುದು. ಇವುಗಳ ಕಲಾ ವೈಶಿಷ್ಟ್ಯ ವಾಸ್ತುಮಾದರಿಯನ್ನು ಮುಂದಿನ ಪೀಳಿಗೆಗೆ ಸಂರಕ್ಷಿಸಿಡಬೇಕಾದ ಜವಾಬ್ದಾರಿಯುತ ಕಾರ್ಯವನ್ನು ಯುನೆಸ್ಕೊ ತೆಗೆದುಕೊಳ್ಳುವುದರಿಂದ ಕರ್ನಾಟಕದ ಉತ್ತರ ಹಾಗೂ ದಕ್ಷಿಣ ಸೀಮೆಯ ಪ್ರಮುಖ ತಾಣಗಳು ನಾಮನಿರ್ದೇಶನಗೊಂಡಿವೆ. ಉತ್ತರ ಕರ್ನಾಟಕ ಪ್ರದೇಶದಲ್ಲಿರುವ ಪ್ರಮುಖ ತಾಣಗಳಾದ ಐಹೊಳೆ, ಬಾದಾಮಿ ಮತ್ತು ವಿಜಯಪುರ ಹಾಗೂ ದಕ್ಷಿಣ ಕರ್ನಾಟಕ ಪ್ರದೇಶದಲ್ಲಿರುವ ಪ್ರಮುಖ ತಾಣಗಳಾದ ಬೇಲೂರು–ಹಳೇಬೀಡು, ಸೋಮನಾಥಪುರ ಮತ್ತು ಶ್ರವಣಬೆಳಗೊಳ ಈ ಐತಿಹಾಸಿಕ ತಾಣಗಳನ್ನು ಅಲ್ಲಿನ ಶೈವ, ವೈಷ್ಣವ, ಜೈನ, ಇಂಡೋ–ಇಸ್ಲಾಮಿಕ್ ಕಲಾ ಸಂಪತ್ತಿನ ಉಳಿವಿಗಾಗಿ ಮತ್ತು ಬೆಳವಣಿಗೆಗಾಗಿ ವಿಶ್ವಪಾರಂಪರಿಕ ಪಟ್ಟಿಗೆ ಸೇರಿಸಲು ನಿರ್ಧರಿಸಿ ಹೆಸರು ಸೂಚಿಸಲಾಗಿದೆ.

ಯಾವುದೇ ತಾಣವು ವಿಶ್ವಪರಂಪರೆ ಪಟ್ಟಿಗೆ ಸೇರಿದರೆ ಅದರ ಅಭಿವೃದ್ಧಿ ಹಾಗೂ ಸಂರಕ್ಷಣೆಗೆ ಅವಶ್ಯವಿರುವ ಎಲ್ಲಾ ಕ್ರಮಗಳನ್ನು ಕಡ್ಡಾಯವಾಗಿ ತೆಗೆದುಕೊಳ್ಳಬೇಕು. ಇದಕ್ಕೆ ಅವಶ್ಯವಿರುವ ತಾಂತ್ರಿಕ ತರಬೇತಿ ಹಾಗೂ ನಿರ್ವಹಣೆಯನ್ನು ಸಮರ್ಪಕವಾಗಿ ನಿರ್ವಹಿಸಬೇಕು. ಇದಕ್ಕೆ ಬೇಕಾದ ಎಲ್ಲಾ ಮಾಹಿತಿಗಳು ವಿಶ್ವಪರಂಪರೆ ಸಮಿತಿಯ ಕೇಂದ್ರದಲ್ಲಿ ಲಭ್ಯವಿರುತ್ತವೆ. ಈ ಎಲ್ಲ ಮಾಹಿತಿಗಳನ್ನು ಉಚಿತವಾಗಿ ಪಡೆದು ತಮ್ಮ ತಾಣದ ರಕ್ಷಣೆಗೆ ಹಾಗೂ ಸಂರಕ್ಷಣೆಗೆ ಬಳಸಬಹುದು. ಆದರೆ ಇವುಗಳನ್ನು ಉಪಯೋಗಿಸಿ ಹಣ ಮಾಡುವಂತಿಲ್ಲ. ಪ್ರತಿ ರಾಜ್ಯ ಸರಕಾರವು ತಮ್ಮ ದೇಶದಲ್ಲಿರುವ ಎಲ್ಲಾ ಪಾರಂಪರಿಕ ತಾಣದ ಬಗ್ಗೆ ನಿರ್ದಿಷ್ಟ ಅವಧಿಯಲ್ಲಿ ವಿಶ್ವಪರಂಪರೆ ಸಮಿತಿಗೆ ವರದಿಕೊಡಬೇಕು. ಈ ವರದಿಯಲ್ಲಿ ಕೆಲವು ಮಾಹಿತಿಗಳು ಇರಬೇಕು.[೧] ವಿಶ್ವಪರಂಪರೆ ತಾಣದ ಹೆಸರು ಹಾಗೂ ಅದರ ನಾಲ್ಕೂ

ದಿಕ್ಕಿನ ಗಡಿಗಳ ವಿವರಬೇಕು. ಆ ಸ್ಥಳ ಯಾವ ರೀತಿ ಪರಂಪರೆಗೆ ಒಳಪಟ್ಟಿದೆ ಅಂದರೆ ಸಾಂಸ್ಕೃತಿಕ, ಪ್ರಾಕೃತಿಕ ಅಥವಾ ಮಿಶ್ರ, ಸದ್ಯ ಇರುವ ಪರಿಸ್ಥಿತಿ, ಅದರ ರಕ್ಷಣೆಗೆ ಕೈಗೊಂಡ ಕ್ರಮಗಳು, ಅದರ ಸಂರಕ್ಷಣೆಗೆ ಪ್ರಾದೇಶಿಕ ವಾಸಿಗಳ ಸಹಭಾಗಿತ್ವ ಹಾಗೂ ಅವರಲ್ಲಿ ಜಾಗೃತಿ ಮೂಡಿಸಲು ತೆಗೆದುಕೊಂಡ ಕ್ರಮದ ವಿವರಗಳಿರಬೇಕು.

ಈ ರೀತಿ ನಾಮ ನಿರ್ದೇಶನಗೊಂಡ ವಿಶ್ವಪಾರಂಪರಿಕ ಸ್ಥಳಗಳು ಹಾಗೂ ಬಯಲು ಸೀಮೆಯಲ್ಲಿರುವ ಸಂಭಾವ್ಯ ತಾಣಗಳನ್ನು ಅವುಗಳ ಕುರಿತ ವಿವರಗಳು ರಾಜಕೀಯ ಇತಿಹಾಸ ಮತ್ತು ಅಲ್ಲಿನ ಪ್ರಮುಖ ಸ್ಮಾರಕಗಳ ಕಲಾ ವೈಭವವನ್ನು ವಿವರಿಸಲಾಗಿದೆ.

**ಐಹೊಳೆ :**

ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲ್ಲೂಕಿನಲ್ಲಿರುವ ಐಹೊಳೆಯು ಬಾದಾಮಿ ಚಾಲುಕ್ಯರ ಕಾಲದ ದೇವಾಲಯ ಸಮೂಹಗಳಿಂದ ಪ್ರಾಚೀನ ವಾಸ್ತುಶಿಲ್ಪ ಕಲಾಕೇಂದ್ರವೆಂದು ಪ್ರಪಂಚ ಪ್ರಸಿದ್ಧವಾಗಿರುವ ಪ್ರವಾಸಿ ಕೇಂದ್ರವಾಗಿದೆ. ಐಹೊಳೆಯು ಹುನಗುಂದದಿಂದ ೨೬ ಕಿ.ಮೀ. ಕ್ರಮಿಸಿದರೆ ಪಶ್ಚಿಮಕ್ಕೆ ಮಲಪ್ರಭಾ ನದಿಯ ಬಲದಂಡೆಯ ಮೇಲಿದೆ. ಬಾಗಲಕೋಟೆಯಿಂದ ಅಮೀನಗಡದ ಮೂಲಕ ಸು. ೫೦ ಕಿ.ಮೀ ಅಥವಾ ಬಾದಾಮಿಯಿಂದ ಪಟ್ಟದಕಲ್ಲಿನ ಮೂಲಕ ಸು. ೩೦ ಕಿ.ಮೀ ಐಹೊಳೆಯನ್ನು ತಲುಪಲು ರಸ್ತೆ ಸಾರಿಗೆಯ ಸೌಕರ್ಯವಿದೆ. ಇಲ್ಲೊಂದು ಪ್ರವಾಸಿ ಮಂದಿರ, ಕೇಂದ್ರ ಪುರಾತತ್ವ ಇಲಾಖೆಯ ಒಂದು ಕಾರ್ಯಾಲಯ ಹಾಗೂ ವಸ್ತುಸಂಗ್ರಹಾಲಯವಿದೆ.[೨] ವಿಶ್ವಪಾರಂಪರಿಕ ಸ್ಥಳಗಳ ಪಟ್ಟಿಗೆ ಸೇರಿಸಲು ೨೦೧೫ರಲ್ಲಿ ಐಹೊಳೆಯ ಹೆಸರನ್ನು ನಾಮನಿರ್ದೇಶನ ಮಾಡಲಾಗಿದೆ. ಐಹೊಳೆಯು ೧೬.೦೧° ಉತ್ತರ ಅಕ್ಷಾಂಶ ಮತ್ತು ೭೫.೮೮° ಪೂರ್ವ ರೇಖಾಂಶದಲ್ಲಿದೆ.[೩]

ಐಹೊಳೆಯು ಬಾದಾಮಿ ಚಾಲುಕ್ಯರ ಪ್ರಮುಖ ನಗರ ಕೇಂದ್ರವಾಗಿದ್ದು ಈ ಸ್ಥಳದ ದೇವಾಲಯಗಳು ಹಾಗೂ ದೇವಾಲಯದ ಶಿಲ್ಪಗಳು ಅತಿ ಹೆಚ್ಚು ಪ್ರಾಚೀನವಾದವುಗಳಾಗಿವೆ. ಇದು ಚಾಲುಕ್ಯರ ಕಾಲದಲ್ಲಿ ವಿದ್ಯಾಕೇಂದ್ರವಾಗಿತ್ತು. ಐಹೊಳೆಯ ಹೆಸರು ಶಾಸನಗಳಲ್ಲಿ ಆರ್ಯಪುರ ಎಂದು ಉಲ್ಲೇಖಿಸಲ್ಪಟ್ಟಿದೆ.[೪] ಆರ್ಯಪುರವಾಗಿದ್ದ ಸ್ಥಳ ಕಾಲಾನಂತರದ ಆಡುಭಾಷೆಯಲ್ಲಿ ಐಹೊಳೆಯಾಯಿತು. ಐಹೊಳೆ ಅತ್ಯಂತ ಪ್ರಾಚೀನ ಗ್ರಾಮವಾಗಿದ್ದು, ಐಹೊಳೆ ಭಾರತೀಯ ಇತಿಹಾಸದಲ್ಲಿ ತುಂಬ ಮಹತ್ತರವಾದ ಸ್ಥಾನವನ್ನು ಪಡೆದಿದೆ. ಇದನ್ನು ದೇವಾಲಯಗಳ ವಾಸ್ತು ನಿರ್ಮಾಣದ ತೊಟ್ಟಿಲು ಎಂದು ಕರೆಯುತ್ತಾರೆ.[೫] ೬ ರಿಂದ ೮ ನೇ ಶತಮಾನದವರೆಗೆ ಗುಹಾಲಯ ಹಾಗೂ ದೇವಾಲಯಗಳ ನಿರ್ಮಾಣದಲ್ಲಿ ಅನೇಕ ರೀತಿಯ

ಪ್ರಯೋಗಗಳು ನಡೆದದ್ದನ್ನು ಕಾಣುತ್ತೇವೆ. ಶಾಸನದಲ್ಲಿ ಈ ಸ್ಥಳವನ್ನು ಅಯ್ಯಾವೊಳೆ-ಆಯಿವೊಳೆ-ಐಯಾವೊಳಿ-ಆರ್ಯಪುರ ಮುಂತಾಗಿ ಉಲ್ಲೇಖಿಸಲಾಗಿದ್ದು, ಬರಬರುತ್ತಾ ಐಹೊಳೆ ಆಗಿರುವ ಸಾಧ್ಯತೆ ಇದೆ. ಇದಲ್ಲದೇ ಐನೂರು ಪಂಡಿತರು ಇದ್ದುದರಿಂದ ಐಹೊಳೆ ಎಂದಾಯ್ತೆಂತಲೂ, ಪರುಶುರಾಮನು ಕ್ಷತ್ರಿಯರನ್ನು ನಿರ್ನಾಮ ಮಾಡಿ ರಕ್ತ ಸಿಕ್ತ ಪರಶುವನ್ನು ಇಲ್ಲಿನ ಹೊಳೆಯೊಂದರಲ್ಲಿ ತೊಳೆದಾಗ ಇಡೀ ನದಿ ನೀರೆ ಕೆಂಪಾಯ್ತಂತೆ. ಇದನ್ನು ಕಂಡು ಊರಿನ ಮಹಿಳೆಯರು 'ಅಯ್ಯಯ್ಯೋ ಹೊಳಿ' ಎಂದು ಉದ್ಗರಿಸಿದ್ದೇ ಮುಂದೆ ಇದು ಐಹೊಳೆಯಾಯ್ತೆಂಬ ಪೌರಾಣಿಕ ಐತಿಹ್ಯಗಳೂ ಈ ಊರಿನ ಹೆಸರಿನೊಂದಿಗೆ ತಳಕು ಹಾಕಿಕೊಂಡಿವೆ.

ಐಹೊಳೆಯ ರಾಚಿಗುಡಿಯ ಬಳಿ ಮಲಪ್ರಭಾ ನದಿ ಪಾತ್ರದಲ್ಲಿ ಆದಿ ಹಳೆಶಿಲಾಯುಗದ ಕೊಡಲಿ, ಬಾಚಿ ಮುಂತಾದ ಉಪಕರಣಗಳು ದೊರೆತಿವೆ. ಇಲ್ಲಿಯ ಒಂದು ಸಮತಟ್ಟಾದ ಗುಡ್ಡದ ಮೇಲಿರುವ ಸ್ಥಳೀಯವಾಗಿ ಮೇಗುತಿಯೆಂದು ಕರೆಯಲಾದ ಚಾಲುಕ್ಯ ಅರಸನ ಮನೆತನದ ಎರಡನೆಯ ಪುಲಿಕೇಶಿಯ ಆಸ್ಥಾನ ಜೈನ ಕವಿ ರವಿಕೀರ್ತಿ ಕಟ್ಟಿಸಿದ ಜಿನಾಲಯದ ಬಲಬದಿಯ ಸಮತಟ್ಟಿನಲ್ಲಿ ಆದಿ ಕಬ್ಬಿಣಯುಗದ ನಾನಾ ರೀತಿಯಲ್ಲಿ ಹಾಳು ಬಿದ್ದಿರುವ ಸು.೩೦ ಕಂಡಿ ಕೋಣೆಗೋರಿಗಳಿವೆ. ಹಾಗೆಯೇ ಮುಂದುವರೆದು ಗುಡ್ಡದಂಚಿನ ಬಯಲಿನಲ್ಲಿ ಹಲವಾರು ದಾದಿ ಕೋಣೆಗೋರಿಗಳಿವೆ. ಹೀಗೆ ಎರಡು ಪ್ರಮುಖ ಮಾದರಿಗಳ ಬೃಹತ್ ಶಿಲಾಗೋರಿಗಳಿರುವ ಅಪರೂಪದ ನೆಲೆಗಳು ಇಲ್ಲಿವೆ.[೬] ಈ ಗುಡ್ಡದ ಉತ್ತರದಂಚಿನಲ್ಲಿರುವ ೨ ಕಲ್ಲಾಸರೆಗಳಲ್ಲಿ ಅಲ್ಪ ಪ್ರಮಾಣದಲ್ಲಿ ಉಳಿದಿರುವ ಮೈಮೇಲೆ ರೇಖಾವಿನ್ಯಾಸವುಳ್ಳ ಕಂದು ಪ್ರಾಣಿಯ ಕಾವಿ ಬಣ್ಣದ ಚಿತ್ರ, ಸ್ವಲ್ಪ ಮುಂದಕ್ಕೆ ಎರಡನೆಯದರಲ್ಲಿ ಬಿಳಿವರ್ಣದ ರೇಖಾಚಿತ್ರಗಳು ಕಂಡುಬಂದಿವೆ. ಕೆಳಗೆ ಬಯಲು ಪ್ರದೇಶದಲ್ಲಿ ಇತಿಹಾಸ ಕಾಲದ ಜನ ವಾಸ್ತವ್ಯದ ಮಡಿಕೆ ಚೂರುಗಳೂ ದೊರೆಯುತ್ತವೆ. ಊರೊಳಗೆ ಲಾಡ್‌ಖಾನ್ ಗುಡಿಯ ಸುತ್ತಮುತ್ತಲ ಪ್ರದೇಶದ ಹಾಳು ಮಣ್ಣಿನಲ್ಲೂ ಶಾತವಾಹನರ ಕಾಲದ ಒಂದು ನಾಣ್ಯ ಸಿಕ್ಕಿದೆ.[೭] ಇಲ್ಲಿ ಉಸುಗು ಕಲ್ಲಿನಿಂದ ಮತ್ತು ಕತ್ತರಿಸಿದ ಬಂಡೆಗಳನ್ನು ಗಾರೆ, ಮಣ್ಣಿನ ನೆರವಿಲ್ಲದೆ ಒಂದರ ಮೇಲೊಂದು ಇಟ್ಟು ನಿರ್ಮಿಸಿದ ಕೋಟೆಯಿದೆ. ಇದನ್ನು ಸುಮಾರು ಕ್ರಿ.ಶ. ೬ನೇ ಶತಮಾನದಲ್ಲಿ ನಿರ್ಮಿಸಿರಬಹುದು ಎಂದು ಹೇಳಲಾಗಿದ್ದು, ಕರ್ನಾಟಕದಲ್ಲಿ ಉಳಿದಿರುವ ಶಿಲಾಕೋಟೆಗಳ ಪೈಕಿ ಇದು ಅತ್ಯಂತ ಪ್ರಾಚೀನವಾದದ್ದಾಗಿದೆ. ಕೋಟೆಯ ಸುತ್ತ

ಕಂದಕ ಇರುವುದನ್ನು ಈಗಲೂ ಗುರುತಿಸಬಹುದಾಗಿದ್ದು, ಕೋಟೆಯ ಅವಶೇಷಗಳನ್ನು ಕೂಡಾ ಕಾಣುತ್ತೇವೆ.

**ರಾಜಕೀಯ ಇತಿಹಾಸ :**

೬ನೇ ಶತಮಾನದಲ್ಲಿ ಬಾದಾಮಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡ ಬಾದಾಮಿ ಚಾಲುಕ್ಯರು ಸು. ಎರಡು ಶತಮಾನಗಳ ಕಾಲ ರಾಜ್ಯವಾಳಿದರು. ಭಾರತದ ನಾನಾ ಪ್ರಾಂತ್ಯಗಳಲ್ಲಿ ಆಳಿದ ಚಾಲುಕ್ಯ ವಂಶಗಳಲ್ಲಿ ಬಾದಾಮಿ ಶಾಖೆಯೇ ಪ್ರಾಚೀನವಾದ್ದದು.[೮] ಬಾದಾಮಿ ಚಾಲುಕ್ಯರನ್ನು ಹಾರೀತಿಪುತ್ರರು, ಮಾನವ್ಯಗೋತ್ರಕ್ಕೆ ಸೇರಿದವರು, ಸಪ್ತಮಾತೃಕೆಯರಿಂದ ಪೋಷಿತರು ಹಾಗೂ ಕಾರ್ತಿಕೇಯನ ಆರಾಧಕರು, ನಾರಾಯಣ ಅನುಗ್ರಹಿಸಿದ ವರಾಹ ಲಾಂಛವನ್ನು ಹೊಂದಿದವರು ಎಂದು ಇವರ ಶಾಸನಗಳೂ ವರ್ಣಿಸುತ್ತವೆ. ೬-೭ನೆಯ ಶತಮಾನಗಳ ಹೊತ್ತಿಗೆ ಬಹುಶಃ ಬಾದಾಮಿಯ ಚಾಲುಕ್ಯರ ಆಳ್ವಿಕೆ ಪ್ರಾರಂಭವಾದ ಸಂದರ್ಭದಲ್ಲಿ ಐಹೊಳೆ ದೊಡ್ಡಪಟ್ಟಣವಾಗಿ ಬೆಳೆಯಲಾರಂಭಿಸಿತು. ೭-೮ನೆಯ ಶತಮಾನಗಳವರೆಗೆ ಈ ಪಟ್ಟಣದ ವೈಭವದ ಕಾಲ ಜಗದ್ ಪ್ರಸಿದ್ಧಿಯನ್ನು ಪಡೆದಿತ್ತು. ಬಹುಪಾಲು ದೇವಾಲಯಗಳು ಹುಟ್ಟಿಕೊಂಡದ್ದು ಈ ಕಾಲದಲ್ಲಿಯೇ. ಇಲ್ಲಿಯ ಅತೀ ಪ್ರಾಚೀನ ಶಾಸನಗಳು ಸು ೬-೭ನೆಯ ಶತಮಾನದವು, ೮ನೆಯ ಶತಮಾನದಲ್ಲಿ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಂಡವು. ಚಾಲುಕ್ಯ ರಾಜ್ಯ ಕೊನೆಗೊಂಡಾಗ ಐಹೊಳೆಯ ವೈಭವವೂ ಇಳಿಮುಖವಾದಂತೆ ತೋರಿಸಿದರೂ ಮುಂದೆ ಕಲ್ಯಾಣದ ಚಾಲುಕ್ಯರ ರಾಜ್ಯವು ಅಂತ್ಯ ಕಾಣುವವರೆಗೂ ಈ ನಗರ ಸ್ವಲ್ಪ ಮಟ್ಟಿಗಾದರೂ ಚಟುವಟಿಕೆಗಳ ಕೇಂದ್ರವಾಗಿ ಮುಂದುವರೆಯಿತು.[೯] ರಾಷ್ಟ್ರಕೂಟರ ಮತ್ತು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಕೆಲವು ಶಾಸನಗಳು ಮತ್ತು ದೇವಾಲಯಗಳು ಹುಟ್ಟಿಕೊಂಡವು. ಆದರೆ ಬಾದಾಮಿಯ ಚಾಲುಕ್ಯರ ಕಾಲಕ್ಕೆ ಹೋಲಿಸಿದರೆ ಇವುಗಳ ಸಂಖ್ಯೆ ಕಡಿಮೆ. ಸ್ವರೂಪ ವೈವಿಧ್ಯದಲ್ಲಿ ಸಹ ಅವು ಸಾಮಾನ್ಯ ದರ್ಜೆಯವು. ೧೧೯೯-೨೦ರ ಕಾಲದ ಒಂದು ಶಾಸನ ಐಹೊಳೆಯಲ್ಲಿ ದೊರಕಿರುವ ಕೊನೆಯ ಶಾಸನವಾಗಿದೆ. ತದನಂತರ ಉತ್ತರ ಕರ್ನಾಟಕದಲ್ಲಿ ಉಂಟಾದ ಸಾಮಾಜಿಕ, ರಾಜಕೀಯ ಆಂದೋಲನದಿಂದಾಗಿ ಈ ಪ್ರಾಚೀನ ಪಟ್ಟಣ ತನ್ನ ಪ್ರಾಮುಖ್ಯತೆಯನ್ನು ಪೂರ್ಣವಾಗಿ ಕಳೆದುಕೊಂಡಂತೆ ತೋರುತ್ತದೆ. ಐಹೊಳೆಯ ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದಂತೆ ಸಂಪೂರ್ಣವಾಗಿ ಅಧ್ಯಾಯ ೪ರಲ್ಲಿ ವಿವರಿಸಲಾಗಿದೆ. ಐಹೊಳೆ ತನ್ನ ವೈಭವದ ಕಾಲದಲ್ಲಿ ವಿದ್ವಾಂಸರಿಂದ ತುಂಬಿದ್ದ ಗ್ರಾಮವಾಗಿತ್ತು. ಪ್ರಾಯಶಃ ಇದೊಂದು

ಅಗ್ರಹಾರ. ೮ ರಿಂದ ೧೭ನೆಯ ಶತಮಾನದವರೆಗೆ ದಕ್ಷಿಣ ಭಾರತದಾದ್ಯಂತ ಪ್ರಸಿದ್ಧವಾಗಿದ್ದ ವರ್ತಕ ಸಂಘವೊಂದು ಅಯ್ಯವೊಳೆ ಐನೂರ್ವರು ಎಂಬ ಹೆಸರಿನಿಂದ ಮೆರೆಯುತ್ತಿತ್ತು.

**ಸಂರಕ್ಷಿತ ಸ್ಮಾರಕಗಳು :**

ಐಹೊಳೆಯಲ್ಲಿ ಸು. ೧೨೫ ದೇವಾಲಯಗಳಿವೆ. ಪುರಾತತ್ವ ಸರ್ವೇಕ್ಷಣ ಇಲಾಖೆಯವರು ಇವನ್ನು ೨೨ ಗುಂಪುಗಳಾಗಿ ವಿಂಗಡಿಸಿದ್ದಾರೆ ಅವುಗಳೆಂದರೆ.

೧. ಹುಚ್ಚಿಮಲ್ಲಿ ದೇವಾಲಯ
೨. ಚಿಕ್ಕಿ ದೇವಾಲಯ
೩. ಅಂಬಿಗೇರ ದೇವಾಲಯ
೪. ದುರ್ಗಾ ದೇವಾಲಯ
೫. ಗೌಡರ ಮತ್ತು ಲಾಡಖಾನ್ ದೇವಾಲಯ
೬. ಚಕ್ರ ಮತ್ತು ಬಡಿಗೇರ ದೇವಾಲಯ
೭. ರಾಚಿ ದೇವಾಲಯ
೮. ಏಣಿಯಾರ್ ದೇವಾಲಯ
೯. ಹುಚ್ಚಪ್ಪಯ್ಯನ ಮಠ
೧೦. ಕುಂತಿ ದೇವಾಲಯ
೧೧. ಚರಂತಿ ಮಠ
೧೨. ತ್ರ್ಯಂಬಕೇಶ್ವರ ದೇವಾಲಯ
೧೩. ಗೌರಿ ದೇವಾಲಯ
೧೪. ಜೈನ ದೇವಾಲಯ
೧೫. ಮಲ್ಲಿಕಾರ್ಜುನ ದೇವಾಲಯ
೧೬. ಗುಡ್ಡದ ಮೇಲಿನ ಜೈನ ದೇವಾಲಯ
೧೭. ಮೇಗುತಿ ಜಿನಾಲಯ
೧೮. ಜ್ಯೋತಿರ್ಲಿಂಗ ದೇವಾಲಯ
೧೯. ರಾವಳಫಡಿ ದೇವಾಲಯ
೨೦. ಸೂರ್ಯನಾರಾಯಣ ದೇವಾಲಯ
೨೧. ಗಳಗನಾಥ ದೇವಾಲಯ
೨೨. ರಾಮಲಿಂಗ ದೇವಾಲಯ

ಈ ದೇವಾಲಯ ಸಮೂಹಗಳು ಐಹೊಳೆ ಗ್ರಾಮದಲ್ಲಿರುವ ಕೋಟೆಯ ಆವರಣದ ಒಳಗೆ ಹಾಗೂ ಅದರ ಸುತ್ತಮುತ್ತಲ ಪ್ರದೇಶಗಳಲ್ಲಿ ಹರಡಿಕೊಂಡಿವೆ. ಈ ಮುಂದೆ ಕೆಲವು ಮುಖ್ಯ ದೇವಾಲಯಗಳನ್ನು ವಿವರಿಸಲಾಗಿದೆ.

ಹುಚ್ಚಿಮಲ್ಲಿ ದೇವಾಲಯ ಗ್ರಾಮದ ಉತ್ತರಕ್ಕೆ ಪ್ರವಾಸಿ ಮಂದಿರದ ಹಿಂಭಾಗದಲ್ಲಿರುವ ಒಂದು ಸುಂದರ ದೇವಾಲಯ. ಪಶ್ಚಿಮಾಭಿಮುಖವಾಗಿರುವ ಈ ದೇವಾಲಯವು ಗರ್ಭಗುಡಿ, ಸಣ್ಣದಾದ ಸಭಾಮಂಟಪ ಮತ್ತು ಮುಖಮಂಟಪದಿಂದ ಕೂಡಿದ್ದು, ಎತ್ತರವಾದ ಅಧಿಷ್ಠಾನದ ಮೇಲಿದೆ. ಗರ್ಭಗುಡಿಯಲ್ಲಿ ಮೂಲ ಶಿವಲಿಂಗವಿದೆ. ಸಭಾಮಂಟಪದಲ್ಲಿ ಇಂದ್ರ, ಯಮ, ಕುಬೇರ ಮತ್ತು ಬ್ರಹ್ಮ ಹಾಗೂ ಕಮಲಗಳ ಶಿಲ್ಪಗಳಿವೆ.[೧೦] ಗರ್ಭಗುಡಿಯ ಮೇಲೆ ಔತ್ತರೆಯ ಮಾದರಿಯ ರೇಖಾನಾಗರ ಶಿಖರವಿದೆ. ಹುಚ್ಚಿಮಲ್ಲಿ ಎಂಬುದು ಈಚೆಗೆ ಬಂದ ಹೆಸರು. ಇದು ಮೂಲತಃ ಕಾರ್ತಿಕೇಯ ದೇವಾಲಯವೆಂದು ಅ. ಸುಂದರ ಅವರು ಅಭಿಪ್ರಾಯ ಪಡುತ್ತಾರೆ. ಚಿಕ್ಕಿ ಗುಡಿಗಳ ಸಮೂಹವು, ಅಂಬಿಗೇರ ಗುಡಿಯಿಂದ ಸ್ವಲ್ಪ ಉತ್ತರದಲ್ಲಿ ಪ್ರವಾಸಿ ಮಂದಿರಕ್ಕೆ ಹೋಗುವ ಮಾರ್ಗದ ಎಡಗಡೆ ಇರುವುದೇ ಚಿಕ್ಕಿ ಗುಡಿಗಳ ಸಮೂಹ. ಈ ಸಮೂಹದಲ್ಲಿ ದೊಡ್ಡದಾದ ಚಿಕ್ಕಿಗುಡಿಯಲ್ಲಿ ಮುಖಮಂಟಪ, ಮಂಟಪ ಮತ್ತು ಗರ್ಭಗುಡಿ ಇದ್ದು ಇದರ ಸುತ್ತಲೂ ಪ್ರದಕ್ಷಿಣಾಪಥವಿದೆ. ಈ ದೇವಾಲಯವು ಸು. ೭ನೆಯ ಶತಮಾನದ್ದೆಂದು ಊಹಿಸಲಾಗಿದೆ. ಇದರ ಬಲಭಾಗಕ್ಕೆ ಇರುವ ಇನ್ನೊಂದು ಗುಡಿಯಲ್ಲಿ ಗರ್ಭಗುಡಿ, ಸುಖನಾಸಿ ಮತ್ತು ಮಂಟಪ ಇದ್ದವು. ಈಗ ಮಂಟಪ ಬಿದ್ದಿದೆ. ಸುಖನಾಸಿಯಲ್ಲಿ ಶೈವದ್ವಾರ ಪಾಲಕ ವಿಗ್ರಹಗಳಿವೆ. ಗರ್ಭಗೃಹದಲ್ಲಿ ಮೂಲ ವಿಗ್ರಹವಿಲ್ಲ. ಇದು ಸು. ೧೦ ನೇ ಶತಮಾನದ ಕಟ್ಟಡವಾಗಿದೆ.[೧೧]

ಲಾಡ್‌ಖಾನ್ ಗುಡಿಯ ಸಮೀಪದಲ್ಲಿ ಗೌಡರ ಗುಡಿ ಇದೆ. ಇದು ಲಾಡ್‌ಖಾನ್ ಗುಡಿಯ ರೀತಿಯಲ್ಲಿ ಮಂಟಪದಂತಿರುವ ಕಟ್ಟಡವಾಗಿದ್ದು, ಎತ್ತರವಾದ ಅಧಿಷ್ಠಾನದ ಮೇಲೆ ನಿರ್ಮಿಸಲಾಗಿದೆ.[೧೨] ಹೊರಗೋಡೆಯಲ್ಲಿ ೧೬ ಕಂಬಗಳಿದ್ದು, ಅವುಗಳ ನಡುವೆ ಕಲ್ಲುಚಪ್ಪಡಿಯನ್ನು ಗೋಡೆಯಾಗಿ ಜೋಡಿಸಲಾಗಿದೆ. ಇದು ಭಗವತಿಯ ಗುಡಿಯಾಗಿತ್ತೆಂದು ಇಲ್ಲಿರುವ ೮ನೆಯ ಶತಮಾನದ ಶಾಸನದಿಂದ ತಿಳಿಯುತ್ತದೆ. ಉತ್ತರದ ರಸ್ತೆಯಿಂದ ಕೋಟೆಯನ್ನು ಪ್ರವೇಶಿಸುತ್ತಿದ್ದಂತೆಯೇ ಪ್ರಸಿದ್ಧವಾದ ದುರ್ಗಾ ದೇವಾಲಯ ಕಂಡುಬರುತ್ತದೆ. ಇದು ದುರ್ಗಾ ದೇವತೆಗೆ ಮೀಸಲಾದ ದೇವಾಲಯವಾಗಿರದೆ, ಸುತ್ತಲೂ ದುರ್ಗದ ರೀತಿಯ ಕಟ್ಟಡವೊಂದರ ಮಧ್ಯ ಇದ್ದುದರಿಂದ ಈ ಹೆಸರು ರೂಢಿಗತವಾದಂತೆ ಕಾಣುತ್ತದೆ. ಈ

ದೇವಾಲಯ ಸು. ೬-೭ನೆಯ ಶತಮಾನದ ಕಟ್ಟಡವಾಗಿದ್ದು, ಇದರ ತಳವಿನ್ಯಾಸ ಗಜಪೃಷ್ಠಾಕಾರವಾಗಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಮುಖಮಂಟಪವನ್ನು ಹೊಂದಿದೆ. ಗರ್ಭಗುಡಿಯ ಮೇಲೆ ಚತುರಸ್ರಾಕಾರದ ಚಿಕ್ಕದಾದ ರೇಖಾನಾಗರ ಶಿಖರವಿದೆ.[೧೩] ಕಂಬಗಳು ಚತುರಸ್ರಾಕಾರದವು. ಹಜಾರದ ಹೊರಭಿತ್ತಿಯ ಮೇಲೆ ಸುತ್ತಲೂ ದೇವಕೋಷ್ಠಗಳಿದ್ದು, ಒಂದೊಂದು ಕೋಷ್ಠದಲ್ಲೂ ವೃಷಭವಾಹನ, ಶಿವ, ಮಹಿಷಮರ್ದಿನಿ, ವಿಷ್ಣು, ನರಸಿಂಹ, ವರಾಹ ಮುಂತಾದ ದೇವಮೂರ್ತಿಗಳಿವೆ. ದುರ್ಗಾ ದೇವಾಲಯ ಅದರ ವಿನ್ಯಾಸದಿಂದ ಹಾಗೂ ಭಾವಪೂರ್ಣ ಶಿಲ್ಪಗಳಿಂದ ಕೂಡಿದ್ದು ಐಹೊಳೆಯ ಅತೀ ವೈಶಿಷ್ಟ್ಯಪೂರ್ಣ ವಾಸ್ತು ಕಲಾಕೃತಿಯ ಕೇಂದ್ರವಾಗಿದೆ.

ಐಹೊಳೆಯಲ್ಲಿರುವ ದುರ್ಗಾ ಗುಡಿಯ ದಕ್ಷಿಣಕ್ಕೆ ಸ್ಥಳೀಯವಾಗಿ ಲಾಡಖಾನ್ ಎಂದು ಕರೆಯಲಾದ ದೇವಾಲಯವು ಇಲ್ಲಿನ ಗುಡಿಯ ಸಮೂಹದಲ್ಲಿದೆ. ಈ ಸಮೂಹದ ಹಲವು ದೇವಾಲಯಗಳಲ್ಲಿ ಲಾಡ್‌ಖಾನ್ ಗುಡಿಯೇ ಬಹುಮುಖ್ಯವಾದುದು. ಲಾಡ್‌ಖಾನ್ ಎಂಬುವನು ಈ ಗುಡಿಯಲ್ಲಿ ವಾಸಿಸುತ್ತಿದ್ದರಿಂದ ಈ ಹೆಸರು ಬಂದಿದೆ ಎಂದು ಹೇಳಲಾಗುತ್ತದೆ. ಇದರಲ್ಲಿ ಚೌಕಾಕಾರದ ಮಂಟಪ ಮತ್ತು ಅದರ ಮುಂದೆ ಅಗಲವಾದ ಮುಖಮಂಟಪಗಳಿವೆ. ಪೂರ್ವ, ದಕ್ಷಿಣ ಮತ್ತು ಉತ್ತರ ಗೋಡೆಗಳಲ್ಲಿ ಸುಂದರವಾದ ಜಾಲಂಧ್ರಗಳಿವೆ. ಒಳ ಹಜಾರದಲ್ಲಿ ಪಶ್ಚಿಮದ ಗೋಡೆಗೆ ಸೇರಿದಂತೆ ಚಿಕ್ಕ ಆಯಾತಾಕಾರದ ಗರ್ಭಗೃಹವಿದ್ದು. ಇದರ ದ್ವಾರದ ಮೇಲೆ ಗರುಡ ವಿಗ್ರಹವೂ ಕಂಡುಬರುತ್ತದೆ. ಆದರೆ ಇದು ಶಿವಾಲಯವಾಗಿದ್ದು, ಇದರ ಗರ್ಭಗೃಹದಲ್ಲಿ ಶಿವಲಿಂಗವಿದೆ. ಮಂಟಪದ ಕಂಬಗಳಲ್ಲಿ ಉತ್ತಮವಾಗಿ ಕೆತ್ತಿರುವ ಹಲವಾರು ಉಬ್ಬುಶಿಲ್ಪಗಳಿವೆ.[೧೪] ಇವುಗಳಲ್ಲಿ ಯಮುನೆಯ ವಿಗ್ರಹ ಮತ್ತು ಕಾಮಕೇಳಿ ಪ್ರಸಂಗದಲ್ಲಿರುವ ರಸಿಕ ದಂಪತಿಗಳ ವಿಗ್ರಹಗಳು ಮನೋಹರ ಕಲಾಕೃತಿಗಳಾಗಿವೆ. ಇತರ ವಿಗ್ರಹಗಳು ಸಂಪೂರ್ಣ ಸರಳ ವಿನ್ಯಾಸ, ಸ್ಥಳೀಯ ಜನಪದ ವಾಸ್ತು ರೀತಿಯವುಗಳಾಗಿವೆ. ಇದು ಹೊಂದಿರುವ ಸಾದೃಶ್ಯ-ತಿಳಿಯಬಹುದಾದ ಸಂಗತಿ ಏನಂದರೆ ಈ ದೇವಾಲಯವು ಐಹೊಳೆಯಲ್ಲಿಯೇ ಅತೀ ಪ್ರಾಚೀನ ದೇವಾಲಯವಾಗಿ ನಿರ್ಮಾಣವಾಗಿದೆಯೆಂದು ಪರಿಭಾಪಿಸಲಾಗಿದೆ. ಕ್ರಿ.ಶ.ಸು. ೪೫೦ ರಲ್ಲಿ ಕಟ್ಟಲ್ಪಟ್ಟಿದೆ ಎಂದು ತಿಳಿಯುತ್ತದೆ.

ಜೈನಗುಡಿಗಳ ಸಮೂಹದ ಉತ್ತರಕ್ಕೆ ಗೌರಿ ಗುಡಿ ಅಥವಾ ವಿರೂಪಾಕ್ಷ ದೇವಾಲಯವಿದೆ. ಇದರ ಮಂಟಪದಲ್ಲಿ ಎರಡು ಸ್ತ್ರೀ ವಿಗ್ರಹಗಳಿದ್ದು, ಒಂದನ್ನು ಗೌರಿ ಎಂದು

ಕರೆಯುವುದರಿಂದ ಗೌರಿಗುಡಿ ಎಂಬ ಹೆಸರೂ, ಗರ್ಭಗುಡಿಯ ಲಿಂಗ ವಿರೂಪಾಕ್ಷ ಎನ್ನುವುದರಿಂದ ಆ ಹೆಸರೂ ಈ ದೇವಾಲಯಕ್ಕೆ ಬಂದಿರಬೇಕು. ಆದರೆ ಮೂಲತಃ ಇದು ವೈಷ್ಣವ ದೇವಾಲಯವೆಂಬುದು ಇಲ್ಲಿನ ಅನೇಕ ಶಿಲ್ಪಗಳಿಂದ ತಿಳಿಯುತ್ತದೆ.[೧೫] ಈ ದೇವಾಲಯದಲ್ಲಿ ವಿಶಾಲವಾದ ಮಂಟಪ, ಸುಕನಾಸಿ ಮತ್ತು ಗರ್ಭಗೃಹವಿದೆ. ದೇವಾಲಯ ದಕ್ಷಿಣಾಭಿಮುಖವಾಗಿರುವುದು ವಿಶೇಷ. ಮಂಟಪದಲ್ಲಿ ಪೂರ್ವ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಪ್ರವೇಶದ್ವಾರಗಳಿವೆ. ಈ ದೇವಾಲಯದ ರಚನೆ ಪೂರ್ಣವಾಗಿ ಕಲ್ಯಾಣಚಾಲುಕ್ಯರ ಕಾಲದ್ದು. ಇದರ ಕಾಲ ಸು. ೧೨ನೇ ಶತಮಾನ. ಕೋಟೆಯ ಹೊರಗೆ ದುರ್ಗಾ ದೇವಾಲಯದಿಂದ ಪಶ್ಚಿಮಕ್ಕೆ ಅಂಬಿಗೇರ ದೇವಾಲಯದ ಸಮೂಹವಿದೆ. ಇಲ್ಲಿ ಮೂರು ದೇವಾಲಯಗಳಿದ್ದು, ಇವುಗಳಲ್ಲಿ ದೊಡ್ಡ ಗುಡಿಯ ಮೇಲೆ ರೇಖಾನಾಗರ ಶಿಖರವಿದೆ.[೧೬] ತಳವಿನ್ಯಾಸದಲ್ಲಿ ಗರ್ಭಗುಡಿ ಮತ್ತು ಮಂಟಪಗಳಷ್ಟೇ ಇರುವ ದೇವಾಲಯ ಪೂರ್ವಾಭಿಮುಖವಾಗಿದ್ದರೂ ಮಂಟಪದ ಉತ್ತರ ಮತ್ತು ದಕ್ಷಿಣಕ್ಕೆ ಪ್ರವೇಶ ದ್ವಾರಗಳಿವೆ. ಈ ದೇವಾಲಯ ಸು. ೧೦ನೆಯ ಶತಮಾನದ್ದೆಂದು ಊಹಿಸಲಾಗಿದೆ. ಇನ್ನೆರಡು ಗುಡಿ ಸಾಧಾರಣ ರೀತಿಯವು ಎರಡನೆಯ ಗುಡಿ ೧.೨೦ಮೀ ಎತ್ತರದ ಇಟ್ಟಿಗೆ ಕಟ್ಟೆಯ ಮೇಲೆ ಇದೆ. ಗರ್ಭಗುಡಿಯಲ್ಲಿ ಭಗ್ನವಾದ ಸೂರ್ಯ ಅಥವಾ ವಿಷ್ಣುವಿನ ಮೂರ್ತಿಯಿದೆ.

ಲಾಡ್‌ಖಾನ್ ದೇವಾಲಯದಿಂದ ಈಶಾನ್ಯಕ್ಕೆ ಸ್ವಲ್ಪ ದೂರದಲ್ಲಿ ಸೂರ್ಯನಾರಾಯಣ ದೇವಾಲಯವಿದ್ದು, ಇದರಲ್ಲಿರುವ ನಾಲ್ಕು ಕಂಬಗಳು ವಿಶೇಷವಾಗಿವೆ. ಇದರ ದ್ವಾರಬಂಧದ ಮೇಲೆ ಸರ್ಪಹಿಡಿದ ಗರುಡ, ಸರ್ಪಗಳ ಬಳಿ ಗಂಗಾ, ಯಮುನಾ ಮತ್ತು ಮೇಲಿನ ಪಟ್ಟಿಯಲ್ಲಿ ದ್ವಿಬಾಹು ಕಮಲಪಾಣಿಯಾದ ಆಸೀನ ಸೂರ್ಯ ವಿಗ್ರಹ ಇದೆ. ಗರ್ಭಗೃಹದಲ್ಲಿ ನಿಂತ ಸೂರ್ಯವಿಗ್ರಹವಿದೆ. ಗರ್ಭಗುಡಿಯ ಮೇಲೆ ಎರಡು ಭೂಮಿಜಗಳ ರೇಖಾನಾಗರ ಶಿಖರವಿದೆ. ವಿಶಿಷ್ಟ ರೀತಿಯ ವಿನ್ಯಾಸವುಳ್ಳ ಈ ದೇವಾಲಯ ಚಿಕ್ಕದ್ದು ಆದರೆ ಅಲ್ಲಿನ ಕಲಾಕೃತಿ ಅತ್ಯಂತ ಸುಂದರವಾಗಿದೆ. ಇದರ ಕಾಲ ಸು. ೭–೮ನೆಯ ಶತಮಾನದ್ದೆಂದು ಹೇಳಬಹುದು.

ಲಾಡ್‌ಖಾನ್ ಸಮೂಹದಿಂದ ದಕ್ಷಿಣಕ್ಕೆ ಇರುವುದೇ ಚಕ್ರಗುಡಿ. ಇದು ದೊಡ್ಡ ಬಾವಿಯೊಂದರ ದಕ್ಷಿಣದ ಪಾರ್ಶ್ವಕ್ಕಿದೆ. ಮಂಟಪ ಮತ್ತು ಗರ್ಭಗುಡಿಗಳಷ್ಟೇ ಇರುವ ಈ ದೇವಾಲಯದ ಮುಂಭಾಗ ಶಿಥಿಲವಾಗಿದ್ದು, ಇದರ ತಳವಿನ್ಯಾಸ ಚೌಕವಿದೆ. ಮೇಲೆ ದುಂಡು ವಿನ್ಯಾಸವಿರುವ ಕಂಬಗಳು ಮಂಟಪದಲ್ಲಿವೆ. ಗರ್ಭಗುಡಿಯ ದ್ವಾರಬಂಧದ ತೋಳುಗಳ

ಒಂದೊಂದರಲ್ಲಿ ಹತ್ತರಂತೆ ಇಪ್ಪತ್ತು ರಸಿಕ ದಂಪತಿಗಳ ಶಿಲ್ಪಗಳಿವೆ. ಗರ್ಭಗುಡಿಯ ಮೇಲಿನ ಶಿಖರ ರೇಖಾನಾಗರ ಶೈಲಿಯಲ್ಲಿದೆ ಶಿಖರದಲ್ಲಿ ಎರಡು ಭೂಮಿಗಳಿದ್ದು ಮೇಲೆ ಅಮಲಕವಿದೆ. ಇದರ ಕಾಲ ಸು. ೯ನೆಯ ಶತಮಾನದ್ದು. ಗ್ರಾಮದ ದಕ್ಷಿಣ ಭಾಗದಲ್ಲಿ ಹುಚ್ಚಪ್ಪಯ್ಯನ ಮಠವಿದೆ. ಇದರಲ್ಲಿ ಎರಡು ಕಟ್ಟಡಗಳು ಅಕ್ಕಪಕ್ಕದಲ್ಲಿವೆ. ಒಂದು ದೇವಾಲಯ ಇನ್ನೊಂದು ಮಠವಿದ್ದು, ದೇವಾಲಯದಲ್ಲಿ ಗರ್ಭಗುಡಿ ಮತ್ತು ಮಂಟಪ ಮಾತ್ರ ಇದ್ದು, ಮಂಟಪದ ಮಧ್ಯದಲ್ಲಿ ೩ ಕಂಬಗಳ ಎರಡು ಸಾಲುಗಳಿದ್ದು, ಅಂಚಿನಲ್ಲಿ ಅವುಗಳ ನೇರದಲ್ಲಿ ಗೋಡೆಗೆ ಸೇರಿದ ಅರೆಗಂಬಗಳಿವೆ. ಈ ದೇವಾಲಯ ಸು. ೮ನೆಯ ಶತಮಾನದ್ದಾಗಿದ್ದು, ಇದರ ರಚನೆಯು ಒಳಮಂಟಪ ಮತ್ತು ಹೊರಮಂಟಪ ಎಂಬ ಎರಡು ಭಾಗಗಳಿಂದ ಕೂಡಿದೆ. ಇಲ್ಲಿನ ಕಂಬಗಳು ಅಲಂಕಾರ ರಹಿತವಾದವು. ಚಾವಣಿ ಮಟ್ಟದ ದ್ವಾರದ ಮೇಲೆ ಗಜಲಕ್ಷ್ಮಿಯ ವಿಗ್ರಹವಿದೆ.[೧೭] ಇದರ ಹೊರತು ಬೇರೆ ಶಿಲ್ಪಗಳಿಲ್ಲ. ಇಲ್ಲಿ ೧೦೭೬ರ ಒಂದು ಶಾಸನವಿದೆ.

ಪೇಟೆಯ ಒಳಗೆ ಸುಮಾರು ನಡುಮಧ್ಯದಲ್ಲಿ ಕೊಂತಿಗುಡಿಗಳ ಸಮೂಹವಿದೆ. ಇದು ೪ ದೇವಾಲಯಗಳ ಕೂಟವಾಗಿದೆ. ಒಂದನೆಯ ದೇವಾಲಯ ಆಯತಾಕಾರದ ಮಟ್ಟ, ಚಾವಣಿಯ ಮಂಟಪದ ಒಳಗೆ ೬ ಕಂಬಗಳ ಎರಡು ಸಾಲುಗಳಿವೆ. ಹಿಂಬದಿಯ ಗೋಡೆಗೆ ಸೇರಿದಂತೆ ಚಿಕ್ಕ ಆಯಾತಾಕಾರದ ಗರ್ಭಗೃಹವಿದೆ. ಈ ದೇವಾಲಯದ ಎದುರು ಸ್ವಲ್ಪ ಬದಿಗೆ ಇರುವ ಚೌಕ ತಳಪಾಯದ ಕಂಬಗಳ ಮೇಲೆ ನಿಂತ ಮಟ್ಟ ಚಾವಣಿಯ ಗುಡಿ ಎರಡನೆಯದು ಇದರಲ್ಲೂ ಉಮಾಮಹೇಶ್ವರ, ಸೂರ್ಯ, ಗಣೇಶ, ಮಹಿಷಮರ್ದಿನಿ ಮುಂತಾದ ಶಿಲ್ಪಗಳಿವೆ.[೧೮] ಈ ಗುಡಿಗಳ ನಡುವೆ ನಾಲ್ಕು ಕಂಬಗಳ ಮೇಲೆ ನಿಂತ ಒಂದು ಮಂಟಪವಿದೆ. ೧ ಮತ್ತು ೨ನೆಯ ಗುಡಿಗಳು ಸು. ೭ನೆಯ ಶತಮಾನದವು. ಆದರೆ ಈ ಗುಡಿಗಳಲ್ಲಿ ಕಂಡುಬರುವ ಸರಳ ವಿನ್ಯಾಸವನ್ನು ಆಧರಿಸಿವೆ. ಐಹೊಳೆಯ ಅತಿ ಪ್ರಾಚೀನ ಗುಡಿಗಳು ಎಂಬ ಅಭಿಪ್ರಾಯವಿದೆ. ಕೊಂತಿಗುಡಿ ಸಮೂಹದಲ್ಲಿ ೩ನೆಯದು ಶೈವಗುಡಿ. ಇದು ಸು. ೭ನೆಯ ಶತಮಾನದ್ದು. ವಿನ್ಯಾಸದಲ್ಲಿ ೧ನೆಯ ದೇವಾಲಯದಂತಿದೆ. ಗರ್ಭಗುಡಿಯ ದ್ವಾರದ ಇಕ್ಕೆಲದಲ್ಲಿ ಶಂಖನಿಧಿ, ಪದ್ಮನಿಧಿಗಳ ಶಿಲ್ಪಗಳಿವೆ. ಗಜ, ವೃಷಭ, ವರಾಹ, ಕಾಲುಗಳ ಮೇಲೆ ನಿಂತಿರುವ ಮೂವರು ಸ್ತ್ರೀಯರು, ಸಂಯುಕ್ತ ಶಿಲ್ಪ ಮುಂತಾದ ಶಿಲ್ಪಗಳು ಈ ಗುಡಿಯಲ್ಲಿವೆ. ೪ನೆಯ ಗುಡಿ ಸ್ವಲ್ಪ ಮಟ್ಟಿಗೆ ಹಾಳಾಗಿದೆ ಇಲ್ಲಿ ಕೆಲವು ರಸಿಕ ದಂಪತಿಗಳ

ಶಿಲ್ಪಗಳು ಉತ್ತಮವಾಗಿ ಕೆತ್ತನೆಯಾಗಿವೆ ಇದು ಸು. ೧೦ನೆಯ ಶತಮಾನದ್ದು[೧೯] ಎಂದು ಗುರುತಿಸಲಾಗಿದೆ.

ಜೈನಗುಡಿಗಳ ಸಮೂಹವು ತ್ರ್ಯಂಬಕೇಶ್ವರ ಗುಂಪಿನಿಂದ ಉತ್ತರಕ್ಕೆ ಜೈನನಾರಾಯಣ ಅಥವಾ ಯೋಗಿನಾರಾಯಣ ಎಂದು ಕರೆಯುವ ಗುಂಪಿದೆ. ಪಕ್ಕದಲ್ಲಿರುವ ಗೌರಿಗುಡಿ ಮೊದಲು ನಾರಾಯಣ ಗುಡಿಯಾಗಿದ್ದುದರಿಂದ ಈ ಜೈನ ಗುಡಿಗಳಿಗೂ ಜೈನ ನಾರಾಯಣ ಎಂಬ ಹೆಸರು ಬಂದಿರುವಂತೆ ತೋರುತ್ತದೆ. ಈ ಗುಂಪಿನಲ್ಲಿರುವ ಮುಖ್ಯ ಗುಡಿಯೂ ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿರುವ ತ್ರಿಕೂಟಾಚಲ ೧೧ನೆಯ ಶತಮಾನದ್ದು. ಇದರಲ್ಲಿಯ ಒಂದು ಕಂಬದ ಮೇಲೆ ಗಂಡವಿಮುಕ್ತಭವಾರಕನೆಂಬ ಜೈನಯತಿಯ ಸ್ತುತಿ ಇರುವ ಶಾಸನವಿದೆ. ನವರಂಗಕ್ಕೆ ತೆರೆದಂತಿರುವ ಮೂರು ಗರ್ಭಗುಡಿಗಳಲ್ಲಿ ಜೈನ ತೀರ್ಥಂಕರರ ಮೂರ್ತಿಗಳಿದ್ದವು. ಈಗ ಮಧ್ಯದ ಗುಡಿಯಲ್ಲಿನ ಪಾರ್ಶ್ವನಾಥ ವಿಗ್ರಹ ಮಾತ್ರ ಉಳಿದಿದೆ. ಮೇಲೆ ಬಲಭಾಗದಲ್ಲಿರುವ ಶಿಖರ ಸುಸ್ಥಿಯಲ್ಲಿದೆ.[೨೦]

ಚರಂತಿ ಮಠ ಕೊಂತಿಗುಡಿಗಳ ಸಮೂಹವು ಈಶಾನ್ಯ ಭಾಗದಲ್ಲಿ ಇವೆ. ಇದು ಜೈನ ಗುಡಿಗಳ ಗುಂಪಾಗಿದ್ದು, ಕಲಾಂತರದಲ್ಲಿ ಇವು ಚರಂತಿ ಮಠದವರ ಅಧೀನಕ್ಕೆ ಬಂದುದರಿಂದ ಈ ಹೆಸರು ರೂಢಿಗೆ ಬಂದಂತೆ ತೋರುತ್ತದೆ. ಈ ಗುಂಪಿನಲ್ಲಿರುವ ಮುಖ್ಯಗುಡಿ ತ್ರಿಕೂಟಾಚಲವಾಗಿದ್ದು, ಇದು ಸು. ೧೧-೧೨ನೆಯ ಶತಮಾನದ್ದಾಗಿದೆ. ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿರುವ ಈ ಗುಡಿಯಲ್ಲಿ ಮೂರು ಗರ್ಭಗೃಹಗಳನ್ನು ಕೂಡಿಸುವ ಒಂದು ಮಂಟಪ ಮತ್ತು ಅದರ ಮುಂದೆ ಮುಖಮಂಟಪಗಳಿವೆ. ಮುಖಮಂಟಪದಲ್ಲಿ ೨ ಕಂಬಗಳು ಮತ್ತು ೨ ಅರೆಗಂಬಳಿವೆ. ದೇವಾಲಯದ ಶಿಖರ ಈಗ ಕಾಣಸಿಗುವುದಿಲ್ಲ. ಮಧ್ಯದ ಗರ್ಭಗುಡಿಯ ಮುಂದೆ ಅಂತರಾಳವಿದ್ದು, ಅದರ ದ್ವಾರ ಬಂಧವು ಗಜಲಕ್ಷ್ಮಿ, ಕೆಲವು ಚಿಕ್ಕ ಶಿಲ್ಪಗಳು ಮತ್ತು ಹೂವಿನ ಸುಳಿವುಗಳಿಂದ ಅಲಂಕೃತವಾಗಿದೆ.[೨೧] ಚಕ್ರಗುಡಿಯ ಪಶ್ಚಿಮಕ್ಕಿರುವ ಬಡಿಗೇರ ಗುಡಿ ಮೂಲತಃ ಸೂರ್ಯ ದೇವಾಲಯವಾಗಿದ್ದು, ಮುಖಮಂಟಪ, ಮಂಟಪ ಮತ್ತು ಗರ್ಭಗುಡಿಗಳಿರುವ ಈ ದೇವಾಲಯಕ್ಕೆ ಕದಂಬನಾಗರದ ಫಾಂಸನ ಶಿಖರವಿದೆ. ಮುಖಮಂಟಪ ಪ್ರದೇಶದ ಬಲಗಡೆಯ ಕಂಬದ ಮೇಲೆ ದಕ್ಷಬ್ರಹ್ಮ ಮತ್ತು ಎಡಗಡೆಯ ಕಂಬದ ಮೇಲೆ ತ್ರಿಶೂಲ ರೀತಿಯ ಕೀರಿಟಧಾರಿಯಾದ ಶುದ್ಧ ಮೂರ್ತಿಯೊಂದರ ಶಿಲ್ಪ ಇದೆ. ಶಿಖರದ ಮುಂಭಾಗದಲ್ಲಿರುವ ಚೈತ್ಯ ಗೂಡಿನಲ್ಲಿ ಸೂರ್ಯವಿಗ್ರಹವಿದೆ. ಈ ಗುಡಿಯು ಸು. ೯ನೆಯ ಶತಮಾನದ್ದು ಎಂದು ತಿಳಿಯಬಹುದಾಗಿದೆ.

ಇಲ್ಲಿನ ಮತ್ತೊಂದು ದೇವಾಲಯವಾದ ರಾಚಿಗುಡಿಯು ಗ್ರಾಮದ ಪಶ್ಚಿಮ ಭಾಗದಲ್ಲಿದೆ. ಸುಮಾರು ೯ನೆಯ ಶತಮಾನದಲ್ಲಿ ಕಟ್ಟಿದ ದೇವಾಲಯವಾಗಿದೆ. ತ್ರಿಕೂಟಾಚಲವಾದ ಈ ಶಿವಾಲಯ ರಾಷ್ಟ್ರಕೂಟರ ಕಾಲದ್ದಾಗಿದ್ದು, ಇದು ಪೂರ್ವಾಭಿಮುಖವಾಗಿದೆ. ಎತ್ತರವಾದ ಅಧಿಷ್ಠಾನವಿದೆ. ಅಂತರಾಳ ಸಹಿತವಾದ ಮೂರು ಗರ್ಭಗುಡಿಗಳು ಒಂದೇ ನವರಂಗ ಮಂಟಪಕ್ಕೆ ತೆರೆದಂತೆ ಮೂರು ಮುಖ್ಯ ದಿಕ್ಕುಗಳಿವೆ. ಪೂರ್ವದಲ್ಲಿ ವಿಶಾಲವಾದ ಮುಖಮಂಟಪವಿದೆ. ಮುಖಮಂಟಪದ ಮಧ್ಯದಲ್ಲಿ ನಾಲ್ಕು ಕಂಬಗಳು ಛತ್ತನ್ನು ಎತ್ತಿ ನಿಲ್ಲಿಸಿವೆ. ಸುತ್ತಲೂ ಕಕ್ಷಾಸನವಿದ್ದು, ಅದರ ಮೇಲೆ ಚಿಕ್ಕ ಕಂಬಗಳಿವೆ. ಮಧ್ಯದ ಚಾವಣಿ ಮಟ್ಟ, ಅದರ ಸುತ್ತಲೂ ಕಕ್ಷಾಸನವಿದ್ದು ಅದರ ಮೇಲೆ ಚಿಕ್ಕ ಕಂಬಗಳಿವೆ. ಮಧ್ಯದ ಚಾವಣಿ ಮಟ್ಟದ ಸುತ್ತಲೂ ಇಳಿಜಾರು ರೀತಿಯಲ್ಲಿದ್ದು ಈ ಮಂಟಪದ ನಡುವೆ ನಂದಿ ಶಿಲ್ಪವಿದೆ.[೨೨] ನವರಂಗದಲ್ಲೂ ನಾಲ್ಕು ಕಂಬಗಳಿವೆ. ಮುಖ್ಯ ಗರ್ಭಗೃಹದ ಅಂತರಾಳದ ದ್ವಾರದ ಚೌಕಟ್ಟಿನಲ್ಲಿ ಜಾಲಂಧ್ರಗಳಿವೆ. ಎರಡು ಗರ್ಭಗುಡಿಗಳ ಮೇಲೆ ಶಿಖರಗಳು ಉಳಿದುಕೊಂಡಿದ್ದು, ಗುಡಿಯ ಹೊರಗೋಡೆಗಳ ಮೇಲೆ ಚಿಕ್ಕ ಕೋಷ್ಠಗಳು, ಗಣಪತಿ, ನಟರಾಜ, ಭೈರವ, ವಿಷ್ಣು ಮುಂತಾದ ಮೂರ್ತಿಗಳೂ ಇವೆ.

ತ್ರ್ಯಂಬಕೇಶ್ವರ ದೇವಾಲಯದ ಗರ್ಭಗೃಹದಲ್ಲಿ ಹಸಿರು ಗ್ರಾನೈಟ್ ಕಲ್ಲಿನಲ್ಲಿ ಮಾಡಿರುವ ಶಿವಲಿಂಗವಿದೆ. ಇಲ್ಲಿರುವ ಮೂರು ದೇವಾಲಯಗಳು ತ್ರಿಕೂಟಾಚಲ ಮಾದರಿಯ ದೇವಾಲಯಗಳಾಗಿವೆ. ಈ ದೇವಾಲಯಗಳ ಮೇಲೆ ಕದಂಬ ನಾಗರ ಶೈಲಿಯ ಶಿಖರವಿದೆ. ಏಣಿಯಾರ್ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲದ ೧೧-೧೨ನೇ ಶತಮಾನದ್ದು ಎಂದು ಹೇಳಲಾಗುತ್ತದೆ. ಈ ದೇವಾಲಯದ ಸಮೂಹದಲ್ಲಿ ೮ ದೇವಾಲಯಗಳಿವೆ.[೨೩] ಎಲ್ಲ ದೇವಾಲಯಗಳಲ್ಲೂ ಉತ್ತಮವಾದ ಕೆತ್ತನೆ ಶಿಲ್ಪಗಳಿವೆ. ಐದು ದೇವಾಲಯಗಳ ಸಮೂಹದಲ್ಲಿರುವ ಮಲ್ಲಿಕಾರ್ಜುನ ದೇವಾಲಯವು ಮೇಗುತಿ ಬೆಟ್ಟದ ಪರಿಸರದಲ್ಲಿದೆ. ಇವು ಕ್ರಿ.ಶ. ೮ನೆಯ ಶತಮಾನದಲ್ಲಿ ನಿರ್ಮಾಣವಾಗಿವೆ. ಈ ದೇವಾಲಯ ಪೂರ್ವಾಭಿಮುಖವಾಗಿದ್ದು, ಅಧಿಷ್ಠಾನ, ಗರ್ಭಗೃಹ, ಸಭಾಮಂಟಪ, ಮುಖಮಂಟಪವನ್ನು ಹೊಂದಿದೆ. ರಸಿಕ ದಂಪತಿಗಳು, ನರಸಿಂಹ ಮುಂತಾದ ಮುಖ್ಯ ಶಿಲ್ಪಗಳಿವೆ. ಸರ್ಪವನ್ನು ಒಡಿದ ಗರುಡ ಶಿಲ್ಪ, ಗರ್ಭಗೃಹದ ಮೇಲೆ ಕದಂಬನಾಗರ ಶೈಲಿಯ ಶಿಖರವಿದೆ.

ದುರ್ಗಾ ದೇವಾಲಯದ ಪೂರ್ವಭಾಗದಲ್ಲಿರುವ ಕೋಟೆ ಗೋಡೆಯಿಂದ ಸ್ವಲ್ಪ ದೂರದಲ್ಲಿ ೧೬ ದೇವಾಲಯಗಳಿರುವ ಸಮೂಹವಿದೆ. ಈ ಸಮೂಹದಲ್ಲಿರುವ

ಪ್ರಮುಖವಾದ ದೇವಾಲಯವು ಮುಖಮಂಟಪ, ನಂದಿಮಂಟಪ, ಸಭಾಮಂಟಪ, ಗರ್ಭಗೃಹವನ್ನು ಹೊಂದಿದೆ. ಎರಡೂ ದೇವಾಲಯಗಳ ಮೇಲೆ ಕದಂಬನಾಗರ ಶೈಲಿಯ ಶಿಖರಗಳಿವೆ. ಐಹೊಳೆಯಲ್ಲಿಯೇ ದೊಡ್ಡದಾದ ಗುಹಾಲಯ ರಾವಳಫಡಿಯ ಗುಹಾಲಯ. ಈ ಗುಹಾಲಯದ ಮುಖಮಂಟಪದ ಪಾರ್ಶ್ವದಲ್ಲಿ ಶಂಖನಿಧಿ, ಪದ್ಮನಿಧಿ ಹಾಗೂ ಶೈವ ದ್ವಾರಪಾಲಕ ಶಿಲ್ಪಗಳಿವೆ. ಇಲ್ಲಿ ಅರ್ಧನಾರೀಶ್ವರ, ಹರಿಹರ, ಗಂಗಾಧರ, ಭೂವರಾಹ, ಮಹಿಷಮರ್ದಿನಿ ಶಿಲ್ಪಗಳಿವೆ. ಇಲ್ಲಿನ ನಟರಾಜನ ಶಿಲ್ಪದ ಮೇಲ್ಭಾಗದಲ್ಲಿ ವರ್ಣಚಿತ್ರ ಕಲೆಯನ್ನು ಸಹ ಕಾಣಬಹುದಾಗಿದೆ. ಭಾರತದಲ್ಲಿಯೇ ನಿರ್ದಿಷ್ಟ ದಿನಾಂಕವನ್ನು ಹೊಂದಿರುವ ಪ್ರಪ್ರಥಮ ಜಿನಾಲಯವೆಂಬ ಕೀರ್ತಿಗೆ ಪಾತ್ರವಾಗಿದೆ.[೨೪] ಅಧಿಷ್ಠಾನದ ಪಟ್ಟಿಕೆಯಲ್ಲಿ ದಂಪತಿಗಳು, ಹಾವಾಡಿಗ, ಮಲ್ಲರ ಉಬ್ಬುಶಿಲ್ಪಗಳಿವೆ. ಭಿತ್ತಿಯ ಮೇಲೆ ಅರೆಗಂಬಗಳು ಮತ್ತು ದೇವಕೋಷ್ಠಗಳಿವೆ.

ಹೀಗೆ ಐಹೊಳೆಯು ವಾಸ್ತುಶಿಲ್ಪಕಲೆಯ ಭಂಡಾರವನ್ನು ಹೊಂದಿದ್ದು, ಇವುಗಳ ಕಲಾವೈಶಿಷ್ಟ್ಯವನ್ನು ಮುಂದಿನ ಪೀಳಿಗೆಯವರು ನೋಡಲು ಮತ್ತು ವಾಸ್ತುಶಿಲ್ಪದ ಬಗ್ಗೆ ತಿಳಿಯಲು ಉಳಿಸಿಕೊಂಡು ಹೋಗುವ ದೃಷ್ಠಿಯಿಂದ ಹಾಗೂ ಇಲ್ಲಿನ ಸ್ಮಾರಕಗಳ ಸಂರಕ್ಷಣೆಗೆ ಒಂದು ನಿರ್ದಿಷ್ಟವಾದ ಪ್ರೋತ್ಸಾಹ ಬೇಕಾಗಿರುವ ಹಿನ್ನೆಲೆಯಲ್ಲಿ ಐಹೊಳೆಯ ಸ್ಮಾರಕಗಳ ವರದಿಯನ್ನು ಯೂನೆಸ್ಕೋಗೆ ಕಳುಹಿಸಿದೆ. ಆದ್ದರಿಂದ ಐಹೊಳೆಯು ವಿಶ್ವಪಾರಂಪರಿಕ ಸಮಿತಿಯ ಸಂಭಾವ್ಯ ತಾಣವಾಗಿದೆ ಎನ್ನಬಹುದು.

**ಬಾದಾಮಿ :**

ಬಾಗಲಕೋಟೆ ಜಿಲ್ಲೆಯ ಬಾದಾಮಿಯು ತಾಲ್ಲೂಕು ಕೇಂದ್ರವಾಗಿದ್ದು, ಇದು ಕ್ರಿ.ಶ. ೫೪೩ ರಿಂದ ೭೫೭ರ ವರೆಗೆ ಸುಮಾರು ೨೧೪ ವರ್ಷಗಳ ಕಾಲ ಬಾದಾಮಿ ಚಾಲುಕ್ಯರ ಸಾಮ್ರಾಜ್ಯದ ರಾಜಧಾನಿಯಾಗಿ ಸುಪ್ರಸಿದ್ಧವಾಗಿತ್ತು. ಪುರಾಣಗಳಲ್ಲಿ ಈ ನಗರವನ್ನು 'ವಾತಾಪಿ' ಎಂದು ಉಲ್ಲೇಖಿಸಲಾಗಿದೆ.[೨೫] ಈ ನಗರವನ್ನು ಗ್ರೀಕ್ ದೇಶದ ಇತಿಹಾಸ ತಜ್ಞ ಟಾಲೆಮಿಯ ಪ್ರವಾಸ ಕಥನದಲ್ಲಿ 'ಬಾದಾಮೊಯಿ'[೨೬] ಎಂದು ಉಲ್ಲೇಖಿಸಲಾಗಿದೆ. ಬಾದಾಮಿಯು, ಕೆಂಪು ಕಲ್ಲಿನ ಗುಡ್ಡಗಳಿಂದ ಮೂರು ದಿಕ್ಕಿನಿಂದ ಸುತ್ತುವರಿಯಲ್ಪಟ್ಟಿದೆ. ಈ ನಗರವು ಅಗಸ್ತ್ಯತೀರ್ಥ ಹೊಂಡದ ದಂಡೆಯ ಪಶ್ಚಿಮ ಭಾಗದಲ್ಲಿ ವಿಶಾಲವಾಗಿ ಹರಡಿದೆ. ಈ ಗ್ರಾಮಕ್ಕೆ ಬಾದಾಮಿ ಎಂದು ಹೆಸರು ಹೇಗೆ ಬಂದಿದೆ ಎಂಬುದು ಸ್ಪಷ್ಟವಿಲ್ಲ. ಚಾಲುಕ್ಯರ ಕಾಲದಿಂದ ಹಿಡಿದು ವಿಜಯನಗರದ ಅರಸರ ಕಾಲದವರೆಗಿನ ಕನ್ನಡ ಶಾಸನಗಳಲ್ಲಿ

ಬಾದಾಮಿ ಎಂದೂ, ಕ್ರಿ.ಶ. ೫೪೩ರ ಸಂಸ್ಕೃತ ಶಾಸನದಲ್ಲಿ ವಾತಾಪಿ ಎಂಬುದಾಗಿಯೂ ಉಲ್ಲೇಖಿತವಾಗಿದೆ. ವಾತಾಪಿಯು ಬಾದಾಮಿಯ ಸಂಸ್ಕೃತ ರೂಪಾಂತರವಿರಬಹುದು ಅಥವಾ ಹತ್ತಿರದಲ್ಲಿರುವ ಬನಶಂಕರಿಯ ಬನದಬ್ಬೆಯಿಂದಾಗಲಿ ಬಾದಾಮಿಯ ಅಗಸ್ತ್ಯತೀರ್ಥ ಹೊಂಡದ ಸ್ಥಳದಲ್ಲಿ ಮೂಲತಃ ಇದ್ದಿರಬಹುದಾದ 'ಬದುವಿನ ಬಾವಿ'ಯಿಂದಾಗಲಿ ಈ ಹೆಸರು ಬಂದಿರುವ ಸಾಧ್ಯತೆಯಿದೆಯೆಂದು ಸೂಚಿಸಲಾಗಿದೆ.

ಈ ಪ್ರದೇಶದ ಪ್ರಾಚೀನತೆಯನ್ನು ಮಹಾಕಾವ್ಯಗಳಲ್ಲಿ ಕಾಣಬಹುದಾಗಿದೆ. ರಾಮಾಯಣ, ಮಹಾಭಾರತ, ಹಾಗೂ ಪುರಾಣಗಳಲ್ಲಿರುವ ವಾತಾಪಿ ಮತ್ತು ಇಲ್ವಲ ಎಂಬ ರಾಕ್ಷಸರ ಕಥೆಯು ಬಾದಾಮಿಯ ಪರಿಸರಕ್ಕೆ ಅನ್ವಯವಾಗಿ ಮಹಾಕೂಟೇಶ್ವರ ಪುರಾಣದಲ್ಲಿ ಕಾಣಿಸಿಕೊಂಡಿದೆ. ಈ ಲೋಕಕಂಟಕರನ್ನು ನಾಶಮಾಡಲು ದೇವತೆಗಳ ಅಗ್ರಹದ ಮೇರೆಗೆ ಅಗಸ್ತ್ಯ ಋಷಿಗಳು ಕಾಶಿಯಿಂದ ಮಹಾಕೂಟಕ್ಕೆ ಹೊರಟರು. ಅಲ್ಲಿ ವಾತಾಪಿ ಇಲ್ವಲರು ಅವರನ್ನು ಎಂದಿನಂತೆ ಶ್ರಾದ್ಧದ ಊಟಕ್ಕೆ ಆಹ್ವಾನಿಸಿದರು. ವಾಡಿಕೆಯಂತೆ ಇಲ್ವಲನು ಆಡಿನ ರೂಪದ ವಾತಾಪಿಯನ್ನು ಕೊಂದು ಮಾಂಸದ ಅಡಿಗೆಯನ್ನು ಅಗಸ್ತ್ಯರಿಗೆ ಬಡಿಸಿದನು. ಊಟದ ನಂತರ ವಾತಾಪಿ ಹೊರಗೆ ಬಾ ಎಂದು ಇಲ್ವಲ ಕೂಗಿದನು ಅಗಸ್ತ್ಯರು ಹೊಟ್ಟೆ ಸವರಿಕೊಂಡು ವಾತಾಪಿ ಜೀರ್ಣೋಭವ ಎಂದು ಹೇಳಿ ವಾತಾಪಿ ತನ್ನ ಜಠರಾಗ್ನಿಯಲ್ಲಿ ಸುಟ್ಟು ಹೋದನೆಂದು ಹೇಳಿದಾಗ ಇಲ್ವಲನು ಅಗಸ್ತ್ಯನನ್ನು ಕೊಲ್ಲಲು ಪ್ರಯತ್ನಿಸಿ ಅವನ ಕೋಪಾಗ್ನಿಯಲ್ಲಿ ಬೆಂದು ಹೋದನು. ತನ್ನ ಶ್ರೀಕ್ಷೇತ್ರದಲ್ಲಿ ತೀರಿಕೊಂಡದ್ದರಿಂದ ವಾತಾಪಿ ಇಲ್ವರಿಬ್ಬರಿಗೂ ಶಿವನು ಸದ್ಗತಿ ನೀಡಿದನು.[೨೭] ವಾತಾಪಿಯು ಬಾದಾಮಿಯಲ್ಲಿಯೂ ಮತ್ತು ಇಲ್ವಲನು ಐಹೊಳೆಯಲ್ಲಿಯೂ ಕಲ್ಲುಬೆಟ್ಟಗಳಾಗಿದ್ದಾರೆಂದು ಜನಪದರ ನಂಬಿಕೆ.

**ರಾಜಕೀಯ ಇತಿಹಾಸ :**

ಕ್ರಿ.ಶ. ೫೪೩ ರಿಂದ ೭೫೭ರವೆಗೆ ಬಾದಾಮಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ ಚಾಲುಕ್ಯರ ಚಟುವಟಿಕೆಗಳಿಂದಾಗಿ ಈ ಸ್ಥಳಕ್ಕೆ ಐತಿಹಾಸಿಕ ಮಹತ್ವ ಲಭಿಸಿದೆ. ಜಯಸಿಂಹನ ಮೊಮ್ಮಗನೂ ರಣರಾಗನ ಮಗನೂ ಆದ ಚಲಿಕ್ಯ ವಲ್ಲಭೇಶ್ವರ ಪುಲಿಕೇಶಿಯು ಅಶ್ವಮೇಧ ಮುಂತಾದ ಯಜ್ಞಗಳನ್ನು ಮಾಡಿ ಹಿರಣ್ಯ ಗರ್ಭಸಂಭೂತನಾಗಿ ೫೪೩ರಲ್ಲಿ ವಾತಾಪಿ ಬೆಟ್ಟವನ್ನು ಅಭೇದ್ಯ ದುರ್ಗವನ್ನಾಗಿ ಪರಿವರ್ತಿಸಿದನು. ಅವನ ಮಗ ಮೊದಲನೇ ಕೀರ್ತಿವರ್ಮನು ನಳ, ಮೌರ್ಯ, ಕದಂಬರನ್ನು ಸೋಲಿಸಿ ರಾಜ್ಯವಿಸ್ತಾರ ಮಾಡಿದನು. ಇವನ ಕಾಲದಲ್ಲಿ ಬಾದಾಮಿಯಲ್ಲಿ ಮೂರನೇ ವೈಷ್ಣವ ಗುಹಾಲಯವನ್ನು

ಕೊರೆಯಿಸಿದನು. ಅವನ ಮಕ್ಕಳು ಚಿಕ್ಕವರಾದ್ದರಿಂದ ಅವನ ತಮ್ಮ ಮಂಗಳೇಶನು ರಾಜ್ಯಭಾರದ ಚುಕ್ಕಾಣಿ ಹಿಡಿದು ರೇವತಿ ದ್ವೀಪವನ್ನು ಗೆದ್ದುದಲ್ಲದೆ, ಕಟಚುರಿ ಬುದ್ಧರಾಜನನ್ನು ಸೋಲಿಸಿ ಅವನ ಸಂಪತ್ತನ್ನು ಸೂರೆಗೈದನು. ಕೀರ್ತಿವರ್ಮನ ಮಗ ಎರಡನೇ ಪುಲಕೇಶಿಯು ಯೋಗ್ಯ ವಯಸ್ಕನಾದಾಗ ಮಂಗಳೇಶನು ಅಧಿಕಾರವನ್ನು ಅವನಿಗೆ ವಹಿಸಿಕೊಡದೆ ತನ್ನ ಮಗನನ್ನು ಪಟ್ಟಕಟ್ಟುವ ಯೋಜನೆ ಮಾಡಿದನು. ಆಗ ಪುಲಕೇಶಿಯು ದಂಗೆಯೆದ್ದು ಅವನನ್ನು ಯುದ್ದದಲ್ಲಿ ಕೊಂದು ತನ್ನ ಅಧಿಕಾರ ಪಡೆದನು. ಈ ಆಂತರಿಕ ಕಲಹದ ದುರುಪಯೋಗ ಪಡೆಯಲು ಪ್ರಯತ್ನಿಸಿದವರನ್ನು ಬಗ್ಗುಬಡಿದನು. ಅಪ್ಪಾಯಿಕ ಮತ್ತು ಗೋವಿಂದರನ್ನು ಸೋಲಿಸಿ ಕದಂಬರ ಬನವಾಸಿಯನ್ನು ವಶಪಡಿಸಿಕೊಂಡು, ಗಂಗ–ಆಳುಪರನ್ನು ಬಗ್ಗಿಸಿ, ಕೊಂಕಣದ ಮೌರ್ಯರನ್ನು ಗೆದ್ದು, ಪುರಿಯನ್ನು ನೌಕಾದಳದಿಂದ ಅಕ್ರಮಿಸಿ, ಲಾಟ, ಮಾಳವ, ಗೂರ್ಜರರನ್ನು ಶರಣಾಗತರಾಗುವಂತೆ ಮಾಡಿದನು.[೨೮] ನರ್ಮದಾ ತೀರದಲ್ಲಿ ಉತ್ತರಾಪಥೇಶ್ವರನೆನಿಸಿದ ಹರ್ಷವರ್ಧನನ ಆನೆಗಳನ್ನು ಉರುಳಿಸಿ ಅವನ ಹರ್ಷವು ಕರಗುವಂತೆ ಮಾಡಿದನು. ಕೋಸಲ–ಕಳಿಂಗರನ್ನು ಭೀತಿಗೊಳಿಸಿದನು. ನಂತರ ಆಂಧ್ರದ ಪಿಷ್ಟಪುರದ ದುರ್ಗವನ್ನು ಗೆದ್ದನು. ದಕ್ಷಿಣದಲ್ಲಿ ಪಲ್ಲವರನ್ನು ಸೋಲಿಸಿ, ಕಾವೇರಿಯನ್ನು ದಾಟಿ ಚೋಳ, ಕೇರಳ, ಪಾಂಡ್ಯರು ತನ್ನ ಸಾರ್ವಭೌಮತ್ವವನ್ನು ಒಪ್ಪುವಂತೆ ಮಾಡಿದನು. ಚಾಲುಕ್ಯರ ರಾಜ್ಯ ದೊಡ್ಡ ಸಾಮ್ರಾಜ್ಯವಾಗಿ ನರ್ಮದೆಯಿಂದ ಕಾವೇರಿಯವರೆಗೆ ಹರಡಿಸಿದ ಕೀರ್ತಿ ವೀರ ಪುಲಿಕೇಶಿಗೆ ಸಲ್ಲುತ್ತದೆ.

ಪಲ್ಲವರ ಮೊದಲನೇ ನರಸಿಂಹವರ್ಮನು ಅವಮಾನಕ್ಕೆ ಪ್ರತೀಕಾರವಾಗಿ ಚಲುಕ್ಯರಾಜ್ಯದ ಮೇಲೆ ದಾಳಿ ಮಾಡಿ ಸುಮಾರು ೬೪೨ ರಲ್ಲಿ ಪುಲಕೇಶಿಯನ್ನು ಸೋಲಿಸಿ ಬಾದಾಮಿಯನ್ನು ಆಕ್ರಮಿಸಿಕೊಂಡು ತನ್ನ ಗೆಲುವಿನ ದಾಖಲೆಯಾಗಿ ಬಾದಾಮಿಯ ಉತ್ತರ ಕೋಟೆಯ ಬಂಡೆಯ ಮುಖದಲ್ಲಿ ತನ್ನ ಶಾಸನವನ್ನು ಬರೆಯಿಸಿದನು. ೧೨ ವರ್ಷಗಳ ಕಾಲ ರಾಜ್ಯದಲ್ಲಿ ಅರಾಜಕತೆಯ ಸ್ಥಿತಿ ಮುಂದುವರೆಯಿತು. ೬೫೪ ರಲ್ಲಿ ಮೊದಲನೆಯ ವಿಕ್ರಮಾದಿತ್ಯನು ಪಲ್ಲವರನ್ನು ರಾಜ್ಯದಿಂದ ಹೊರದೂಡಿ ಮತ್ತೆ ಚಾಲುಕ್ಯರ ಅಧಿಪತ್ಯವನ್ನು ನೆಲೆಗೊಳಿಸಿದನು. ಇವನು ಶಿವಮಂಡಲ ದೀಕ್ಷೆ ಪಡೆದು ಪರಮಮಾಹೇಶ್ವರನಾದ ಮೇಲೆ ಚಾಲುಕ್ಯರು ಹಲವಾರು ಶೈವ ದೇಗುಲಗಳನ್ನು ನಿರ್ಮಿಸಿದರು.[೨೯] ಅವನ ಮಗ ವಿನಯಾದಿತ್ಯನ ಕಾಲದಲ್ಲಿ ಯುವರಾಜನಾದ ವಿಜಯಾದಿತ್ಯನು ಉತ್ತರ ಭಾರತದಲ್ಲಿ ಸಾಹಸದಿಂದ ವಜ್ರಟನನ್ನು ಸೋಲಿಸಿ ಗಂಗಾ, ಯಮುನಾ, ಪಾಲಿಧ್ವಜವ ಮುಂತಾದ

ರಾಜಚಿಹ್ನೆಗಳನ್ನು ಕಸಿದು ತಂದು ತಂದೆಗೆ ಒಪ್ಪಿಸಿದನು. ವಿಜಯಾದಿತ್ಯನ ಆಳ್ವಿಕೆಯಲ್ಲಿ ಚಾಲುಕ್ಯ ಸಾಮ್ರಾಜ್ಯವು ಶಾಂತಿ ಸಮೃದ್ಧಿಯ ಸ್ಥಿತಿಯನ್ನು ಅನುಭವಿಸಿತು. ಇವನ ಕಾಲಾವಧಿಯಲ್ಲಿ ಅನೇಕ ದೇಗುಲಗಳು ನಿರ್ಮಾಣವಾದವು. ಅನಂತರ ವಿಜಯಾದಿತ್ಯನ ಮಗ ಇಮ್ಮಡಿ ವಿಕ್ರಮಾದಿತ್ಯನು ಪಲ್ಲವರ ಮೇಲೆ ಜಯಸಾಧಿಸಿ ಮೂರು ಬಾರಿ ಅವನ ರಾಜಧಾನಿಯಾದ ಕಂಚಿಯನ್ನು ಆಕ್ರಮಿಸಿಕೊಂಡನು. ಗುಜರಾತಿನ ಚಾಲುಕ್ಯ ಶಾಖೆಯ ಅವನಿಜನಾಶ್ರಯ ಪುಲಿಕೇಶಿಯು ಅರಬ್ಬರನ್ನು ನಿರ್ಣಾಯಕವಾಗಿ ಸೋಲಿಸಿ ಹಿಮ್ಮೆಟ್ಟಿಸಿದನು.[೩೦] ವಿಕ್ರಮಾದಿತ್ಯನ ರಾಣಿಯರಾದ ಲೋಕಮಹಾದೇವಿ, ತ್ರೈಲೋಕ್ಯಮಹಾದೇವಿಯರು ನಿರ್ಮಿಸಿದ ಮಹಾದೇಗುಲಗಳು ಪಟ್ಟದಕಲ್ಲಿನಲ್ಲಿವೆ. ಇಮ್ಮಡಿ ವಿಕ್ರಮಾದಿತ್ಯನ ತರುವಾಯ ಅವನ ಮಗ ಇಮ್ಮಡಿ ಕೀರ್ತಿವರ್ಮನು ಪಟ್ಟಕ್ಕೇರಿದನು. ಇವನ ಕಾಲದಲ್ಲಿ ಚಾಲುಕ್ಯರ ಕರ್ನಾಟಕ ಬಲವನ್ನು ರಾಷ್ಟ್ರಕೂಟ ದಂತಿದುರ್ಗನು ಸೋಲಿಸಿ ಸಾರ್ವಭೌಮತ್ವವನ್ನು ಘೋಷಿಸಿದನು. ಸುಮಾರು ೭೫೭ರಲ್ಲಿ ಕೀರ್ತಿವರ್ಮನು ಮರಣ ಹೊಂದಿದ ಮೇಲೆ ಚಾಲುಕ್ಯರ ಪ್ರಭುತ್ವ ಕೊನೆಗೊಂಡಿತು.

ವಾತಾಪ್ಯಧಿಷ್ಠಾನವೆಂದು ಪ್ರಸಿದ್ಧಿ ಪಡೆದ ಬಾದಾಮಿಯು ಚಾಲುಕ್ಯರ ಪತನದ ನಂತರ ತನ್ನ ರಾಜಕೀಯ ಪ್ರಾಧಾನ್ಯವನ್ನು ಕಳೆದುಕೊಂಡು ರಾಷ್ಟ್ರಕೂಟರ, ಕಲ್ಯಾಣದ ಚಾಲುಕ್ಯರ, ಕಲಚೂರಿಗಳ, ಸೇವುಣರ, ವಿಜಯನಗರದ ಅರಸರ ನಡುನಡುವೆ ಆದಿಲ್‌ಶಾಹಿಗಳ ಆಳ್ವಿಕೆ ಕಂಡಿತು. ವಿಜಯನಗರದ ಹರಿಹರನ ಕಾಲದಲ್ಲಿ ೧೩೩೯ರಲ್ಲಿ ಚಾಮರಾಜನು ಬಾದಾಮಿಯ ಕೋಟೆಗೆ ಹೊಸ ರೂಪವನ್ನು ಕೊಟ್ಟು ಇದನ್ನು ಮಹಾಜನರಿಗೆ ದಾನಮಾಡಿದನು. ಮತ್ತೆ ಅಚ್ಯುತರಾಯನ ಕಾಲದಲ್ಲಿ ಬಾದಾಮಿಯ ಕೋಟೆ ಹಾಗೂ ಪಾಳುಬಿದ್ದಿದ್ದ ದೇವಾಲಯಗಳು ಜೀರ್ಣೋದ್ಧಾರಗೊಂಡವು. ಸದಾಶಿವರಾಯನ ಕಾಲದಲ್ಲಿ ಕೊಂಡರಾಜ ಮತ್ತು ಕೃಷ್ಣಪ್ಪನಾಯಕರು ಮಾಲಗಿತ್ತಿ ಶಿವಾಲಯದ ಸಮೀಪ ಹಾಗೂ ಮೂರನೆಯ ಗುಹೆಯ ಪರಿಸರದಲ್ಲಿ ಕೊತ್ತಲಗಳನ್ನು ನಿರ್ಮಿಸಿದರು. ಬಾದಾಮಿಯ ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದ ಸಂಪೂರ್ಣವಾದ ಮಾಹಿತಿಯನ್ನು ೪ನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಸಂರಕ್ಷಿತ ಸ್ಮಾರಕಗಳು :**

ಬಾದಾಮಿಯಲ್ಲಿ ಪುರಾತತ್ವ ಸರ್ವೇಕ್ಷಣಾ ಇಲಾಖೆಯವರು ಹಲವಾರು ಪ್ರಾಚೀನ ರಚನಾತ್ಮಕ ದೇವಾಲಯ, ಗುಹಾಲಯ ಹಾಗೂ ಕೋಟೆಗಳನ್ನು ಸಂರಕ್ಷಿಸಿದ್ದಾರೆ. ಅವುಗಳ ಜೊತೆಗೆ ಇನ್ನೂ ಕೆಲವು ರಚನಾತ್ಮಕ ಪ್ರಾಚೀನ ಕಟ್ಟಡಗಳನ್ನು ಸೇರಿಸಿ ಯುನೆಸ್ಕೋಗೆ ವರದಿ

ಕಳುಹಿಸಲಾಗಿದೆ ವಿಶ್ವಪಾರಂಪರಿಕ ತಾಣಗಳ ಪಟ್ಟಿಯಲ್ಲಿ ನಾಮನಿರ್ದೇಶನಗೊಂಡಿರುವ ಸ್ಥಳಗಳಲ್ಲಿ ಬಾದಾಮಿಯು ಕೂಡ ಒಂದಾಗಿದೆ. ಇಲ್ಲಿರುವ ಪ್ರಮುಖವಾದ ಪ್ರಾಚೀನ ಸ್ಮಾರಕಗಳು ಈ ಕೆಳಗಿನಂತಿವೆ.

೧. ಕೋಟೆಗಳು
೨. ಮೊದಲನೆಯ ಶೈವ ಗುಹಾಲಯ
೩. ಎರಡನೆಯ ವೈಷ್ಣವ ಗುಹಾಲಯ
೪. ಬೌದ್ಧರ ನೈಸರ್ಗಿಕ ಗುಹೆ
೫. ಮೂರನೆಯ ವೈಷ್ಣವ ಗುಹಾಲಯ
೬. ನಾಲ್ಕನೆಯ ಜೈನ ಗುಹಾಲಯ
೭. ಜಂಬೂಲಿಂಗ ದೇವಾಲಯ
೮. ಕೆಳಗಿನ ಶಿವಾಲಯ
೯. ಮೇಲಿನ ಶಿವಾಲಯ
೧೦. ಮಾಲಗಿತ್ತಿ ಶಿವಾಲಯ
೧೧. ಭೂತನಾಥ ದೇವಾಲಯ ಸಮೂಹ
೧೨. ಎಲ್ಲಮ್ಮ ಗುಡಿ
೧೩. ವಿರೂಪಾಕ್ಷ ದೇವಾಲಯ

**ಕೋಟೆಗಳು :**

ಬಾದಾಮಿಯ ಉತ್ತರ ಮತ್ತು ದಕ್ಷಿಣದ ಬೆಟ್ಟಗಳ ಮೇಲೆ ಎರಡು ಬಲವಾದ ಕೋಟೆಗಳಿವೆ. ಉತ್ತರದ ಕಡೆಯ ಕೋಟೆಯನ್ನು ಬಾವನ್ ಬಂಡೆ ಕೋಟೆಯೆಂದೂ, ದಕ್ಷಿಣ ಕಡೆಯ ಕೋಟೆಯನ್ನು ರಣಮಂಡಲ ಕೋಟೆಯೆಂದೂ ಕರೆಯುತ್ತಾರೆ. ಎರಡೂ ಕೋಟೆಗಳ ಮಧ್ಯೆ ೨೭೦ಮೀ ಅಂತರವಿದ್ದು, ಈ ಎರಡೂ ಕೋಟೆಗಳು ನೆಲಮಟ್ಟದಿಂದ ಸು. ೭೨ ಮೀ ಎತ್ತರದಲ್ಲಿವೆ.[೩೧] ಉತ್ತರದ ಕೋಟೆಗೆ ಹೋಗಲು ಊರಿನ ಒಳಗಿನಿಂದ ಮಾರ್ಗವಿದೆ. ಮೇಲೆ ಗುಡ್ಡದ ಅಂಚಿನುದ್ದಕ್ಕೂ ಅಲ್ಲಲ್ಲಿ ಹಾಳಾಗಿರುವ ಕೋಟೆಗೋಡೆ ಇದೆ. ಬಾದಾಮಿಯ ಅತ್ಯಂತ ಪ್ರಾಚೀನ ಶಾಸನ ಈ ಕೋಟೆಗೆ ಸಂಬಂಧಿಸಿದ್ದು. ಇದು ಗುಡ್ಡದಲ್ಲಿ ಬಹು ಇಕ್ಕಟ್ಟಾದ ಕಣಿವೆಯಲ್ಲಿ ಎತ್ತರ ಹಾಗೂ ಕಡಿದಾದ ಬಂಡೆಯ ಮೇಲೆ ಇದೆ. ಶ್ರೌತವಿಧಿಗಳಿಗನುಸಾರವಾಗಿ ಅಶ್ವಮೇಧ ಮೊದಲಾದ ಯಜ್ಞಗಳನ್ನೂ, ಹಿರಣ್ಯಗರ್ಭ ಮುಂತಾದ ಮಹಾದಾನಗಳನ್ನೂ

ಮಾಡಿದ ಚಾಲುಕ್ಯ ವಲ್ಲಭೇಶ್ವರನು ಅನುಕೂಲಕರವಾದ ಈ ಗುಡ್ಡದ ಮೇಲಿರುವ ವಾತಾಪಿಯನ್ನು ಕ್ರಿ.ಶ.೫೪೩ರಲ್ಲಿ ಕಟ್ಟಿಸಿದನೆಂದು[೩೨] ಈ ಶಾಸನ ತಿಳಿಸುತ್ತದೆ. ಆದರೆ ಚಾಲುಕ್ಯರ ಕಾಲದ್ದೆಂದು ಗುರುತಿಸಲು ಸ್ಪಷ್ಟವಾದ ಭಾಗಗಳು ಉಳಿದು ಬಂದಿಲ್ಲ. ಮುಂದೆ ರಾಷ್ಟ್ರಕೂಟರ ಕಾಲದಲ್ಲೂ ವಿಜಯನಗರ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲೂ ಇದನ್ನು ವಿಸ್ತರಿಸಲಾಗಿದೆ. ದಕ್ಷಿಣ ಗುಡ್ಡದ ಮೇಲಿನ ಕೋಟೆ ೧೮ನೆಯ ಶತಮಾನದ್ದು, ಇದು ಫಿರಂಗಿ ಹಾರಿಸಲು ಅನುಕೂಲವಿರುವ ಮತ್ತು ಫಿರಂಗಿ ಹೊಡೆತವನ್ನು ತಡೆಯಬಲ್ಲ ಭದ್ರವಾದ ಕಟ್ಟಡ ಮತ್ತು ಎರಡೂ ಕೋಟೆಗಳಿಗೂ ಅನೇಕ ಕಲ್ಲು ಮೆಟ್ಟಿಲುಗಳಿವೆ. ಕೋಟೆಗೋಡೆಗಳ ನಿರ್ಮಾಣದ ರೀತಿ ಅವುಗಳ ಹೊರಬದಿಯಲ್ಲಿ ಕೆತ್ತಲಾದ ಆಕಾರ, ಗೋಡೆಯ ಮೇಲೆ ಇರುವ ರಕ್ಷಣಾ ಕಟಾಂಜನದ ಸ್ವರೂಪದಿಂದ ಆಯಾಯ ಕಾಲದ ವಿವಿಧ ಭಾಗಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಉದಾಹರಣೆಗೆ ಗೋಡೆಗಳಲ್ಲಿ ಗಾರೆಯ ಉಪಯೋಗ ಮೇಲಿನ ರಕ್ಷಣಾ ಕಟಾಂಜನ– ಇವು ಹೈದರ್, ಟಿಪ್ಪು ಸುಲ್ತಾನರ ಕಾಲದಲ್ಲಿ ಕಟ್ಟಿಸಿದ ಭಾಗಗಳಾಗಿದ್ದು ವೈಶಿಷ್ಟ್ಯಪೂರ್ಣವಾಗಿವೆ.[೩೩]

**ಶೈವ ಗುಹಾಲಯ :**

ಬಾದಾಮಿಯಲ್ಲಿರುವ ಚಾಲುಕ್ಯರ ಕಾಲದ ನಾಲ್ಕು ಗುಹಾಲಯಗಳಲ್ಲಿ ಇದು ಮೊದಲನೆಯದು. ಇದರ ಕಾಲ ಸುಮಾರು ಕ್ರಿ.ಶ. ೬ನೆಯ ಶತಮಾನದ ಮಧ್ಯಾವಧಿ. ಉತ್ತರಕ್ಕೆ ಮುಖ ಮಾಡಿರುವ ಈ ಗುಹಾಲಯದ ಮುಂಭಾಗದಲ್ಲಿ 'ಎಲ್' ಆಕೃತಿಯ ಅಂಗಳವಿದೆ.[೩೪] ತೆರೆದ ಮುಖಮಂಟಪ, ಎಂಟು ಕಂಭಗಳುಳ್ಳ ಸಭಾಮಂಟಪ ಮತ್ತು ಆದರ ಹಿಂಭಾಗದ ಗೋಡೆಯ ಮಧ್ಯದಲ್ಲಿ ಕೊರೆದು ರೂಪಿಸಿರುವ ಶಿವಲಿಂಗವಿದೆ. ಸಭಾಮಂಟಪದಲ್ಲಿರುವ ನಂತರ ತಂದಿರಿಸಲಾಗಿರುವ ಬೃಹತ್ ನಂದಿಯೂ, ಗರ್ಭಗೃಹದಲ್ಲಿ ಹುಟ್ಟುಗಲ್ಲಿನಲ್ಲಿಯೇ ಕೊರೆದು ರೂಪಿಸಿರುವ ಶಿವಲಿಂಗವಿದೆ. ಸಭಾಮಂಟಪದಲ್ಲಿರುವ ನಂತರ ತಂದಿರಿಸಲಾಗಿರುವ ಬೃಹತ್ ನಂದಿ ವಿಗ್ರಹವು ಗರ್ಭಗೃಹದಲ್ಲಿರುವ ಶಿವಲಿಂಗದ ಕಡೆಗೆ ನೋಡುತ್ತಿದೆ. ಗುಹಾಲಯದ ಪಶ್ಚಿಮ ಪಾರ್ಶ್ವದಲ್ಲಿ ಮೂಲ ಬಂಡೆಯು ಮುಂಚಾಚಿದ್ದು, ಆದರ ಪೂರ್ವ ಮುಖದಲ್ಲಿ ಚಿಕ್ಕ ಗುಹೆಯನ್ನು ಕೊರೆದಿದೆ. ಈ ಚಿಕ್ಕ ಗುಹೆಯು ಬಂಡೆಯ ಚಾಚಿದ ಮುಖದಲ್ಲಿ ೧೮ ಕೈಗಳುಳ್ಳ ಅಪೂರ್ವ 'ನಟರಾಜ' ಶಿವನ ಉಬ್ಬುಶಿಲ್ಪವಿದೆ. ಭರತನಾಟ್ಯದ ೯ ಕರಣಗಳನ್ನು ಇದು ಪ್ರದರ್ಶಿಸುತ್ತಿದೆ ಎಂದು ಹೇಳಲಾಗಿದೆ. ವಿವಿಧ ಭಂಗಿ ಮತ್ತು ಚಟುವಟಿಕೆಗಳಲ್ಲಿರುವ ಕುಬ್ಜಗಣರ ಶಿಲ್ಪಪಟ್ಟಿಕೆಗಳು ಗುಹಾಲಯದ ಅಧಿಷ್ಠಾನವನ್ನು

ಅಲಂಕರಿಸಿವೆ. ಚಿಕ್ಕ ಗುಹೆಯೊಳಗಿನ ಗೋಡೆಗಳಲ್ಲಿ ದುರ್ಗಾ, ಮಹಿಷಮರ್ದಿನಿ, ಮಯೂರವಾಹನ, ಕಾರ್ತಿಕೇಯ ಹಾಗೂ ಕುಳಿತ ದ್ವಿಭುಜ ಗಣೇಶನ ಶಿಲ್ಪಗಳಿವೆ. ಮುಖ್ಯ ಗುಹೆಯ ಮುಂದೆ ಪೂರ್ವಭಾಗದಲ್ಲಿ ಹಸನ್ಮುಖಿಯಾಗಿರುವ ದ್ವಿಭುಜ ಶೈವ ದ್ವಾರಪಾಲಕನಿದ್ದಾನೆ. ಇವನ ಕೆಳಗಡೆ ಎರಡು ದೇಹ ಒಂದೇ ಮುಖವುಳ್ಳ ಗಜ–ವೃಷಭ ಶಿಲ್ಪ ನೋಡಲು ಕೂತೂಹಲಕಾರಿಯಾಗಿದೆ. ಮೇಲ್ಗಡೆ ಶಿವಪಾರ್ವತಿಯರು ನಂದಿಯನ್ನೇರಿ ಹೊರಡುತ್ತಿರುವ ಶಿಲ್ಪವಿದೆ. ಮುಖಮಂಟಪದಲ್ಲಿ ಪೂರ್ವ ಪಾರ್ಶ್ವದಲ್ಲಿ ಲಕ್ಷ್ಮೀ ಮತ್ತು ಪಾರ್ವತಿ ಸಹಿತ ಹರಿಹರ ಹಾಗೂ ಪಶ್ಚಿಮ ಪಾರ್ಶ್ವದಲ್ಲಿ ಭೃಂಗಿ, ನಂದಿ ಮತ್ತು ಆಭರಣದ ಪೆಟ್ಟಿಗೆಯನ್ನು ಹಿಡಿದಿರುವ ಸ್ತ್ರೀಯೊಂದಿಗೆ ನಿಂತಿರುವ ಅರ್ಧನಾರೀಶ್ವರನ ದೊಡ್ಡಗಾತ್ರದ ಸುಂದರ ಉಬ್ಬುಶಿಲ್ಪಗಳಿವೆ. ಶಬ್ಧಗಣಗಳ ಪಟ್ಟಿಕೆಯನ್ನು ಇವುಗಳ ಕೆಳಗೂ ಕಾಣಬಹುದು. ಮುಖಮಂಟಪದ ಭಿತ್ತಿನಲ್ಲಿ ಸುಂದರವಾದ ನಾಗರಾಜ ಶಿಲ್ಪವಿದೆ. ಅದರ ಅಕ್ಕಪಕ್ಕದಲ್ಲಿ ಆಕಾಶದಲ್ಲಿ ತೇಲುತ್ತ ಸಾಗುವ ವಿದ್ಯಾಧರ ದಂಪತಿಗಳಿದ್ದಾರೆ.

ಮುಖಮಂಟಪವನ್ನು ಸಭಾಮಂಟಪದಿಂದ ಬೇರ್ಪಡಿಸುವ ಕಂಬಗಳು ಹೂ ಕಂಬಗಳಂತೆ ಅಲಂಕೃತವಾಗಿದ್ದು, ಹಿಂಬಿನಂತಹ ಬೋಧಿಗೆಯನ್ನು ಹೊತ್ತಿವೆ. ಮುತ್ತಿನ ಹಾರಗಳ, ಹಂಸಗಳ ಸಾಲುಗಳ ಅಲಂಕಾರವಷ್ಟೇ ಅಲ್ಲದೆ ಕಂಬಗಳ ಮುಖಗಳಲ್ಲಿ ನರಸಿಂಹ, ಗಣೇಶ ಮುಂತಾದ ಶಿಲ್ಪಗಳಿವೆ. ಮುಖಮಂಟಪದ ತೊಲೆಯ ಒಳಮುಖದಲ್ಲಿ 'ಪಾರ್ವತಿ ಕಲ್ಯಾಣದ' ಶಿಲ್ಪ ಪಟ್ಟಿಕೆಯಿದೆ. ಭಾರವಾಹಕ ಕುಬ್ಜರು ಮುಖಮಂಟಪದ ಕಪೋತಕ್ಕೆ ಆಧಾರವಾಗಿದ್ದಾರೆ, ಈ ಗುಹೆಯ ನಿರ್ಮಾಣದಲ್ಲಿ ಭಾಗವಹಿಸಿದ ಅಯ್ಯಸ್ವಾಮಿ ಕಲ್ಕುಟ್ಟಿ ಮತ್ತು ದೋಣಸ್ವಾಮಿ ಎಂಬ ಶಿಲ್ಪಿಗಳ ಹೆಸರುಗಳು ಗುಹೆಯ ಮುಖದ ಮೇಲ್ಭಾಗದಲ್ಲಿವೆ. ಪ್ರೇಕ್ಷಕರನ್ನು ತೆರೆದ ಕಣ್ಣುಗಳಿಂದ ನೋಡುತ್ತಿರುವ, ಸ್ಪಷ್ಟ ಹುಬ್ಬುಳ್ಳ, ಹಸನ್ಮುಖಿಗಳಾಗಿರುವ ಕಂಬ ಮೈಕಟ್ಟಿನ ದೇವತೆಗಳ ಶಿಲ್ಪಗಳು ವಿಶಿಷ್ಟ ಶೈಲಿಯಲ್ಲಿದ್ದು, ಎರಡನೆಯ ಗುಹಾಲಯದ ಶಿಲ್ಪಗಳಿಗಿಂತ ಭಿನ್ನವಾಗಿವೆ.

**ವೈಷ್ಣವ ಗುಹಾಲಯ :**

ಗಾತ್ರದಲ್ಲಿ ಮೊದಲನೆಯ ಗುಹಾಲಯಕ್ಕಿಂತ ಚಿಕ್ಕದಾದರೂ ವಿಷ್ಣುವಿಗೆ ಮುಡುಪಾಗಿರುವ ಆಕರ್ಷಕ ಶಿಲ್ಪಗಳುಳ್ಳ ಗುಹಾಲಯವಿದು. ಇಕ್ಕೆಲಗಳಲ್ಲಿ ಕಣ್ಣು ಮುಚ್ಚಿಕೊಂಡು, ಅಂತರ್ಮುಖಿಗಳಾಗಿ ಧ್ಯಾನಮಗ್ನರಾಗಿ ನಿಂತಿರುವ ದ್ವಾರಪಾಲಕರಿದ್ದಾರೆ. ಮುಖಮಂಟಪ, ಸಭಾಮಂಟಪ ಮತ್ತು ಅದರ ಹಿಂಗೋಡೆಯಲ್ಲಿ ಕೊರೆದಿರುವ ಚಿಕ್ಕ

ಗರ್ಭಗೃಹ ಇದರ ಭಾಗಗಳು, ಗರ್ಭಗೃಹದಲ್ಲಿ ಹುಟ್ಟುಗಲ್ಲಿನಲ್ಲಿ ನಿರ್ಮಿಸಿರುವ ಆಯತಾಕಾರದ ಪೀಠವಿದೆ. ಮೂಲತಃ ಪ್ರತಿಷ್ಠಾಪಿಸಲಾಗಿದ್ದ ವಿಷ್ಣು ವಿಗ್ರಹ ಇಂದು ಕಂಡು ಬರುವುದಿಲ್ಲ. ಗರ್ಭಗೃಹದ ದ್ವಾರಬಂಧದ ಮೇಲ್ಗಡೆ ಉತ್ತರ ಭಾರತದ ಶೈಲಿಯ ನಾಗರ ಶಿಖರಗಳ ಮಾದರಿಗಳಿವೆ.[೩೫] ಮುಖಮಂಟಪದ ಪಾರ್ಶ್ವಗೋಡೆಗಳಲ್ಲಿ ವಿಷ್ಣುವಿನ ವರಾಹ ಮತ್ತು ವಾಮನ ಅವತಾರದ ದೊಡ್ಡ ಶಿಲ್ಪಗಳಿವೆ. ವರಾಹನು ಪಾತಾಳದಿಂದ ಭೂದೇವಿಯನ್ನು ಎತ್ತುತ್ತಿರುವ ದೃಶ್ಯ ಅದ್ಭುತವಾಗಿ ಚಿತ್ರಿಸಿದ್ದಾರೆ. ವಾಮನ ತ್ರಿವಿಕ್ರಮನ ವಿಗ್ರಹವು ಕಥಾನಿರೂಪಕ ಶಿಲ್ಪ ರೀತಿಯಲ್ಲಿದೆ. ತ್ರಿವಿಕ್ರಮನು ಎತ್ತಿರುವ ಎಡಗಾಲ ಕೆಳಗೆ ಬಲಿಚಕ್ರವರ್ತಿಯು ವಾಮನನಿಗೆ ದಾನ ಕೊಡುತ್ತಿರುವ ದೃಶ್ಯದಲ್ಲಿ ಶುಕ್ರಚಾರ್ಯನು ಬಲಿಚಕ್ರವರ್ತಿಯ ಪರವಾಗಿ ದಾನ ನೀಡುತ್ತಿರುವಂತೆ ತೋರಿಸಿರುವುದು ಗಮನಾರ್ಹ. ದಾನವನ್ನು ಸ್ವೀಕರಿಸಿದ ವಾಮನ ಆಕಾಶದೆತ್ತರಕ್ಕೆ ತ್ರಿವಿಕ್ರಮನಾಗಿ ಬೆಳೆದು ತನ್ನ ನಿಜರೂಪವನ್ನು ಪ್ರದರ್ಶಿಸಿದ್ದಾನೆ. ಎಂಟು ಕೈಗಳುಳ್ಳ ತ್ರಿವಿಕ್ರಮ ಖಡ್ಗ, ಬಾಣ, ಗದೆ, ಚಕ್ರ, ಶಂಖ, ಬಿಲ್ಲು, ಡಾಲನ್ನು ಹಿಡಿದು ಎಡಗೈಯನ್ನು ವಿಕಟನಗು ಬೀರುತ್ತಿರುವ ರಾಹುವಿನ ಮುಖದೆಡೆಗೆ ತೋರಿಸುತ್ತಿದ್ದಾನೆ. ಎಡಗಾಲನ್ನೆತ್ತಿ ಆಕಾಶವನ್ನ ತುಳಿಯುತ್ತಿರುವ ತ್ರಿವಿಕ್ರಮನ ಬಲಗಾಲನ್ನು ಬಲಿಯ ಮಗ ನಮುಚಿಯು ಗಟ್ಟಿಯಾಗಿ ಹಿಡಿದುಕೊಂಡು ತಡೆಯೊಡ್ಡಲು ವ್ಯರ್ಥ ಪ್ರಯತ್ನ ಮಾಡುತ್ತಿದ್ದಾನೆ. ಮೇಲ್ಗಡೆ ಗರುಡ ತ್ರಿವಿಕ್ರಮನ ವಿಜಯವನ್ನು ಸಾರುತ್ತಿದ್ದಾನೆ. ನಿರೂಪಣೆಯಲ್ಲಿ ನಾಟಕೀಯತೆಯನ್ನು ತೋರಿಸುವುದರಲ್ಲಿ ಶಿಲ್ಪಿಯ ಕೈಚಳಕ ಕಾಣುತ್ತದೆ.[೩೬] ಈ ಶಿಲ್ಪದ ಪೀಠದಲ್ಲಿ ವಾದ್ಯ–ನೃತ್ಯಗಳಲ್ಲಿ ತಲ್ಲೀನರಾಗಿರುವ ಗಣಗಳ ಆಕರ್ಷಕ ಪಟ್ಟಿಯನ್ನು ಕಾಣಬಹುದು.

ಮುಖಮಂಟಪದ ಚಾವಣಿಯ ಮಧ್ಯದಲ್ಲಿ ಮತ್ಸ್ಯಚಕ್ರ ಮತ್ತು ಅದರ ಇಕ್ಕೆಲಗಳಲ್ಲಿ ಸ್ವಸ್ತಿಕ ಬಂಧ ಮುಂತಾದ ಸುಂದರ ವಿನ್ಯಾಸಗಳಿವೆ. ಕಂಬಗಳು ವಿವಿಧ ರೀತಿಯಲ್ಲಿ ಕಾಣಸಿಗುತ್ತವೆ. ಮುಖಮಂಟಪದ ಜಂತಿಗಳ ಮುಖದಲ್ಲಿ ಸಮುದ್ರಮಂಥನ, ಕೃಷ್ಣಚರಿತೆ, ಮುಂತಾದ ಕಥಾನಿರೂಪಕ ಉಬ್ಬುಶಿಲ್ಪಗಳಿವೆ. ಸಭಾಮಂಟಪದ ಕಂಬಗಳ ಮೇಲೆ ಲಕುಲೀಶ, ಕಾರ್ತಿಕೇಯ, ಬ್ರಹ್ಮ, ಶಕ್ತಿ, ಮಿಥುನ, ವಿದ್ಯಾಧರ, ದಂಪತಿಗಳು, ಮುತ್ತಿನ ಹಾರಗಳು ಇತ್ಯಾದಿ ಅಲಂಕಾರ ಶಿಲ್ಪಗಳಿವೆ. ವಚ್ಯ ದುಟ್ಟುಜ, ಬುರು, ಅಳಗೆರೆಯ, ಶಿವಪುತ್ರ ಗಂಗೋಸ್ವಾಮಿ, ಭರತಚಂದ್ರ, ಭಮಚಂದ್ರ ಮುಂತಾದ ಹಲವು ಶಿಲ್ಪಿಗಳ ಹೆಸರುಗಳು ಗುಹೆಯ ಪರಿಸರದಲ್ಲಿವೆ. ಇದರ ಕಾಲ ೬ನೆಯ ಶತಮಾನದ ಉತ್ತರಾರ್ಧ ಎಂದು ಗುರ್ತಿಸಲಾಗಿದೆ.

**ಬೌದ್ಧರ ನೈಸರ್ಗಿಕ ಗುಹೆ :**

ಎರಡನೆಯ ಗುಹೆಯಿಂದ ಮೂರನೆಯ ಗುಹೆಗೆ ಸಾಗುವಾಗ ನಮ್ಮ ಬಲಕ್ಕೆ ಸ್ವಲ್ಪ ಎತ್ತರದಲ್ಲಿ ನೈಸರ್ಗಿಕ ಗುಹೆಯಿದೆ. ಇದರ ಗೋಡೆಯಲ್ಲಿ ಮೂಲತಃ ಕುಳಿತ ಬುದ್ಧನ ಉಬ್ಬುಶಿಲ್ಪವಿತ್ತು.[೩೭] ಈಗ ಅದು ಭಗ್ನವಾಗಿದೆ. ಅದರ ಪಕ್ಕದಲ್ಲಿ ಅಷ್ಟಭಯಗಳಿಂದ ಸುತ್ತುವರಿಯಲ್ಪಟ್ಟಿರುವ ಪದ್ಮಪಾಣಿ ಬೋಧಿಸತ್ವನ ಉಬ್ಬುಶಿಲ್ಪವಿದೆ. ಬೋಧಿಸತ್ವವನ ಬಲಗಡೆ ನಮಸಕ್ಕರಿಸುತ್ತ ಕುಳಿತಿರುವ ಬೌದ್ಧ ಭಿಕ್ಷುವಿದ್ದಾನೆ. ಮಹಾಯಾನ ಸಂಪ್ರದಾಯದ ಬೌದ್ಧ ಅನುಯಾಯಿಗಳು ಇಲ್ಲಿದ್ದರೆಂಬುದರ ಕುರುಹು ಇದಾಗಿದೆ. ಇದರ ಕಾಲ ಸುಮಾರು ಕ್ರಿ.ಶ. ೬–೭ನೆ ಶತಮಾನವಾಗಿದೆ.

**ವೈಷ್ಣವ ಗುಹಾಲಯ :**

ಇಲ್ಲಿರುವ ಮೂರನೆಯ ಹಾಗೂ ಅತ್ಯಂತ ದೊಡ್ಡ ಗುಹಾಲಯ ಇದಾಗಿದೆ. ಇದನ್ನು ಮಂಗಳೇಶನು ತನ್ನ ಸಹೋದರನಾದ ಕೀರ್ತಿವರ್ಮನ ಸವಿನೆನಪಿಗಾಗಿ ನಿರ್ಮಿಸಿದ್ದಾನೆ. ಇದು ಗರ್ಭಗೃಹ, ಸಭಾಮಂಟಪ ಮತ್ತು ಮುಖಮಂಟಪವನ್ನು ಹೊಂದಿದೆ. ಮುಖಮಂಟಪದ ಪೂರ್ವಪಾರ್ಶ್ವದಲ್ಲಿ ಅಷ್ಟಭುಜ ವಿಷ್ಣುವಿನ ಬೃಹತ್ ಶಿಲ್ಪವಿದೆ. ವಿಷ್ಣು ತನ್ನ ಬಲಗೈಗಳಲ್ಲಿ ಖಡ್ಗ, ಗದೆ, ಬಾಣ, ಚಕ್ರವನ್ನು, ಎಡಗೈಗಳಲ್ಲಿ ಶಂಖ, ಬಿಲ್ಲನ್ನು ಧರಿಸಿ, ಕಟ್ಯಾವಲಂಬಿತ ಹಸ್ತನಾಗಿದ್ದಾನೆ. ಇದಕ್ಕೆ ಎದುರಾಗಿ ಪಶ್ಚಿಮ ಪಾರ್ಶ್ವದ ಭಿತ್ತಿಯಲ್ಲಿ ವಾಮನಾವತಾರ ನಿರೂಪಣೆಯ ಅದ್ಭುತ ಶಿಲ್ಪವಿದೆ. ಸಂಗೀತ, ವಾದ್ಯ, ನೃತ್ಯಗಳಲ್ಲಿ ತಲ್ಲೀನರಾಗಿರುವ ಗಣಗಳ ಮಧ್ಯದಲ್ಲಿ ವಿಷ್ಣು ಸರ್ಪದ ಮೇಲೆ ಅಸೀನನಾಗಿದ್ದಾನೆ. ಚತುರ್ಭುಜಧಾರಿಯಾಗಿದ್ದು, ಬಲಗೈಯಲ್ಲಿ ಫಲವನ್ನು ಹಿಡಿದು ಎಡಗೈನ್ನು ತೊಡೆಯ ಮೇಲಿರಿಸಿದ್ದಾನೆ. ಇವನ ಬಲಪಾರ್ಶ್ವದಲ್ಲಿ ಗರುಡ ಮತ್ತು ಎಡಪಾರ್ಶ್ವದಲ್ಲಿ ಲಕ್ಷ್ಮೀ ಆಸೀನರಾಗಿದ್ದಾರೆ. ಮಹಾಮಂಟಪವನ್ನು ಬೇರ್ಪಡಿಸಿರುವ ಚಾಚುಭಿತ್ತಿಯ ಉತ್ತರ ಮುಖದಲ್ಲಿ ಬೃಹದಾಕಾರದ ಭೂವರಾಹನ ಉಬ್ಬುಶಿಲ್ಪವಿದೆ.

ಮುಖಮಂಟಪದ ಪಶ್ಚಿಮ ಭಿತ್ತಿಯಲ್ಲಿ ಚತುರ್ಭುಜ ಸ್ಥಾನಿಕ ನರಸಿಂಹನ ಶಿಲ್ಪವಿದೆ. ಸಿಂಹಮುಖದ ಶಿರೋಭಾಗದಲ್ಲಿ ಅರಳಿದ ಪದ್ಮವಿದೆ. ಮೇಲ್ಭಾಗದಲ್ಲಿ ಎರಡು ಜೋಡಿ ವಿದ್ಯಾಧರ ದಂಪತಿಗಳು ತೇಲುತ್ತಿದ್ದಾರೆ.[೩೮] ನರಸಿಂಹನ ಪಕ್ಕದಲ್ಲಿರುವ ಚಾಚುಭಿತ್ತಿಯಲ್ಲಿ ಹರಿಹರನ ಶಿಲ್ಪವಿದೆ. ಈ ಗುಹಾಲಯದಲ್ಲಿ ಮನಸೂರೆಗೊಳ್ಳುವ ಇತರ ಶಿಲ್ಪಗಳೆಂದರೆ ಮದನಿಕಾ ವಿಗ್ರಹಗಳು. ಕಂಬಗಳ ಪೂರ್ವ ಮತ್ತು ಪಶ್ಚಿಮ ಪಾರ್ಶ್ವಗಳಲ್ಲಿ ಮಿಥುನ

ಶಿಲ್ಪಗಳಿವೆ. ಕಂಬಗಳ ದಕ್ಷಿಣ ಪಾರ್ಶ್ವದಲ್ಲಿರುವ ಅಪೂರ್ಣ ಮಿಥುನ ಶಿಲ್ಪಗಳಲ್ಲಿ ಪ್ರಿಯಕರನಿಗಾಗಿ ಹಾತೊರೆಯುತ್ತ ನಿಂತಿರುವ ನಾಯಕಿಯರು ರೂಪಿತರಾಗಿದ್ದಾರೆ. ಕಪೋತದಲ್ಲಿ ಗರುಡ ಮತ್ತು ಹಾರುತ್ತಿರುವ ವಿದ್ಯಾಧರ ದಂಪತಿಗಳ ಶಿಲ್ಪಗಳಿವೆ. ಕಪೋತದ ಉದ್ದಕ್ಕೂ ವರ್ಣಚಿತ್ರಗಳಿದ್ದು, ಈಗ ಹಾಳಾಗಿವೆ. ಮುಖಮಂಟಪದ ತೊಲೆಗಳ ಒಳ ಪಾರ್ಶ್ವಗಳುದ್ದಕ್ಕೂ ಮಹಾಭಾರತ, ಹರಿವಂಶ, ವಿಷ್ಣುಪುರಾಣಗಳಿಂದ ಆಯ್ದ ಪೌರಾಣಿಕ ಕಥಾನಿರೂಪಣ ಶಿಲ್ಪಿಪಟ್ಟಿಕೆಗಳಿವೆ.

**ಜೈನ ಗುಹಾಲಯ :**

ಇಲ್ಲಿನ ಗುಹಾಲಯಗಳಲ್ಲಿ ಚಿಕ್ಕ ಗುಹಾಲಯ ಅಪೂರ್ಣವಾಗಿದೆ. ಕ್ರಿ.ಶ. ೭ನೆಯ ಶತಮಾನದ ಕಾಲಕ್ಕೆ ಸೇರಿದ್ದಾಗಿದೆ. ಮೊದಲು ಇದನ್ನು ತಲುಪಲು ಪೂರ್ವದಿಕ್ಕಿನಿಂದ ಕಡಿದಾದ ಹಾದಿಯಿತ್ತು. ಚಿಕ್ಕ ಮುಖಮಂಟಪ, ಅಂತರಾಳದಂತಹ ಒಳಮಂಟಪ ಹಾಗೂ ಅದರ ಹಿಂದಿನ ಗೋಡೆಯಲ್ಲಿ ಸ್ವಲ್ಪ ಎತ್ತರದಲ್ಲಿ ಕೊರೆದಿರುವ ಗರ್ಭಗೃಹವಿದೆ. ಗರ್ಭಗೃಹದ ಹಿಂಭಾಗದಲ್ಲಿ ಸಿಂಹಾಸನದ ಮೇಲೆ ಕುಳಿತು ದಿವ್ಯಧ್ವನಿಯಿಂದ ಜಿನಶಾಸನವನ್ನು ಉಪದೇಶಿಸುವುದರಲ್ಲಿ ಮಗ್ನನಾಗಿರುವ ತೀರ್ಥಂಕರನ ಉಬ್ಬುಶಿಲ್ಪವಿದೆ. ಚಾಮರಧಾರಿ ಯಕ್ಷರು, ಚೈತ್ಯವೃಕ್ಷ, ಮುಕ್ಕೊಡೆ, ಪ್ರಭಾಮಂಡಲ ದೇವದುಂಧುಭಿ, ಪುಷ್ಪವೃಷ್ಟಿ ಎಂಬ ಪ್ರಾತಿಹಾರ್ಯಗಳನ್ನು ಶಿಲ್ಪಿ ಸ್ಪಷ್ಟವಾಗಿ ತೋರಿಸಿದ್ದಾನೆ. ವಿದ್ಯಾಧರಿಯರು ತಮಗೆ ತಡೆಯಾಗುತ್ತಿದ್ದ ಈ ಬಳ್ಳಿಗಳು ಬಳುಕುವುದರಿಂದ ಅವನ ತಪಸ್ಸು ಭಂಗವಾಗಬಾರದೆಂದು ಕೆಳಗಿಳಿದು ಬಂದು ಮಾಧವೀಲತೆಗಳನ್ನು ಬೇರ್ಪಡಿಸಿ ನಮಸ್ಕರಿಸುತ್ತಿದ್ದಾರೆ. ಇಡೀ ಭಾರತದಲ್ಲಿ ಇದು ಬಾಹುಬಲಿಗೆ ಸಂಬಂಧಿಸಿದಂತೆ ನಿರ್ಮಾಣವಾಗಿರುವ ಕಲ್ಲಿನ ಶಿಲ್ಪಗಳಲ್ಲಿ ಮೊದಲನೆಯದಾಗಿದೆ. ಬಾಹುಬಲಿಯ ಎದುರುಗಡೆಯ ಗೋಡೆಯಲ್ಲಿ ಪಾರ್ಶ್ವನಾಥ ತೀರ್ಥಂಕರನ ಉಬ್ಬುಶಿಲ್ಪವಿದೆ. ಇದು ಕಮಡೋಪಸರ್ಗದ ದೃಶ್ಯ. ಕೇವಲ ಜ್ಞಾನಕ್ಕಾಗಿ ಕಾಯೋತ್ಸರ್ಗ ಭಂಗಿಯಲ್ಲಿ ತಪೋಮಗ್ನವಾಗಿರುವ ಪಾರ್ಶ್ವನಾಥನಿಗೆ ಐದು ಹೆಡೆಯ ಧರಣೇಂದ್ರ ಯಕ್ಷನು ರಕ್ಷಣೆ ಒದಗಿಸಿದ್ದಾನೆ. ಅವನ ಬಲ ಪಕ್ಕದಲ್ಲಿ ಯಕ್ಷಿ ಪದ್ಮಾವತಿಯು ವಜ್ರ ಕೊಡೆಯನ್ನು ಎತ್ತಿ ಹಿಡಿದಿದ್ದಾಳೆ.[೩೯]

ಎಡ ಪಕ್ಕದ ಮೇಲಿನ ಮೂಲೆಯಲ್ಲಿ ಕಮಠ ಅಥವಾ ಸಂವರನೆಂಬ ವೈರಿಯು ಬೆಟ್ಟವನ್ನು ಪಾರ್ಶ್ವನಾಥನೆಡೆಗೆ ಎಸೆಯುತ್ತಿದ್ದಾನೆ. ಇದೇ ರೀತಿ ವಿವಿಧ ಉಪಸರ್ಗಗಳನ್ನೊಡ್ಡಿ ಪಾರ್ಶ್ವನಾಥನ ತಪೋಭಂಗ ಮಾಡಲು ಯತ್ನಿಸಿ ಕಮಠನು ಸೋತಿದ್ದಾನೆ. ಇದರಿಂದ

ಹತಾಶನಾಗಿ ಎಡಪಕ್ಕದಲ್ಲಿ ಪಾದದ ಬಳಿ ಪಾರ್ಶ್ವನಾಥನನ್ನು ಸ್ತುತಿಸುತ್ತ ಕುಳಿತಿದ್ದಾನೆ. ಈ ಗುಹಾಲಯದ ಅಂತರಾಳದ ಗೋಡೆಗಳಲ್ಲಿರುವ ತೀರ್ಥಂಕರ ಶಿಲ್ಪಗಳು ೧೦-೧೨ನೆಯ ಶತಮಾನದವು. ಗುಹೆಯ ಪ್ರವೇಶದ ಎಡಗೋಡೆಯಲ್ಲಿ ಕುಳಿತ ತೀರ್ಥಂಕರನ ಶಿಲ್ಪವಿದ್ದು, ಅವನ ಪಕ್ಕದಲ್ಲಿ ಒಬ್ಬ ಸ್ತ್ರೀ ಕೈಮುಗಿದು ಕುಳಿತಿರುವಂತೆ ತೋರಿಸಿದೆ. ಇದು ಜಿನ ಭಕ್ತಿ ಜಕ್ಕವ್ವೆಯು ತೀರ್ಥಂಕರನ ಸನ್ನಿಧಿಯಲ್ಲಿರುವ ಶಿಲ್ಪ. ಒಟ್ಟಾರೆಯಾಗಿ ಬಾದಾಮಿಯ ಗುಹಾಂತರ ದೇವಾಲಯಗಳು ನೋಡುಗರ ಕಣ್ಮನ ಸೆಳೆಯುವ ಕಲಾಕೃತಿಗಳಾಗಿವೆ.

**ಜಂಬುಲಿಂಗ ದೇವಾಲಯ :**

ಕ್ರಿ.ಶ. ೬೯೯ರಲ್ಲಿ ಬಾದಾಮಿಯಲ್ಲಿ ವಿಜಯಾದಿತ್ಯನ ತಾಯಿ ವಿನಯವತಿಯು ಈ ದೇವಾಲಯವನ್ನು ನಿರ್ಮಿಸಿ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಪ್ರತಿಷ್ಠಾಪಿಸಿದಳು.[೪೦] ಇಡೀ ದಕ್ಷಿಣ ಭಾರತದಲ್ಲಿಯೇ ಕಟ್ಟಡ ಶೈಲಿಯ ಪ್ರಥಮ ತ್ರಿಕೂಟ ದೇವಾಲಯ.[೪೧] ಇದರಲ್ಲಿ ಮೂರು ಗರ್ಭಗೃಹಗಳಿದ್ದು, ಇವು ಬೇರೆ ಬೇರೆ ದಿಕ್ಕಿಗೆ ಮುಖಮಾಡಿವೆ. ವಿಶಾಲವಾದ ಚೌಕಾಕಾರದ ಸಭಾಮಂಟಪವನ್ನು ಹೊಂದಿದ ಈ ದೇವಾಲಯದ ಮುಂಭಾಗದಲ್ಲಿ ಮುಖಮಂಟಪವಿದೆ. ನಂತರ ಕಾಲದಲ್ಲಿ ನಿರ್ಮಿಸಲಾದ ಹಲವು ತ್ರಿಕೂಟ ದೇವಾಲಯಗಳಿಗೆ ಬಾದಾಮಿಯ ಈ ಜಂಬುಲಿಂಗ ದೇವಾಲಯದ ತಲವಿನ್ಯಾಸವೇ ಮೂಲ ಮಾದರಿಯಾಯಿತು.

**ಕೆಳಗಿನ ಶಿವಾಲಯ :**

ಕೋಟೆಯನ್ನು ಇಳಿದು ಬರುವಾಗ ಎರಡನೆಯ ದ್ವಾರದ ಬಳಿ ಸ್ವಲ್ಪ ಹೊರಚಾಚಿಕೊಂಡಿರುವ ಬಂಡೆಗಳ ಚಿಕ್ಕ ಬಯಲಿನ ಕೊನೆಯಲ್ಲಿ ಕೆಳಗಣ ಶಿವಾಲಯವಿದೆ. ಮೂಲತಃ ಇದು ಒಳಪ್ರದಕ್ಷಿಣಾ ಪಥ ಹೊಂದಿರುವ ಸಾಂಧರ ದೇವಾಲಯ. ಈ ದೇವಾಲಯವು ಭಗ್ನಗೊಂಡಿದ್ದು, ಈಗ ಕೇವಲ ಗರ್ಭಗುಡಿಯಿರುವ ಭಾಗ ಮಾತ್ರ ಉಳಿದುಕೊಂಡಿದೆ. ಹೂ ಬಳ್ಳಿಗಳಿಂದ ಅಲಂಕೃತವಾಗಿರುವ ಸುಂದರ ದ್ವಾರಬಂಧದ ಕೆಳ ಭಾಗದಲ್ಲಿ ಉಬ್ಬುಗಣರಂತೆ ಕಾಣುವ ಶೂಲಧಾರಿ ದ್ವಾರಪಾಲಕರಿದ್ದಾರೆ. ಒಳಗಡೆ ದೀರ್ಘವೃತ್ತಾಕಾರದ ಪದ್ಮದಂತೆ ಕಾಣುವ ಪೀಠವಿದೆ. ಇಂತಹ ಪೀಠ ಇನ್ನಾವುದೇ ಚಾಲುಕ್ಯರ ದೇಗುಲದಲ್ಲಿ ಕಂಡುಬಂದಿಲ್ಲ. ಬಹುಶಃ ಬ್ರಹ್ಮ, ಕಾರ್ತಿಕೇಯ ಅಥವಾ ಗಣಪತಿಯ ವಿಗ್ರಹವನ್ನು ಇದರ ಮೇಲೆ ಪ್ರತಿಷ್ಠಾಪಿಸಲಾಗಿತ್ತು. ಗರ್ಭಗೃಹದ ಹೊರಗೋಡೆಯಿಂದ ಚಾಚಿಕೊಂಡಿರುವ ಜಂಟಿಯ ಮುಖದಲ್ಲಿ ವಿವಿಧ ಭಾವಭಂಗಿಯಲ್ಲಿರುವ ಕುಬ್ಜಗಣರ

ಶಿಲ್ಪಗಳಿವೆ. ಎರಡನೆಯ ತಳವು ಎತ್ತರವಾಗಿದ್ದು ಅದಕ್ಕೆ ನಾಸಿ, ಶಾಲಾ, ಕೂಟಗಳಿರುವ ಹಾರವಿದೆ. ಅದರ ಮೇಲೆ ನಾಲ್ಕು ಕೋನಗಳಲ್ಲಿ ಒಡೆದು ಕಾಣುವ ಕೂಟಗಳಿದ್ದು, ಅಷ್ಟಕೋನಾಕಾರದ ಗ್ರೀವವನ್ನು ಭಾಗಶಃ ಮರೆಮಾಡಿವೆ. ಗ್ರೀವದ ಮೇಲೆ ಅಷ್ಟಕೋನಾಕಾರದ ಶಿಖರವಿದೆ. ಅದರ ಮೇಲೆ ಈಗ ಅಮಲಕದಂತೆ ಕಾಣುವ ವಿಜಯನಗರ ಕಾಲದ ಲಕ್ಷಣಗಳಿರುವ ದಾಕ್ಷಿಣಾತ್ಯ ಸಂಪ್ರದಾಯದ ಈ ದ್ರಾವಿಡ ವಿಮಾನವು ಕ್ರಿ.ಶ. ಸು. ೭ನೆಯ ಶತಮಾನದ ಉತ್ತರಾರ್ಧದ್ದಿರಬೇಕು.[೪೨]

**ಮೇಲಿರುವ ಶಿವಾಲಯ :**

ಉತ್ತರದ ಕೋಟೆಯ ಒಳಗಡೆ ಮೆಟ್ಟಿಲುಗಳನ್ನೇರಿ ಬಂಡೆ ಬೆಟ್ಟದ ನೆತ್ತಿಯನ್ನು ತಲುಪಿದರೆ ಭಾಗಶಃ ಮೇಲಿನ ಶಿವಾಲಯವಿದೆ. ಗರ್ಭಗೃಹದ ಸುತ್ತಲೂ ಒಳಪ್ರದಕ್ಷಿಣಾಪಥವಿರುವ ದೇವಾಲಯದ ಸಭಾಮಂಟಪದ ದಕ್ಷಿಣಗೋಡೆ ಮಾತ್ರ ಉಳಿದಿದೆ. ಸಭಾಮಂಟಪದ ಕಂಬಗಳ, ಚಾವಣಿ ಹಾಗೂ ಮುಖಮಂಟಪ ಉಳಿದಿಲ್ಲ. ಗರ್ಭಗೃಹದ ದ್ವಾರದಲ್ಲಿ ಶಾಖೆಗಳಿದ್ದರೂ ಅಲಂಕಾರವಿಲ್ಲ. ಮೂಲತಃ ಒಳಗಡೆ ವಿಷ್ಣುವಿನ ವಿಗ್ರಹವಿದ್ದಿರಬೇಕು. ಅಧಿಷ್ಠಾನದಲ್ಲಿ ಉಪಾನ, ಜಗತಿ, ಗಳ ಮತ್ತು ಕಪೋತ ಮಡಿಕೆ ಭಾಗಗಳಿವೆ. ಮೊದಲ ತಳದ ಅಂಚಿನಗುಂಟ ಶಾಲಾ-ಕೂಟಗಳ ಹಾರವಿದೆ. ಗರ್ಭಗುಡಿಯ ಮೇಲೆ ಎರಡನೆಯ ತಳವು ಎತ್ತರವಾಗಿದ್ದು, ಅದಕ್ಕೆ ಹಾರವಿಲ್ಲ. ಅದರ ಮೇಲ್ಗಡೆ ಇನ್ನೊಂದು ಚಿಕ್ಕ ತಳವಿದ್ದು ಅದಕ್ಕೂ ಹಾರವಿಲ್ಲ. ಅದರ ಮೇಲೆ ಗ್ರೀವ ಮತ್ತು ಚೌಕಕಾರದ ನಾಲ್ಕು ಕಡೆ ಇಳಿಜಾರಾಗಿರುವ ಶಿಖರವಿದೆ. ಅದರ ಮೇಲಿರುವ ಕಲಶ ಬಿದ್ದು ಹೋಗಿದೆ. ದಾಕ್ಷಿಣಾತ್ಯ ವಾಸ್ತುಶೈಲಿಯಲ್ಲಿರುವ ನಾಗರ ವಿಮಾನದ ಲಕ್ಷಣಗಳು ಈ ದೇವಾಲಯದ ಪ್ರಾಚೀನತೆಯನ್ನು ಸೂಚಿಸುತ್ತವೆ.[೪೩] ಇಮ್ಮಡಿ ಪುಲಿಕೇಶಿಯವರೆಗಿನ ಅರಸರು ಪರಮಭಾಗವತರು ಅಂದರೆ ವಿಷ್ಣುಭಕ್ತರಾಗಿದ್ದರು. ಕೋಟೆಯಿಂದ ಸುತ್ತುವರಿಯಲ್ಪಟ್ಟು ಎತ್ತರದಲ್ಲಿರುವ ಈ ಗುಡಿಯು ಚಾಲುಕ್ಯ ಅರಸರ ಉಪಯೋಗಕ್ಕಾಗಿಯೇ ನಿರ್ಮಾಣವಾಗಿದೆ. ಇದರ ಕಾಲ ಸುಮಾರು ೭ನೆಯ ಶತಮಾನದ ಮಧ್ಯಭಾಗ.

ದಕ್ಷಿಣ ದಿಕ್ಕಿನ ಅಧಿಷ್ಠಾನದಲ್ಲಿ ರಾಮಾಯಣದ ಸೀತಾ ಅಪಹರಣ ಮತ್ತು ಕುಂಭಕರ್ಣನನ್ನು ನಿದ್ದೆಯಿಂದ ಏಳಿಸುತ್ತಿರುವ ಕಥಾ ನಿರೂಪಕ ಶಿಲ್ಪ ಪಟ್ಟಿಕೆಗಳಿವೆ. ಪಶ್ಚಿಮ ದಿಕ್ಕಿನ ಅಧಿಷ್ಠಾನದ ಗಳದಲ್ಲಿ ಮುಖ್ಯವಾಗಿ ಹರಿವಂಶದಿಂದ ಆಯ್ದ ಕೃಷ್ಣಚರಿತೆಯ ದೃಶ್ಯಗಳಿವೆ. ಉತ್ತರ ದಿಕ್ಕಿನ ಅಧಿಷ್ಠಾನಗಳ ಭಾಗದಲ್ಲಿ ವಿವಿಧ ಹಾವಭಾವಗಳಲ್ಲಿರುವ

ಕುಬ್ಜಗಣರ ಶಿಲ್ಪಗಳಿವೆ. ದೇವಾಲಯದ ದಕ್ಷಿಣ ಭಿತ್ತಿಯಲ್ಲಿ ಕುಡ್ಯಸ್ತಂಭಗಳಿವೆಯಲ್ಲದೆ, ದೇವಕೋಷ್ಠದಲ್ಲಿ ಗೋವರ್ಧನ ಪರ್ವತವನ್ನೆತ್ತಿರುವ ಕೃಷ್ಣನ ಸುಂದರ ಉಬ್ಬುಶಿಲ್ಪವಿದೆ. ಗೋಕುಲದ ಜನ ಚಿಂತೆಯಿಲ್ಲದೆ ತಮ್ಮ ದೈನಂದಿನ ಕಾರ್ಯಗಳಲ್ಲಿ ಮಗ್ನರಾಗಿರುವುದನ್ನು ಇದರಲ್ಲಿ ಮಾರ್ಮಿಕವಾಗಿ ತೋರಿಸಲಾಗಿದೆ. ಅದರಂತೆ ಪಶ್ಚಿಮ ಗೋಡೆಯಲ್ಲಿ ಕಾಳಿಯ ನಾಗನನ್ನು ದಂಡಿಸುತ್ತಿರುವ ಕೃಷ್ಣನ ಉಬ್ಬುಶಿಲ್ಪವಿದೆ. ಉತ್ತರ ಗೋಡೆಯಲ್ಲಿ ಹಿರಣ್ಯಕಶಿಪುವನ್ನು ದಂಡಿಸುತ್ತಿರುವ ಉಗ್ರನರಸಿಂಹನ ವಿಶಿಷ್ಟ ಉಬ್ಬುಶಿಲ್ಪವಿದೆ. ಹಿರಣ್ಯಕಶಿಪುವನ್ನು ನಾಲ್ಕು ಬಾರಿ ತೋರಿಸಿದ್ದು ಅವನು ನರಸಿಂಹನ ಮೇಲೆ ಪ್ರಹಾರ ಮಾಡುವುದಕ್ಕೆ ಇಲ್ಲವೆ ಅವನಿಂದ ತಪ್ಪಿಸಿಕೊಳ್ಳಲು ವ್ಯರ್ಥ ಪ್ರಯತ್ನ ಮಾಡುತ್ತಿದ್ದಾನೆ. ಕೊನೆಯಲ್ಲಿ ನರಸಿಂಹನು ಹಿರಣ್ಯಕಶಿಪುನನ್ನು ತೊಡೆಯ ಮೇಲಿರಿಸಿ ಹೊಟ್ಟೆಯನ್ನು ಸೀಳುತ್ತಿರುವಂತೆ ತೋರಿಸಿರುವ ದೃಶ್ಯ ನಾಟಕೀಯವಾಗಿ ಮೂಡಿದೆ. ನೂರಾರು ವರ್ಷಗಳ ಬಿಸಿಲು, ಮಳೆ, ಗಾಳಿಗೆ ಸತತವಾಗಿ ಈ ಶಿಲ್ಪಗಳು ತೆರೆದುಕೊಂಡಿವೆ.

**ಮಾಲಗಿತ್ತಿ ಶಿವಾಲಯ :**

ಬಾದಾಮಿ ಬಸ್ ನಿಲ್ದಾಣದ ಎದುರು ಉತ್ತರ ಬೆಟ್ಟದ ಪಶ್ಚಿಮ ಪಾರ್ಶ್ವದಲ್ಲಿ ಚಾಚಿಕೊಂಡಿರುವ ಎತ್ತರವಾದ ಬಂಡೆಯ ಮೇಲೆ ಅತ್ಯಾಶ್ಚರ್ಯಕರವಾಗಿ ನಿರ್ಮಿಸಲಾಗಿರುವ ಮಾಲಗಿತ್ತಿ ಶಿವಾಲಯವು ಉತ್ತಮ ಸ್ಥಿತಿಯಲ್ಲಿರುವ ದೇವಾಲಯವಾಗಿದೆ. ಕ್ರಿ.ಶ. ೭ನೆಯ ಶತಮಾನದ ಪೂರ್ವಾರ್ಧದ ಕಾಲಮಾನದ ಪೂರ್ವಾಭಿಮುಖವಾಗಿ ಈ ದೇವಾಲಯದಲ್ಲಿ ತೆರೆದ ಮುಖಮಂಟಪ, ಆಯತಾಕಾರದ ಸಭಾಮಂಟಪ, ಚಿಕ್ಕ ಅಂತರಾಳ ಹಾಗೂ ಗರ್ಭಗೃಹಗಳಿವೆ. ಸಭಾಮಂಟಪದಲ್ಲಿ ತರಂಗ ಬೋದಿಗೆಗಳನ್ನು ಹೊತ್ತುಕೊಂಡಿರುವ ಸರಳ ಚೌಕ ಕಂಬಗಳಿದ್ದು, ಚಾವಣಿಯ ಮಧ್ಯದಲ್ಲಿ ಗರುಡವಾಹನ ವಿಷ್ಣುವಿನ ಶಿಲ್ಪವಿದೆ. ಅಂತರಾಳದಲ್ಲಿ ಗರ್ಭಗೃಹದ ದ್ವಾರದ ಬಲಕ್ಕಿರುವ ಸ್ಥಳದಲ್ಲಿ ಸೂರ್ಯನು ಛಾಯಾದೇವಿಯ ಕೂದಲನ್ನು ಹಿಡಿದು ದಂಡಿಸುತ್ತಿರುವ ವಿಶಿಷ್ಟ ಪೌರಾಣಿಕ ಶಿಲ್ಪವಿದೆ.[೪೪] ಗರ್ಭಗೃಹದ ದ್ವಾರಬಂಧದಲ್ಲಿ ವಿವಿಧ ಅಲಂಕೃತ ಪಟ್ಟಿಕೆಗಳಿದ್ದು, ಅವುಗಳಲ್ಲಿ ನಾಗಶಾಖೆ ಮತ್ತು ಲಾಲಟದಲ್ಲಿ ಅವುಗಳನ್ನು ಹಿಡಿದುಕೊಂಡಿರುವ ಗರುಡನಿರುವುದು ಹೊಸ ಲಕ್ಷಣವಾಗಿದೆ. ಮುಂದೆ ಈ ಗರುಡ-ನಾಗಶಾಖೆಯು ಚಾಲುಕ್ಯರ ಎಲ್ಲ ಪ್ರಮುಖ ದೇವಾಲಯಗಳಲ್ಲಿಯೂ ದ್ವಾರ ವಿನ್ಯಾಸದಲ್ಲಿ ಕಂಡುಬರುತ್ತದೆ.

ಉಪಾನ, ಜಗತಿ, ಅಧೋಪದ್ಮ, ಕುಮುದ, ಗಳ, ಕಪೋತ, ವ್ಯಾಳಮಾಲಾ ಹಾಗೂ ಪದ್ಮವೇದಿಯನ್ನೊಳಗೊಂಡ ಎತ್ತರವಾದ ಅಧಿಷ್ಠಾನದ ಒಳಭಾಗದಲ್ಲಿ ವಿವಿಧ ಹಾವಭಾವ ಭಂಗಿಗಳಲ್ಲಿರುವ ಕುಬ್ಜಗಣ ಪಟ್ಟಿಕೆಗಳಿವೆ. ದೇವಾಲಯದ ವಿಮಾನಕ್ಕೆ ಮೂಲೆಗಳಲ್ಲಿ ಕರ್ಣಭದ್ರ ಹಾಗೂ ಮಧ್ಯದಲ್ಲಿ ಸುಭದ್ರ ಮುಂಬಣೆಗಳಿವೆ. ಸಭಾಮಂಟಪದ ಉತ್ತರ ಹಾಗೂ ದಕ್ಷಿಣ ಗೋಡೆಗಳಲ್ಲಿ ಉತ್ತಮವಾದ ಶಿಲ್ಪ ಪಟ್ಟಿಕೆಗಳಿದ್ದು, ಶೈವ ಹಾಗೂ ವೈಷ್ಣವ ಶಿಲ್ಪಗಳಿವೆ. ಈ ದಾಕ್ಷಿಣಾತ್ಯ ಸ್ವರೂಪದ ದೇವಾಲಯದಲ್ಲಿ ಬಾದಾಮಿ ಚಾಲುಕ್ಯರ ವಿಶೇಷ ಮಾದರಿಯ ಶಿಲ್ಪಗಳಿರುವುದು ಕುತೂಹಲಕಾರಿಯಾಗಿದೆ.

**ಭೂತನಾಥ ದೇವಾಲಯ :**

ಬಾದಾಮಿಯ ಅಗಸ್ತ್ಯತೀರ್ಥ ಹೊಂಡದ ದಂಡೆಯಲ್ಲಿ ಉತ್ತರ ಹಾಗೂ ಪೂರ್ವದ ದಡದಲ್ಲಿ ಈ ದೇವಾಲಯ ಸಮೂಹವಿದೆ. ಪೂರ್ವ ತಟದಲ್ಲಿರುವ ದೇವಾಲಯ ಪಶ್ಚಿಮಾಭಿಮುಖವಾಗಿದ್ದು, ಇದು ಚಾಲುಕ್ಯರ ಕಾಲದಲ್ಲಿ ಬಾದಾಮಿಯಲ್ಲಿ ನಿರ್ಮಿತವಾದ ದೇಗುಲದಲ್ಲಿ ಕೊನೆಯದು.[೪೫] ಇದರ ಮೂಲ ದೇವತೆ ಭೂತೇಶ್ವರ. ಈ ದೇವಾಲಯದಲ್ಲಿ ಮುಖಮಂಟಪ, ಸಭಾಮಂಟಪ, ಚಿಕ್ಕ ಅಂತರಾಳ ಹಾಗೂ ಗರ್ಭಗೃಹಗಳಿವೆ. ಈ ಭಾಗಗಳೆಲ್ಲ ಕ್ರಿ.ಶ. ೮ನೆಯ ಶತಮಾನದಲ್ಲಿ ನಿರ್ಮಾಣವಾಗಿದ್ದು.ಚೌಕ ಪೀಠದ ಮೇಲೆ ಲಿಂಗವಿದೆ. ಉಪಾನ, ಜಗತಿ, ತ್ರಿಪಟ್ಟ ಕುಮುದ, ಕಂಠ ಭಾಗಗಳಿರುವ ಕರ್ಣ ಮತ್ತು ಭದ್ರಗಳ ಮುಂಬಣೆಗಳಿವೆ. ಈ ದೇವಾಲಯದ ಪರಿಸರದಲ್ಲಿ ರಾಷ್ಟ್ರಕೂಟರ ಕಾಲದ ಕೆಲವು ಚಿಕ್ಕಗುಡಿಗಳಿವೆ.

ಭೂತನಾಥ ದೇವಾಲಯದ ಉತ್ತರಕ್ಕೆ ಇರುವ ಸಮೂಹದಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಿವೆ. ಇದರಲ್ಲಿ ದಕ್ಷಿಣಾಭಿಮುಖವಾಗಿರುವ ಮುಖ್ಯ ದೇವಾಲಯ ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪವನ್ನೊಳಗೊಂಡಿದೆ. ಅಧಿಷ್ಠಾನವು, ಅಲಂಕಾರರಹಿತವಾಗಿದ್ದು. ಭಿತ್ತಿ ಮತ್ತು ಕದಂಬನಾಗರ ಶೈಲಿಯ ಶಿಖರವಿದೆ. ಸುಖನಾಸಿಯ ಬಾಗಿಲುವಾಡದಲ್ಲಿ ಯೋಗನಾರಾಯಣನ ಶಿಲ್ಪವಿದೆ. ಈ ದೇವಾಲಯದ ಪೂರ್ವಕ್ಕೆ ಇರುವ ಇನ್ನೊಂದು ಗುಡಿಯಲ್ಲಿ ಮುಖಮಂಟಪ ಇಲ್ಲದಾಗಿದೆ. ಆದರೆ ಸಭಾಮಂಟಪದ ಮೇಲೆ ಚಾವಣಿಯ ಮೂಲೆಗಳಲ್ಲಿ ಮತ್ತು ಮಧ್ಯದಲ್ಲಿ ಚಿಕ್ಕ ಕದಂಬನಾಗರ ಶೈಲಿಯ ಶಿಖರಗಳಿರುವುದು ಇದರ

ವೈಶಿಷ್ಟ್ಯವಾಗಿದೆ. ಹಿಂಬದಿಯಲ್ಲಿರುವ ಎರಡೂ ಚಿಕ್ಕ ಗುಡಿಗಳು ಕದಂಬನಾಗರ ಶೈಲಿಯಲ್ಲಿದ್ದು, ಒಂದು ದ್ವಿಕೂಟಚಲವಾದ ದೇವಾಲಯವಾಗಿದೆ.

**ಎಲ್ಲಮ್ಮನ ಗುಡಿ :**

ಅಗಸ್ತ್ಯ ತೀರ್ಥದ ಪಶ್ಚಿಮ ದಂಡೆಯ ಮೇಲೆ ಪೂರ್ವಾಭಿಮುಖವಾಗಿ ನಿಂತಿರುವ ಎಲ್ಲಮ್ಮನ ಗುಡಿ ಮೂಲತಃ ಯೋಗೇಶ್ವರ ವಿಷ್ಣು ದೇವಾಲಯವಾಗಿತ್ತು. ಕ್ರಿ.ಶ. ೧೧೪೫ರಲ್ಲಿ ಪರಮಾನಂದದೇವನೆಂಬ ಯೋಗಿಯು ಇದನ್ನು ನಿರ್ಮಿಸಿದ್ದಾನೆ.[೪೬] ಈ ದೇವಾಲಯದ ಗರ್ಭಗೃಹ, ಅಂತರಾಳ ಮತ್ತು ಸುತ್ತಲೂ ಕಕ್ಷಾಸನವುಳ್ಳ ತೆರೆದ ಸಭಾಮಂಟಪವಿರುವ ದೇವಾಲಯದ ವಿಮಾನವು ದ್ರಾವಿಡ ಶೈಲಿಯಲ್ಲಿದೆ. ಅಂತರಾಳದ ಪ್ರವೇಶಕ್ಕೆ ಜಾಲಾಂಧರಗಳನ್ನು ಆಳವಡಿಸಲಾಗಿದೆ. ಸುಖನಾಸಿಯ ಬಾಗಿಲುವಾಡದಲ್ಲಿ ವಿಷ್ಣುವಿನ ಉಬ್ಬುಶಿಲ್ಪವಿದೆ. ಈ ಗುಡಿಯ ಹಿಂಬದಿಯಲ್ಲಿರುವ ದತ್ತಾತ್ರೇಯ ಗುಡಿಯಲ್ಲಿ ಕಲ್ಯಾಣದ ಚಾಲುಕ್ಯರ ಕಾಲದ ಸುಂದರ ದಾತ್ತಾತ್ರೇಯ, ವಿಗ್ರಹವಿದ್ದು,[೪೭] ಈ ಮೂರ್ತಿಯು ಮೂಲತಃ ಎಲ್ಲಮ್ಮನ ಗುಡಿಯ ಮೂಲವಿಗ್ರಹವಾಗಿದ್ದಿರಬಹುದು.

**ವಿರೂಪಾಕ್ಷ ದೇವಾಲಯ :**

ಜಂಬುಲಿಂಗ ದೇವಾಲಯ ಮುಂದುಗಡೆ ಸುಮಾರು ಕ್ರಿ.ಶ. ೧೧ನೆಯ ಶತಮಾನದ ಉತ್ತರಾರ್ಧದಲ್ಲಿ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ರಚಿತವಾಗಿರಬಹುದಾದ ಉತ್ತಮ ಸ್ಥಿತಿಯಲ್ಲಿರುವ ವಿರೂಪಾಕ್ಷ ದೇವಾಲಯವಿದೆ. ಗರ್ಭಗೃಹ ತೆರೆದ ಅಂತರಾಳ ಹಾಗೂ ಸಭಾಮಂಟಪವುಳ್ಳ ಈ ದೇವಾಲಯದ ಮುಖಮಂಟಪ ಉಳಿದಿಲ್ಲ. ಸಭಾಮಂಟಪದಲ್ಲಿ ಇಕ್ಕೆಲಗಳ ಗೋಡೆಯಲ್ಲಿ ದೇವಕೊಷ್ಠಗಳಿವೆ. ಇದರ ವಿಮಾನವು ದ್ರಾವಿಡ ಶೈಲಿಯಲ್ಲಿದೆ. ಸಭಾಮಂಟಪದ ಹೊರಗೋಡೆಯಲ್ಲಿ ಭದ್ರ–ಉಪಭದ್ರ–ಕರ್ಣಭದ್ರಗಳ ಚಾಚುಗಳಿದ್ದು, ಸಲಿಲಾಂತರ ಅಥವಾ ಹಿಂಬಣಿಗಳಿಲ್ಲ ದ್ರಾವಿಡ ಮತ್ತು ನಾಗರ ಸ್ತಂಭಕೂಟಗಳಿವೆ. ವಿಮಾನದ ಶಿಖರವು ನಾಲ್ಕು ತಳಗಳಿಂದಾಗಿದೆ.

ಬಾದಾಮಿಯು ವಾಸ್ತು ಶಿಲ್ಪಕಲೆಯನ್ನು ತನ್ನ ಮಡಿಲಿನಲ್ಲಿ ಹೊಂದಿದ್ದು ಇವುಗಳ ವಾಸ್ತುಶಿಲ್ಪವನ್ನು ಮುಂದಿನ ಪೀಳಿಗೆಗೆ ಉಳಿಸಿಕೊಂಡು ಹೋಗುವ ದೃಷ್ಟಿಯಿಂದ ಹಾಗೂ ಇಲ್ಲಿನ ಸ್ಮಾರಕಗಳ ಸಂರಕ್ಷಣೆಗೆ ಒಂದು ನಿರ್ದಿಷ್ಟವಾದ ಪ್ರೋತ್ಸಾಹ ಬೇಕಾಗಿರುವ ಹಿನ್ನೆಲೆಯಲ್ಲಿ ಬಾದಾಮಿಯ ಸ್ಮಾರಕಗಳ ಕುರಿತ ವಾಸ್ತುಶಿಲ್ಪಕಲೆಯ ಪರಿಸರದ ವರದಿಯನ್ನು ಯುನೆಸ್ಕೋಗೆ ಕಳುಹಿಸಿದೆ.

**ಬಿಜಾಪುರ :**

ಬಿಜಾಪುರ ಕರ್ನಾಟಕದ ಒಂದು ಜಿಲ್ಲಾಡಳಿತ ಕೇಂದ್ರ. ಬೆಂಗಳೂರಿನಿಂದ ವಾಯುವ್ಯಕ್ಕೆ ೫೭೯ ಕಿ.ಮೀ. ದೂರದಲ್ಲೂ, ಸೊಲ್ಲಾಪುರದ ದಕ್ಷಿಣಕ್ಕೆ ೯೬ ಕಿ.ಮೀ. ದೂರದಲ್ಲೂ ಇದೆ. ಬಿಜಾಪುರದ ಮೂಲ ಹೆಸರು ವಿಜಯಪುರ.[೪೮] ಕ್ರಿ.ಶ.೧೦೩೬ರ ಶಾಸನ ಈ ವಿಷಯವನ್ನು ದಾಖಿಲಿಸುತ್ತದೆ. ಕ್ರಿ.ಶ. ೧೧೦೦ರಲ್ಲಿ ನಾಗಚಂದ್ರ ಬರೆದ ಮಲ್ಲಿನಾಥ ಪುರಾಣದಲ್ಲಿ ವಿಜಯಪುರದ ಹೆಸರು ಬರುತ್ತದೆ. ಕಲ್ಯಾಣ ಚಾಲುಕ್ಯರ ಎರಡನೆಯ ರಾಜಧಾನಿಯಾಗಿದ್ದ ಬಿಜಾಪುರವು ವಿಜಯಪುರ ಎಂದು ಪ್ರಸಿದ್ಧಿ ಪಡೆದಿತ್ತು. ಇದನ್ನು ವಿವಿಧ ಕಾಲಗಳಲ್ಲಿ ಬಿಜ್ಜನಹಳ್ಳಿ, ವಿದ್ಯಾಪುರ, ಮಹಮ್ಮದಪುರ ಎಂದು ಕರೆಯಲಾಗಿತ್ತು.[೪೯] ದೇವಗಿರಿಯ ಯಾದವ ದೊರೆಗಳು ವಿಜಯಪುರವನ್ನು ತಮ್ಮ ರಾಜಧಾನಿಯಾಗಿ ಹೊಂದಿದ್ದರು. ದೇವಗಿರಿಯ ಯಾದವರ ಕೊನೆಯ ದೊರೆ ಶಂಕರದೇವನು ದೆಹಲಿ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿಯ ಸೇನಾಧಿಕಾರಿ ಮಲ್ಲಿಕ್ ಕಾಫರ್‌ನಿಂದ ಕೊಲ್ಲಲ್ಪಟ್ಟಾಗ, ಬಿಜಾಪುರದಲ್ಲಿ ಮುಸಲ್ಮಾನರ ಆಳ್ವಿಕೆ ಪ್ರಾರಂಭವಾಯಿತು.

೧೪೯೦–೧೬೮೬ ರ ಅವಧಿಯಲ್ಲಿ ಉತ್ತರ ಕರ್ನಾಟಕದ ಬಹುಭಾಗ ಹಾಗೂ ದಖನ್ನಿನ ಇತರ ಪ್ರದೇಶಗಳ ಮೇಲೆ ಒಡೆತನ ನಡೆಸಿದ ರಾಜವಂಶ ಆದಿಲ್ ಶಾಹಿಗಳ ರಾಜಧಾನಿ ಬಿಜಾಪುರ ಆದಿಲ್ ಶಾಹಿ ಹೆಸರು ಈ ವಂಶದ ಆಳ್ವಿಕೆಯ ಸ್ಥಾಪಕನಾದ ಯೂಸೂಫ್ ಆದಿಲ್‌ಖಾನ್‌ನ ಹೆಸರಿನ ಮೇಲೆ ರೂಢಿಗತವಾಗಿದೆ. ಈತ ತಾನು ಆಟೋಮನ್ ಸಾಮ್ರಾಜ್ಯದ ಸುಲ್ತಾನ ೨ನೆಯ ಮುರಾದ್‌ನ ವಂಶಸ್ಥನೆಂದು ಹೇಳಿಕೊಂಡಿದ್ದಾನೆ. ಆದರೆ ಇದು ಸ್ವಕಲ್ಪಿತ. ಈತ ಷೇಕ್ ಸಫಿಯಾ ಯುವಕ ಗುಲಾಮರಲ್ಲಿ ಒಬ್ಬನಾಗಿ ನೇಮಕವಾಗಿದ್ದ. ಈತನ ವಂಶಸ್ಥರಲ್ಲಿ ಮುಂದಿನವರು ಸಫಿಯಾ ಮನೆತನಕ್ಕೆ ನಿಷ್ಠೆ ತೋರಿಸುತ್ತಿದ್ದರು. ಈ ಮಾಹಿತಿಗಳು ಇವನು ಅಜರ್‌ಬೈಜಾನ್ ಪ್ರದೇಶದ ಮೂಲ ಪಂಗಡಗಳಿಗೆ ಸೇರಿದವನು ಎಂದು ತಿಳಿಸುತ್ತವೆ.

**ರಾಜಕೀಯ ಇತಿಹಾಸ :**

ದಖನ್ ಹಾಗೂ ಭಾರತದ ರಾಜಕೀಯದಲ್ಲಿ ಪರಿಣಾಮಕಾರಿ ಪಾತ್ರವಹಿಸಿದ್ದ ಈ ವಂಶದಲ್ಲಿ ಒಂಭತ್ತು ಸುಲ್ತಾನರು ಆಳಿದರು. ಅವರಲ್ಲಿ ಯೂಸೂಫ್‌ಅಲಿ, ಎರಡನೇ ಇಬ್ರಾಹಿಂ ಮತ್ತು ಮಹಮ್ಮದ್ ಪ್ರಮುಖರು. ಇತರರು ಇವರಷ್ಟು ಬಲಶಾಲಿಗಳಲ್ಲದಿದ್ದರೂ, ತಮ್ಮ ವಂಶದ ದಕ್ಷ ಪರಂಪರೆಯಲ್ಲಿ ಕರ್ತವ್ಯ ನಿರ್ವಹಿಸಿ ರಾಜ್ಯದ ಪ್ರಾದೇಶಿಕ

ಸಮಗ್ರತೆಯನ್ನು ಉಳಿಸಿಕೊಂಡು ಬಂದರು. ಅಲ್ಲದೆ ಕಲೆ, ವಾಸ್ತುಶಿಲ್ಪ ಹಾಗೂ ಸಾಹಿತ್ಯ ರಂಗಗಳಲ್ಲಿನ ಹಲವು ಸಾಧನೆಗಳಿಗೂ ಕಾರಣವಾದರು.

ಮೊದಲನೆಯ ದೊರೆ ಯೂಸೂಫ್ ಆದಿಲ್‌ಷಾನು ಮೊದಲು ಮೊದಲು ಬಹಮನಿ ಅರಸರ ಅಧೀನದಲ್ಲಿದ್ದ ಬಿಜಾಪುರದ ಪ್ರಾಂತಾಧಿಕಾರಿಯಾಗಿದ್ದನು. ಬಹಮನಿ ಸಾರ್ವಭೌಮ ಮಹಮ್ಮದ್‌ನು ನಿರ್ಬಲನಾಗಿದ್ದರಿಂದ ರಾಜ್ಯದ ವ್ಯವಹಾರ ಖಾಸಿಮ್ ಬರೀದ್‌ನ ಕೈಸೇರಿತು. ಆದ್ದರಿಂದ ಈತ ಬಿಜಾಪುರದಲ್ಲಿ ಸ್ವತಂತ್ರನಾಗಿ ಆಳಲಾರಂಭಿಸಿದ. ಅಸೀಮ ವೀರನೂ, ರಾಜಕೀಯ ಪಟುವೂ ಆಗಿದ್ದ ಈತನ ಆಳ್ವಿಕೆಯಲ್ಲಿ ರಾಜ್ಯ ವ್ಯವಸ್ಥೆ ಸದೃಢಗೊಳ್ಳಲಾರಂಭಿಸಿತು. ಇವನ ಮಗ ಇಸ್ಮಾಯಿಲ್ ಸಿಂಹಾಸನವೇರುವಾಗ ಕೇವಲ ೧೩ ವರ್ಷದ ಬಾಲಕನಾಗಿದ್ದ. ಆ ಕಾಲದಲ್ಲಿ ರಾಜಪ್ರತಿನಿಧಿಯಾಗಿದ್ದ ಕಮಾಲ್‌ಖಾನ್ ರಾಜ್ಯಾಧಿಕಾರವನ್ನು ತಾನೇ ವಶಮಾಡಿಕೊಳ್ಳಲು ಪ್ರಯತ್ನಿಸಿದ.[೫೦] ಆದರೆ ಇಸ್ಮಾಯಿಲನ ತಾಯಿ ಈ ಪ್ರಯತ್ನವನ್ನು ವಿಫಲಗೊಳಿಸಿದಳು. ಪರ್ಶಿಯಾ ಮೊದಲಾದೆಡೆಗಳಿಂದ ಬಂದು ದಖನ್ನಿನಲ್ಲಿ ನೆಲೆಸಿದ್ದ ಹೆಚ್ಚಿನ ಮಟ್ಟಿಗೆ ಷಿಯಾ ಪಂಥೀಯರಾಗಿದ್ದ ಹಾಗೂ ಬಹುಮಟ್ಟಿಗೆ ಸ್ಥಳೀಯರೇ ಆಗಿದ್ದ ಸುನ್ನಿ ಪಂಥದ ಅನುಯಾಯಿಗಳು ಪ್ರಭಾವಿ ಗುಂಪುಗಳಾಗಿ ಅಂದಿನ ರಾಜಕೀಯದಲ್ಲಿ ಪ್ರಮುಖ ಪಾತ್ರವಹಿಸಿದ್ದವು. ಆಗಾಗ್ಗೆ ತಲೆದೋರುತ್ತಿದ್ದ ಇವರ ವೈಮನಸ್ಸುಗಳು ರಾಜ್ಯಗಳ ಮೇಲೆ ಅನೇಕ ರೀತಿಯ ಪರಿಣಾಮವನ್ನು ಬೀರುತ್ತಿದ್ದವು. ಸು. ೧೫೩೪ ರಲ್ಲಿ ಇವನು ಮೃತನದಾಗ ರಾಜ್ಯದ ಸ್ಥಿತಿ ಪುನಃ ಅಸ್ತವ್ಯಸ್ತವಾಯಿತು. ನಂತರ ಇಬ್ರಾಹಿಂನು ರಾಜ್ಯಭಾರ ನಡೆಸಿದನು. ಆಗ ವಿದೇಶಿಯರನ್ನು ಹಿಂದಿಟ್ಟು ದಖನೀಯರಿಗೆ ಪ್ರೋತ್ಸಾಹ ನೀಡಿದನು. ಈತನ ನಂತರ ಅಧಿಕಾರಕ್ಕೆ ಬಂದ ಇವನ ಮಗ ಅಲಿ ಆದಿಲ್ ಷಾ ಬಲಿಷ್ಠ ಹಾಗೂ ದಕ್ಷ ಸುಲ್ತಾನನಾಗಿದ್ದ. ಆದರೆ ತನ್ನ ತಂದೆಯ ನೀತಿಗಳ ವಿರುದ್ಧವಾಗಿ ಆಡಳಿತ ನಡೆಸಿದ. ಹೀಗೆ ಕ್ರಮಾನುಗತವಾಗಿ ಆಳ್ವಿಕೆ ನಡೆಸಿದ ಆದಿಲ್‌ಷಾಹಿಗಳ ಆಳ್ವಿಕೆಯಿಂದ ಬಿಜಾಪುರವು ಸಾಕಷ್ಟು ಪ್ರಮಾಣಗಳಲ್ಲಿ ಏಳುಬೀಳುಗಳನ್ನು ಕಂಡಿತು.

ಇಬ್ರಾಹಿಂನ ಎರಡನೆಯ ಮಗ ಮಹಮ್ಮದ್ ಆದಿಲ್‌ಷಾ ತನ್ನ ವಿರೋಧಿ ಸೋದರರನ್ನು ಹತ್ತಿಕ್ಕಿ, ಉತ್ತಮ ರಾಜಕೀಯ ಪಟುವಾಗಿ ಬೆಳೆದ. ಮೊಗಲ್ ಸಾಮ್ರಾಜ್ಯಶಾಹಿಯ ವಿಸ್ತರಣೆಯನ್ನು ೧೬೩೬ರ ವರೆಗೂ ಯಶಸ್ವಿಯಾಗಿ ತಡೆದನು. ಆದರೆ ಅದೇ ವರ್ಷ ಅನಿವಾರ್ಯವಾಗಿ ಮೊಗಲರೊಂದಿಗೆ ಅಧೀನತ್ವದ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಉತ್ತರದಲ್ಲಿ ತನಗಾದ ನಷ್ಟವನ್ನು ಭರಿಸಲು ದಕ್ಷಿಣದ ಕಡೆ ತಿರುಗಿ ಕರ್ನಾಟಕದ ಬಹುಭಾಗದ

ಮೇಲೆ ಪ್ರಭುತ್ವ ಸ್ಥಾಪಿಸಿದ. ಇವನು ನಿಧನನಾಗುತ್ತಿದ್ದಂತೆಯೇ ಬಿಜಾಪುರ ಅವನತಿಯ ಹಾದಿಹಿಡಿಯಿತು. ಕ್ರಿ.ಶ. ೧೬೮೬ರಲ್ಲಿ ಬಿಜಾಪುರ ಮುಳುಗಿ ಹೋಯಿತು. ಆ ಹೊತ್ತಿಗೆ ವಯಸ್ಸಿಗೆ ಬಂದಿದ್ದ ಸಿಕಂದರ್ ವೀರಾವೇಶದಿಂದ ಹೋರಾಡಿದರೂ ಮೊಗಲರ ಯುದ್ಧ ತಂತ್ರಕ್ಕೆ ಇವನು ಸಾಟಿಯಾಗಿ ನಿಲ್ಲಲು ಸಾಧ್ಯವಾಗಲಿಲ್ಲ. ಆದಿಲ್‌ಶಾಹಿ ಸಾಮ್ರಾಜ್ಯ ಕಣ್ಮರೆಯಾಗಿ ಬಿಜಾಪುರವನ್ನು ೧೬೮೬ರಲ್ಲಿ ಔರಂಗಜೇಬನು ಸ್ವಾಧೀನ ಪಡಿಸಿಕೊಂಡು ಸಿಕಂದರ್‌ನನ್ನು ಬಂದಿಸಿದನು. ಇವನು ೧೭೦೦ ರಲ್ಲಿ ನಿಧನನಾದನು.[೫೧]

ಹೀಗೆ ಬಿಜಾಪುರ ೧೭೨೩ರವರೆಗೆ ಮೊಘಲರ ಆಳ್ವಿಕೆಗೆ ನಂತರ ೧೭೨೩ ರಿಂದ ೧೭೬೦ ರವರೆಗೆ ಹೈದರಾಬಾದ್ ನಿಜಾಮನ, ನಂತರ ೧೭೬೦ ರಿಂದ ೧೭೭೮ರವರೆಗೆ ಮರಾಠರ ಆಳ್ವಿಕೆಗೆ ಒಳಪಟ್ಟಿತು. ರಾಜ್ಯದ ದಕ್ಷಿಣ ಭಾಗವು ೧೭೭೮ರ ವರೆಗೆ ಹೈದರ್ ಮತ್ತು ಟಿಪ್ಪುವಿನ ಅಧೀನಕ್ಕೆ ಒಳಪಟ್ಟಿತು. ೧೮೧೮ರಲ್ಲಿ ಬ್ರಿಟಿಷರು ಬಿಜಾಪುರವನ್ನು ಮರಾಠರಿಂದ ಸ್ವಾಧೀನಪಡಿಸಿಕೊಂಡರು. ೧೮೬೪ರಲ್ಲಿ ಬಿಜಾಪುರವು ಜಿಲ್ಲೆಯಾಗಿ ಕಲಾದಗಿ ಅದರ ಕೇಂದ್ರಸ್ಥಾನವಾಗಿ ಮಾರ್ಪಟ್ಟಿತು.

**ಸಂರಕ್ಷಿತ ಸ್ಮಾರಕಗಳು :**

ಆದಿಲ್ ಷಾಹಿಗಳ ಕಾಲದ ಕಟ್ಟಡಗಳನ್ನು ಒಳಗೊಂಡಂತೆ ಕೆರೆ-ಕಟ್ಟೆಗಳು, ಮಸೀದಿಗಳು, ಅರಮನೆಗಳು, ಬಂದೂಕುಗಳು ಹಾಗೂ ಬಿಜಾಪುರದ ದೇವಾಲಯಗಳು ಸೇರಿದಂತೆ ೩೦ಕ್ಕೂ ಹೆಚ್ಚು ಸ್ಮಾರಕಗಳನ್ನು ಸಂರಕ್ಷಿಸಲಾಗಿದೆ. ಇವುಗಳನ್ನು ಒಳಗೊಂಡಂತೆ ಬಹಮನಿ ಸುಲ್ತಾನರ ಒಟ್ಟು ಸ್ಮಾರಕಗಳನ್ನು ವರದಿ ಮಾಡಿ ೨೦೧೪ರಲ್ಲಿ ಯುನೆಸ್ಕೋಗೆ ಕಳುಹಿಸಲಾಗಿದೆ. ಬಿಜಾಪುರದ ಸ್ಮಾರಕಗಳು ಈ ಕೆಳಗಿನಂತಿವೆ.

೧. ಕೋಟೆ ಮತ್ತು ಹೆಬ್ಬಾಗಿಲುಗಳು
೨. ಬಡೀಕಮಾನ್
೩. ಜಾಮೀಯಾ ಮಸೀದಿ
೪. ಮೆಕ್ಕಾ ಮಸೀದಿ
೫. ಕುಮಟಗಿ ಮಹಲ್
೬. ಕುಮಟಗಿ
೭. ಐನಾಪುರ ಮಹಲ್ ಮತ್ತು ಸಮಾಧಿ
೮. ಗೋಲ್ ಗುಂಬಜ್
೯. ಹಾಸಿಂ ಪೀರ್ ದರ್ಗಾ
೧೦. ಹಾಜಿಹಸನ್ ಸಮಾಧಿ
೧೧. ಮೆಹ್ತರ್ ಮಹಲ್

೧೨. ಅಸರ್ ಮಹಲ್

೧೩. ಜಹಾಲ್ ಮಹಲ್

೧೪. ಪಾಲಿ ಮಹಲ್

೧೫. ಅರಸ್ ಮಹಲ್

೧೬. ಅದಾಲತ್ ಮಹಲ್

೧೭. ಆನಂದ ಮಹಲ್

೧೮. ಗಗನ್ ಮಹಲ್

೧೯. ಚರ್ಚು

೨೦. ಜಲ ಮಹಲ್

೨೧. ಸಾತ್ ಮಹಲ್

೨೨. ಅಂಡೂ ಮಸೀದಿ

೨೩. ಬಾರಾಕಮಾನ್

೨೪. ಜೋಡ್ ಗುಂಬಜ್

೨೫. ತಾಜ್ ಬಾವಡಿ

೨೬. ಉಪರಿ ಬಾವಡಿ

೨೭. ಚಾಂದ್ ಬಾವಡಿ

೨೮. ಇಬ್ರಾಹಿಂ ರೋಜಾ

೨೯. ಅಫ್ಜಲ್ ಖಾನ್ ಸ್ಮಾರಕ

೩೦. ಅಫ್ಜಲ್ ಖಾನ್ ಝುನಾನ ಸ್ತ್ರೀಯರ ಸಮಾಧಿಗಳು

೩೧. ನವರಸಪುರ

೩೨. ಸಂಗೀತಮಹಲ್

೩೩. ದೆವ್ವ ಹುಣಸಿಮರ

೩೪. ಜೈನ ದೇವಾಲಯ

೩೫. ಸಿದ್ದರಾಮೇಶ್ವರ ದೇವಾಲಯ

೩೬. ನರಸಿಂಹ ದೇವಾಲಯ[೫೨]

ಈ ಮೇಲಿನ ಸ್ಮಾರಕಗಳನ್ನು ಕುರಿತಂತೆ ಪ್ರಮುಖವಾದ ಸ್ಮಾರಕಗಳ ವಿವರಣೆಯನ್ನು ಈ ಕೆಳಗೆ ವಿವರಿಸಲಾಗಿದೆ.

**ಕೋಟೆ ಮತ್ತು ಹೆಬ್ಬಾಗಿಲುಗಳು :**

ಬಿಜಾಪುರದ ಕೋಟೆಯು ಹೊರಭಾಗದಲ್ಲಿ ಬೃಹತ್ ಗೋಡೆ ಮತ್ತು ಒಳಭಾಗದಲ್ಲಿ ರಾಜಪ್ರಾಂಗಣವನ್ನೊಳಗೊಂಡ ನಗರವನ್ನು ರಕ್ಷಿಸುವ ಶಿಲೆಯನ್ನು ಹೊಂದಿದ್ದು, ಪಟ್ಟಣವನ್ನು ಆವರಿಸಿದೆ. ಈ ಕೋಟೆಯು ಸುಮಾರು ೩೦.ಕಿ.ಮೀ. ಉದ್ದವನ್ನು ಹೊಂದಿದೆ. ಇದು ಅಂಡಾಕೃತಿಯಲ್ಲಿದ್ದು, ಶಕ್ತಿ ಶಾಲಿಯಾದ ಗೋಡೆ ಹಾಗೂ ೫೦ ಅಡಿ ಅಗಲದ ಕಂದಕ ಮತ್ತು

೧೦೬ ಕೊತ್ತಲಗಳನ್ನು ಹೊಂದಿದೆ.[೫೩] ಈ ಕೋಟೆಯು ಮಧ್ಯ ಭಾಗದ ಒಳಗಿರುವ ಕಿಲ್ಲೆ, ಬಲಿಷ್ಟವಾದ ಬರುಜುಗಳು, ಕಟ್ಟೆಗಳು ಮತ್ತು ಕಂದಕವನ್ನು ಹೊಂದಿದೆ. ಕೋಟೆಗೆ ಐದು ಮಹಾದ್ವಾರಗಳಿದ್ದು, ಇವುಗಳಲ್ಲಿ ನಾಲ್ಕು ಈಗಲೂ ಬಳಕೆಯಲ್ಲಿವೆ. ಬಿಜಾಪುರವನ್ನು ಔರಂಗಜೇಬನು ಗೆದ್ದು ಮನಗೊಳಿ ಎಂಬ ಮಹಾದ್ವಾರದ ಮೂಲಕ ನಗರವನ್ನು ಪ್ರವೇಶಿಸಿದ ನಂತರ ಈ ದ್ವಾರವನ್ನು ಫತೇ ದರ್ವಾಜ್ ಎಂದೂ ಕರೆಯಲಾಗುತ್ತಿದೆ. ಮಹಾದ್ವಾರಗಳ ಪೈಕಿ 'ಮೆಕ್ಕಾ ಮಹಾದ್ವಾರ' ಅತ್ಯಂತ ಬಲಿಷ್ಟವಾದುದು ಮತ್ತು ಕ್ಲಿಷ್ಟವಾದುದು. ಇದರ ಬಾಗಿಲುಗಳನ್ನು ದಪ್ಪನೆಯ ಮರದ ಹಲಗೆಗಳಿಂದ ಮಾಡಿದ್ದು, ಅವುಗಳಿಗೆ ದಪ್ಪನೆಯ ಕಬ್ಬಿಣದ ಮುಳ್ಳುಗಳಿಂದ ಕೂಡಿದ ಅಡ್ಡಪಟ್ಟಿಗಳನ್ನು ಹಾಕಲಾಗಿದೆ. ಇವು ಅಭೇದ್ಯವಾದ ಬಾಗಿಲುಗಳಾಗಿದ್ದವು.

**ಬಡೀ ಕಮಾನ್ :**

ಇದು ಬೃಹತ್ ಕಮಾನುಗಳನ್ನು ಹೊಂದಿದೆ. ತುದಿಯಲ್ಲಿ ಸುಂದರ ವಿನ್ಯಾಸದ ಮರದ ಕೈಗಳನ್ನು ಹೊಂದಿದ್ದು, ನಾಲ್ಕೂ ದಿಕ್ಕಿನಲ್ಲಿ ಪ್ರವೇಶ ದ್ವಾರಗಳಿವೆ.

**ಜಾಮೀಯಾ ಮಸೀದಿ :**

ಇದು ಒಂದನೆಯ ಆದಿಲ್‌ಷಾನಿಂದ ನಿರ್ಮಿಸಲ್ಪಟ್ಟಿದ್ದು, ವಿಶಾಲವಾದ ಚೌಕಾಕಾರದ ಕಂಬಗಳನ್ನು ಮತ್ತು ಕಮಾನುಗಳನ್ನು ಹೊಂದಿದ ಎತ್ತರ ಮತ್ತು ಘನವಾಗಿ ಕಾಣುವ ಆಕರ್ಷಕ ಕಟ್ಟಡಗಳಲ್ಲಿ ಒಂದಾಗಿದೆ. ಇದು ಸಮ ಪ್ರಮಾಣದ ಬೃಹತ್ ಗುಮ್ಮಟವನ್ನು ಹೊಂದಿದೆ. ಇದರಲ್ಲಿ ನೀರಿನ ಚಿಲುಮೆ ಹಾಗೂ ಮಧ್ಯದಲ್ಲಿ ಕೊಳವಿದೆ. ಮುಖ್ಯ ಕಟ್ಟಡದಲ್ಲಿನ ಅಡ್ಡ ಕಂಬಗಳನ್ನು ನೆಲವನ್ನು ೪೫ ಸಮವಾದ ಚೌಕಗಳನ್ನಾಗಿ ವಿಂಗಡಿಸಿದೆ[೫೪] ಮಸೀದಿಯ ವಿಸ್ತಾರ ೧,೧೬,೦೦೦ ಚದರ ಅಡಿಗಳಷ್ಟಿದೆ. ಮಸೀದಿಯನ್ನು ಈಗಲೂ ಪ್ರಾರ್ಥನೆ ಮಾಡುವ ಸಲುವಾಗಿ ಬಳಸಲಾಗುತ್ತಿದೆ.

**ಮೆಕ್ಕ ಮಸೀದಿ :**

ಇದು ಕೋಟೆಯ ಒಳಭಾಗದ ರಾಜಪ್ರಾಂಗಣ ಗೋಡೆಗೆ ಹೊಂದಿಕೊಂಡಂತಿದೆ. ಮೆಕ್ಕಾದಲ್ಲಿರುವ ಮಸೀದಿಯಂತೆ ಇರುವುದರಿಂದ ಇದನ್ನು ಅದೇ ಹೆಸರಿನಿಂದ ಕರೆಯಾಲಾಗಿದೆ. ಇದು ಬಿಜಾಪುರದಲ್ಲಿರುವ ಸುಂದರವಾದ ಹಾಗೂ ಅತ್ಯಂತ ಚಿಕ್ಕ ಮಸೀದಿಯಾಗಿದೆ. ಇದು ಹೊರಾಂಗಣದ ಮಧ್ಯಭಾಗದಲ್ಲಿದ್ದು, ಸುತ್ತಲೂ ಕಮಾನುಗಳಿಂದ ಕೂಡಿದ ಅಂಗಳ ಅದರ ಮೇಲ್ಚಾವಣಿಯನ್ನು ಹೊಂದಿದೆ. ಇದರ ಶೈಲಿ ಮತ್ತು ವಾಸ್ತುಶಿಲ್ಪವು

ಎರಡನೆಯ ಇಬ್ರಾಹಿಂ ಆದಿಲ್‌ಷಾನ ಕಾಲಕ್ಕೆ ಸೇರಿದಂತೆ ಕಂಡುಬರುತ್ತದೆ. ಹಾಗೂ ಪ್ರಾಯಶಃ ಮಲ್ಲಿಕ್‌ಸಂದಲ್‌ನ ಮೇಲ್ವಿಚಾರಣೆಯಲ್ಲಿ ನಿರ್ಮಿಸಿರಬಹುದು.

**ಗೋಳಗುಮ್ಮಟ :**

ರೈಲು ನಿಲ್ದಾಣದಿಂದ ೧/೨ಕಿ.ಮೀ. ಪಶ್ಚಿಮಕ್ಕೆ ಇರುವ ಗೋಳಗುಮ್ಮಟ ಬಿಜಾಪುರದ ಎಲ್ಲಾ ಕಟ್ಟಡಗಳನ್ನೂ ಮೀರಿಸುವಂತಹ ಹಾಗೂ ಸುತ್ತಲೂ ಮೈಲಿಗಳ ತನಕ ಪ್ರಭುತ್ವ ಸ್ಥಾಪಿಸುವ ಸುಂದರ ನೋಟವನ್ನು ಒದಗಿಸುತ್ತದೆ. ಇದರ ಆಕಾರವನ್ನು ಭಾರತದ ಕೆಲವೇ ಕಟ್ಟಡಗಳಿಗೆ ಹೋಲಿಸಬಹುದು. ಇದರ ಉನ್ನತವಾದ ಪ್ರಯಾಣ ಹಾಗೂ ಅದ್ವಿತಿಯವಾದ ಗುಮ್ಮಟವನ್ನು ದೂರದಿಂದಲೇ ಪೂರ್ತಿಯಾಗಿ ಕಾಣಬಹುದು. ಈ ಬೃಹತ್ ಸಮಾಧಿ ಭವನವು ಅಸರ್‌ಮಹಲ್‌ನ ಮೇಲಿನ ಹಜಾರದಿಂದ ನೋಡಿದಾಗ ಅದ್ಭುತವಾಗಿ ಕಾಣುತ್ತದೆ. ಒಂದನೆಯ ಇಬ್ರಾಹಿಂನು ಅಲಂಕಾರದಿಂದ ಮತ್ತು ಶ್ರೀಮಂತಿಕೆಯ ಗಾಂಭೀರ್ಯದಿಂದ ಕೂಡಿದ ಸುಂದರವಾದ ಇಬ್ರಾಹಿಂ ರೋಜಾವನ್ನು ನಿರ್ಮಿಸಿದಂತಹ ಕಟ್ಟಡ ಮತ್ತೊಂದಿಲ್ಲ. ಅದರಂತೆ ನಿರ್ಮಿಸಲು ಸಾಧ್ಯವಿಲ್ಲವೆಂದರಿತ ಮಹಮದ್ ಅದಕ್ಕಿಂತ ವಿಭಿನ್ನವಾದ ಶೈಲಿಯಲ್ಲಿ ರೋಜಾವನ್ನು ಕಿರಿದಾಗುವಂತೆ ಮಾಡಲು ಈ ಬೃಹತ್ ಕಟ್ಟಡದ ನಿರ್ಮಾಣಕ್ಕೆ ಕೈಹಾಕಿದೆ.[೫೫]

ಇವೆರಡರಲ್ಲಿನ ವಿಭಿನ್ನತೆಯೆಂದರೆ ಗೋಳಗುಮ್ಮಟ ಶಕ್ತಿಯುತ ಪುರುಷತ್ವದ ಕಲ್ಪನೆಯಾದರೆ, ರೋಜಾ ನಯವಾದ ಸ್ತ್ರೀ ಲಕ್ಷಣದ ಪ್ರತೀಕವಾಗಿದೆ. ಆದಾಗ್ಯೂ, ಗೋಳಗುಮ್ಮಟ ಮಸೀದಿಯ ಜೊತೆಗೆ ನಗರ್‌ಖಾನಾ, ಪ್ರವೇಶದ್ವಾರ, ವಿಶ್ರಾಂತಿಗೃಹ ಮತ್ತು ಇತರೆ ಸೌಲಭ್ಯಗಳಿಂದ ಕೂಡಿದ ಸಾಮ್ರಾಟರ ಸಮಾಧಿಯಾಗಿದ್ದು, ವಾಸ್ತುಕಲೆಯಲ್ಲಿ ಅದ್ವೀತಿಯ ಅವರಣದಲ್ಲಿದೆ. ಇದರ ವೈಶಿಷ್ಟ್ಯವೆಂದರೆ ಗೋಳಗುಮ್ಮಟ ಸರಳವಾದ ಕಟ್ಟಡ ಇದರ ಚೌಕಾಕಾರದ ಸಭಾಂಗಣ, ನಾಲ್ಕು ಬೃಹತ್ ಗೋಡೆಗಳಿಂದ ಆವೃತವಾಗಿದ್ದು, ಮೂರ್ತಿಗಳಲ್ಲಿ ಅಷ್ಟಕೋನಾಕೃತಿಯ ಗೋಪುರಗಳನ್ನು ಹೊಂದಿದ್ದು, ಇವೆಲ್ಲ ಆರ್ಧವೃತ್ತಾಕಾರದ ಗುಮ್ಮಟದಿಂದ ಅವೃತವಾಗಿವೆ. ೯ ಅಡಿ ದಪ್ಪವಿರುವ ಚೌಕಾದ ನಾಲ್ಕು ಕಡೆ ಕಲ್ಲಿನಿಂದ ಕಟ್ಟಿದ್ದು, ಅವು ೧೦೦ ಅಡಿಗಳಷ್ಟು ಎತ್ತರವಾಗಿವೆ. ಚೌಕದ ಪ್ರತಿ ಮೂಲೆಯ ಹೊರಭಾಗದಲ್ಲಿ ಅಷ್ಟಕೋನಾಕೃತಿಯ ಗೋಪುರವಿದ್ದು, ಇದು ಏಳು ಅಂತಸ್ತುಗಳನ್ನು ಹೊಂದಿದೆ. ಪ್ರತಿಯೊಂದು ಅಂತಸ್ತಿನ ಹೊರಮುಖವು ಸಲಾಕಿಗಳ ಆಕಾರದ ಕಿಟಕಿಗಳನ್ನು ಹೊಂದಿದೆ. ಹೊರಭಾಗದ ಅಡಿಯಲ್ಲಿ ಕಟ್ಟಡದ ಸುತ್ತ ಜಗಲಿಯಿದೆ. ಹಾಗೂ ಅದು ಕಲ್ಲಿನ ಕೈಪಿಡಿ ಗೋಡೆಯಿಂದ ರಕ್ಷಣೆ ಪಡೆದಿದೆ.

ಜಗಲಿಯಿಂದ ಕೆಲವು ಹೆಜ್ಜೆ ಹತ್ತಿದರೆ, ಕಟ್ಟಡದ ಪ್ರತಿಮೂಲೆಯಲ್ಲಿನ ಬಾಗಿಲ ಮೂಲಕ ಗುಮ್ಮಟದ ಒಳಭಾಗಕ್ಕೆ ಪ್ರವೇಶಿಸಬಹುದು. ಗೋಡೆಗಳು ಮತ್ತು ಕೈಪಿಡಿ ಗೋಡೆಗಳ ಕಮಾನುಗಳ ಮೇಲ್ಭಾಗದ ನಡುವಿನ ಕಟ್ಟಡದ ಸುತ್ತಲಿರುವ ಸಧೃಢವಾದ ಭಾವಣಿಯ ಮೇಲಿನ ಅಲಂಕಾರ ಗಮನಿಸಬೇಕಾದ ಅಂಶವಾಗಿದೆ. ಇದು ಬಿಜಾಪುರದಲ್ಲಿರುವ ಅದ್ವಿತಿಯ ಹಾಗೂ ದೇಶದಲ್ಲೇ ಚಮತ್ಕಾರದ ಕೆಲಸದಿಂದ ಕೂಡಿದ ಒಂದು ಕಟ್ಟಡ. ಸಭಾಂಗಣದ ಒಳಭಾಗ ೧೩೫ ಅಡಿಗಳ ವ್ಯಾಸ ಹಾಗೂ ೧೭೮ ಅಡಿ ಎತ್ತರದಿಂದ ಕೂಡಿದೆ.[೫೬] ಒಟ್ಟಾರೆ ಇದರ ಒಳಭಾಗದ ವಿಸ್ತೀರ್ಣವು ೧೮.೦೦೦ ಚದರಡಿಗಳಷ್ಟೇ. ಗೋಳಗುಮ್ಮಟದ ಇನ್ನೊಂದು ಪ್ರಮುಖ ಲಕ್ಷಣವೆಂದರೆ ಗುಮ್ಮಟದ ಒಳಭಾಗದಲ್ಲಿನ ಪಿಸುಗುಟ್ಟುವ ಉಪ್ಪರಿಗೆ ಗುಮ್ಮಟದ ತಳಭಾಗದ ಸುತ್ತ ಇರುವ ಎಂಟು ಚಿಕ್ಕ ದ್ವಾರಗಳ ಮೂಲಕ ಮೇಲ್ಛಾವಣಿಯಿಂದ ಇದರೊಳಕ್ಕೆ ಹೋಗಬಹುದು. ಗೋಳಗುಮ್ಮಟದ ಒಳಕ್ಕೆ ಪ್ರವೇಶಿಸುತ್ತಿದ್ದಂತೆ ಪ್ರವಾಸಿಗರ ಜೋರಾದ ಪ್ರತಿಧ್ವನಿಯನ್ನು ಕೇಳಬಹುದು. ಉಪ್ಪರಿಗೆ ಮೇಲೆ ಹೋಗುತ್ತಿದ್ದಂತೆ ಈ ಪ್ರತಿಧ್ವನಿಯ ಶಬ್ದ ಹೆಚ್ಚಾಗುತ್ತದೆ. ಸಣ್ಣ ಪಿಸುಮಾತು ಕೂಡ ಉಪ್ಪರಿಗೆಯ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಕೇಳಿಸುತ್ತದೆ. ನಿಶ್ಯಬ್ಧ ಸ್ಥಿತಿಯಲ್ಲಿ ಪ್ರತಿಧ್ವನಿಯು ಅನೇಕ ಬಾರಿ ಕೇಳಿಸುತ್ತದೆ.

ಗುಮ್ಮಟ ಮಧ್ಯಭಾಗದಲ್ಲಿ ಎತ್ತರವಾದ ಜಗಲಿಯಿದ್ದು, ಅದರ ಮೇಲೆ ಸುಲ್ತಾನ್ ಮಹಮ್ಮದನ ಮೊಮ್ಮಗ, ಮಹಮ್ಮದನ ಕಿರಿಯ ಹೆಂಡತಿ, ಸುಲ್ತಾನ್ ಹಾಗೂ ಅವನ ಪ್ರೀತಿ ಪಾತ್ರಳಾಗಿದ್ದ ರಂಭಾ ಆತನ ಮಗಳು ಹಾಗೂ ಹಿರಿಯ ಪತ್ನಿಯ ಅನುಕರಣೆಯ ಗೋರಿಗಳಿವೆ. ಆದರೆ ಇವರುಗಳ ನಿಜವಾದ ಸಮಾಧಿಗಳು ಕೆಳಗಿನ ನೆಲಮಾಳಿಗೆಯಲ್ಲಿವೆ. ಈ ಮಹಾ ಸಮಾಧಿಯ ಪಶ್ಚಿಮಕ್ಕೆ ಗುಮ್ಮಟದಿಂದ ಕೂಡಿದ ಮಸೀದಿಯಿದೆ. ಇದು ಒಳ್ಳೆಯ ಪ್ರಮಾಣದ ಬೃಹತ್ ಕಟ್ಟಡವಾಗಿದ್ದು, ತೆಳುವಾದ ಮೀನಾರ್‌ಗಳು ಮತ್ತು ಭಾವಣಿಯ ಕೆಳಭಾಗದಲ್ಲಿ ಸುಂದರ ಕೆತ್ತನೆಗಳಿವೆ. ಇತಿಹಾಸಕಾರ ಪರ್ಸಿಬ್ರೌನ್ ಪ್ರಕಾರ ಗೋಲ್‌ಗುಂಬಜ್ ಅದರ ಅದ್ಭುತವಾದ ಸಮಕಟ್ಟಿನ ನಿರ್ಮಾಣದಿಂದಾಗಿ ಅದು ಭಾರತೀಯ ಶಿಲ್ಪಿಯ ನಿರ್ಮಾಣಗಳಲ್ಲಿ ಅತ್ಯುತ್ತಮವಾದುದು ಎಂಬ ವಿಷಯ ಪ್ರಶ್ನಾತೀತವಾದುದೆಂದು ಅಭಿಪ್ರಾಯಿಸುತ್ತಾನೆ.[೫೭] ಗೋಳಗುಮ್ಮಟದ ಎದುರುಗಡೆ ಇರುವ ನಗರ್ ಖಾನ್ ವಸ್ತು ಸಂಗ್ರಹಾಲಯದಲ್ಲಿ ಶಿಲ್ಪಗಳು, ಹಸ್ತಪ್ರತಿಗಳು, ವರ್ಣಚಿತ್ರಗಳು ಪರ್ಶಿಯನ್ ಮತ್ತು ಅರೆಬಿಕ್ ಹಸ್ತಾಕ್ಷರಗಳು, ನಾಣ್ಯಗಳು, ಶಸ್ತ್ರಾಸ್ತ್ರಗಳು ಮುಂತಾದವುಗಳ ಅಧಿಕ ಪ್ರಮಾಣದ ಸಂಗ್ರಹವಿದೆ.

ಗೋಳಗುಮ್ಮಟದ ಸುತ್ತಮುತ್ತನ ಪ್ರದೇಶವನ್ನು ದಕ್ಷಿಣ ಭಾರತದ ಅಪರೂಪದ ಮಧ್ಯಕಾಲೀನ ಸ್ಮಾರಕವನ್ನು ಸ್ವಾಭಾವಿಕವಾಗಿ ಕಾಣುವಂತೆ ಕಾಪಾಡಲಾಗಿದೆ.

**ಜೋಡ್ ಗುಂಬಜ್ :**

ತಾಜ್ ಬಾವಡಿಯ ಪೂರ್ವಕ್ಕೆ ೨೦೦ ಮೀ. ದೂರದಲ್ಲಿ ಎರಡು ಗುಮ್ಮಟಗಳಿರುವ ಕಟ್ಟಡ ಸಮುಚ್ಚಯದಲ್ಲಿದೆ. ಇದನ್ನು ಇಬ್ಬರು "ಸಹೋದರಿಯರು" ಅಥವಾ "ಜೋಡ್ ಗುಂಬಜ್"[೫೮] ಎಂದು ಕರೆಯುವರು. ಇವು ಎರಡನೆಯ ಆದಿಲ್‌ಷಾನ ಸೇನಾಧಿಕಾರಿ ಖಾನ್ ಮಹಮ್ಮದ ಹಾಗೂ ಅವನ ಧಾರ್ಮಿಕ ಗುರು ಅಬ್ದುಲ್ ರಜಾಕ್‌ನ ಗೋರಿಗಳಾಗಿವೆ.[೫೯] ಈ ಧಾರ್ಮಿಕ ಗುರು ಮತ್ತು ಸಂತನ ದರ್ಗಾವನ್ನು ಆತನ ಶಿಷ್ಯ ಖಾನ್ ಮಹಮದ್ ನಿರ್ಮಿಸಿದ್ದು ವಿಶಾಲವಾಗಿ ಸಹಜತೆಯಿಂದ ಕೂಡಿದೆ. ಇದು ಸರಳವಾದ ಚೌಕಾಕೃತಿಯ ಕಟ್ಟಡವಾಗಿದ್ದು ನೆಲಮಾಳಿಗೆಯಲ್ಲಿ ಸಮಾಧಿಯನ್ನು ಹೊಂದಿರುವ ಇದು ಯಾವುದೇ ಅಲಂಕಾರವಿಲ್ಲದ ಗುಮ್ಮಟದಿಂದ ಸುತ್ತುವರೆದಿದೆ. ಇದನ್ನು ಬಿಜಾಪುರದ ಮುಸಲ್ಮಾನ ಬಂಧುಗಳು ಬಹಳ ಗೌರವದಿಂದ ಕಾಣುವರು. ಅಬ್ದುಲ್ ರಜಾಕ್ ಪಾದ್ರಿಯ ಸಮಾಧಿಯ ದಕ್ಷಿಣಕ್ಕಿರುವ ಅಷ್ಟಕೋನಾಕೃತಿಯ ಕಟ್ಟಡವು ಖಾನ್ ಮಹಮ್ಮದ ಹಾಗೂ ಅವನ ಮಗ ಖವಾಸ್ ಖಾನನ ವಿಶ್ರಾಂತಿ ಗೃಹವಾಗಿತ್ತು. ಇವರನ್ನು ರಾಜದ್ರೋಹದ ಆರೋಪದ ಮೇರೆಗೆ ಕೊಲ್ಲಲಾಯಿತು. ಈ ಸ್ಮಾರಕಗಳ ಸುತ್ತಲೂ ವಿಸ್ತಾರವಾದ ಒಳ್ಳೆಯ ತೋಟವಿದೆ.

**ಬಾರಾ ಕಮಾನ್ :**

ನಗರದ ಮಧ್ಯಭಾಗದಲ್ಲಿ ರಾಜ ಪ್ರಾಂಗಣಕ್ಕೆ ವಾಯುವ್ಯ ದಿಕ್ಕಿನಲ್ಲಿರುವ ವಿಶಾಲವಾದ ಚೌಕಾಕೃತಿಯ ಛಾವಣಿರಹಿತ ಹಾಗೂ ಅಪೂರ್ಣವಾದ ಕಮಾನುಗಳಿಂದ ಕೂಡಿದ ಕಂದು ಬಣ್ಣದ ಅಗ್ನಿಶಿಲೆಯ ಕಟ್ಟಡವೇ ಎರಡನೆಯ ಆದಿಲಷಾನ ಸಮಾಧಿ ಇದೆ. ಪ್ರಾಯಶಃ ಇದನ್ನು ಅವನು ಸಿಂಹಾಸನವೇರಿದಾಗ ಕಟ್ಟಲು ಪ್ರಾರಂಭಿಸಿದ್ದು ಆತನ ತಂದೆ ಮಹಮ್ಮದ್ ಆದಿಲ್‌ಷಾನ ಸ್ಮಾರಕ ಗೋಲ್ ಗುಂಬಾಜ್‌ನ್ನು ಮೀರಿಸುವಂತೆ ಬೃಹತ್ ಪ್ರಮಾಣದಲ್ಲಿ ನಿರ್ಮಿಸಲು ಯೋಜಿಸಿದ್ದರೂ, ಅದು ಪೂರ್ತಿಗೊಳ್ಳಲಿಲ್ಲ. ಎತ್ತರವಾದ ಬುನಾದಿಯ ಮೇಲೆ ನಿಂತಿರುವ ಕಟ್ಟಡ ೨೧೫ ಅಡಿಗಳ ಚೌಕಾಕಾರವನ್ನು ಹೊಂದಿದೆ. ಇಲ್ಲಿ ಎರಡನೆಯ ಆದಿಲ್ ಷಾ ಮತ್ತು ಅವನ ಕೆಲ ಕುಟುಂಬದ ಸದಸ್ಯರ ಸಮಾಧಿ ಕಲ್ಲುಗಳಿದ್ದರೂ, ನಿಜವಾದ ಸಮಾಧಿಗಳು ನೆಲಮಾಳಿಗೆಯಲ್ಲಿದ್ದು, ಅವನ್ನು ಪೂರ್ವದಿಕ್ಕಿನಲ್ಲಿರುವ ಬಾಗಿಲಿನಿಂದ ಪ್ರವೇಶಿಸಬಹುದಾಗಿದೆ.[೬೦] ಇಡೀ ಕಟ್ಟಡವೂ ಭದ್ರವಾದ ಅಡಿಪಾಯವನ್ನು ಹೊಂದಿದ್ದು,

ಒಂದು ವೇಳೆ ಪೂರ್ಣಗೊಂಡಿದ್ದರೆ, ಅದು ಬಿಜಾಪುರದಲ್ಲಿನ ಅತ್ಯಂತ ಆಕರ್ಷಕ ಸ್ಮಾರಕವಾಗುತ್ತಿತ್ತು. ೩೦೦ ವರ್ಷಗಳ ಕಾಲ ಇದು ಬಿಸಿಲು ಮಳೆಗಳ ಹೊಡೆತಕ್ಕೆ ಸಿಕ್ಕಿದರೂ, ಇದರ ಕಮಾನುಗಳು ಸುರಕ್ಷಿತವಾಗಿವೆ. ಇದರಿಂದ ಅಂದಿನ ಶಿಲ್ಪಿಗಳ ನಿರ್ಮಿತಿ ಕೌಶಲ್ಯದ ಪ್ರತಿಭೆಯನ್ನು ತಿಳಿಯಬಹುದು. ಈ ಕಟ್ಟಡವು ನಗರದ ಹಾಳು ಬಿದ್ದ ಕಟ್ಟಡಗಳಲ್ಲಿ ಒಂದಾಗಿದೆ.

**ಜಹಾಜ್ ಮಹಲ್ :**

ಆಸರ್ ಮಹಲ್ ಪಕ್ಕದಲ್ಲಿ ಆದರ ಭಾಗದಂತಿರುವ ಒಂದಕ್ಕೊಂದು ಸೇರಿಕೊಂಡ ಕಟ್ಟಡಗಳ ಸಮುಚ್ಚಯವಿದೆ. ಆ ಪೈಕಿ ಹಾಳುಬಿದ್ದ ಒಂದು ಕಟ್ಟಡವೇ ಜಹಾಜ್ ಮಹಲ್. ಈ ಕಟ್ಟಡಗಳಲ್ಲಿ ನೌಕಾದಳದ ಆಡಳಿತ ಕಛೇರಿಗಳಿದ್ದವೆಂದು ಹೇಳಲಾಗಿದೆ. ಆಗ ಬಿಜಾಪುರ ನೌಕದಳವನ್ನು ಹೊಂದಿತ್ತು. ಈಗ ಜಹಾಜ್ ಮಹಲ್ ಬೋಳು ಗೋಡೆಗಳು, ಬಾಗಿಲುಗಳಿಲ್ಲದ ಪ್ರವೇಶದ್ವಾರಗಳು ಮತ್ತು ಕಿಟಕಿಗಳನ್ನು ಹೊಂದಿದೆ.

**ಪಾನಿ ಮಹಲ್ :**

ಸಾಲ್ ಮಹಲ್ ಬಳಿ ಸಣ್ಣ ಕಂದಕದ ಮೇಲಿರುವ ಪಾನಿಮಹಲ್ ಮತ್ತು ಜಲಮಹಲ್ ಆದಿಲ್ ಶಾಹಿಗಳ ಮನರಂಜನಾ ತಾಣಗಳಾಗಿದ್ದವು. ಇವು ಚಿಕ್ಕದಿದ್ದರೂ ಸುಂದರವಾದ ವಿನ್ಯಾಸಕ್ಕೆ ಹೆಸರಾಗಿವೆ.

**ತಾಜ್ ಬಾವಡಿ :**

ಬಿಜಾಪುರದ ಅನೇಕ ಕೆರೆಕಟ್ಟೆಗಳನ್ನು ಹಿಂದೆ ನಗರದ ಮುಖ್ಯವಾದ ನೀರು ಸರಬರಾಜು ಮೂಲಗಳನ್ನಾಗಿ ಉಪಯೋಗಿಸಲಾಗುತ್ತಿತ್ತು. ಈ ಪೈಕಿ ಚಾಂದ್ ಬಾವಡಿ ಮತ್ತು ತಾಜ್ ಬಾವಡಿಗಳು ಪ್ರಮುಖ ನೀರು ಪೂರೈಕೆ ಮೂಲಗಳಾಗಿದ್ದವು. ಇವುಗಳ ವಾಸ್ತು ಸೌಂದರ್ಯ ಅದ್ವಿತಿಯ.

**ಲಂಡಾ ಕಸಬ್ ತೋಪು :**

ನಗರದ ಕೋಟೆಗೋಡೆಯ ಪಶ್ಚಿಮ ಭಾಗದ ಮಧ್ಯೆ ಲಂಡಾ ಕಸಬ್ ಬುರುಜು ಇದ್ದು, ಈ ಬೃಹತ್ ಫಿರಂಗಿಯನ್ನು ಅದರ ಮೇಲೆ ಇಡಲಾಗಿದೆ. ಇದು ೨೧ ಅಡಿ ೭ ಇಂಚು ಉದ್ದವಿದ್ದು, ಕೆಳಭಾಗ ೪ ಅಡಿ ೪ ಇಂಚು ವ್ಯಾಸವನ್ನು ಹೊಂದಿದೆ. ಇದರ ಮುಖಭಾಗ ೪ ಅಡಿ ೫ ಇಂಚು ಇದ್ದು, ಸುಮಾರು ೪೭ ಟನ್‌ಗಳ ತೂಕವುಳ್ಳದ್ದಾಗಿದೆ. ಇದನ್ನು ಆ ಕಾಲದ ಇತರೆ ಕಬ್ಬಿಣದ ಫಿರಂಗಿಗಳಂತೆ ನಿರ್ಮಿಸಲಾಗಿದೆ. ಫಿರಂಗಿಯನ್ನು

ಕಬ್ಬಿಣದ ತಿರುಗಣಿಯ ಮೇಲಿರಿಸಲಾಗಿತ್ತು. ಆದರೀಗ ಇದು ಮರದ ದಿಮ್ಮಿಗಳ ಮೇಲಿದೆ. ಇದರ ಮುಖಭಾಗಕ್ಕೆ ಪೆಟ್ಟು ಬಿದ್ದಂತಿದ್ದು, ಬಹುಶಃ ಔರಂಗಜೇಬನು ಆಕ್ರಮಣ ಮಾಡಿದಾಗ ಅವನ ಫಿರಂಗಿದಳ ಸಿಡಿಸಿದ ಗುಂಡುಗಳಿಂದ ಒಡೆಯಲ್ಪಟ್ಟಿರಬಹುದು. ಇದೇ ಬುರುಜಿನ ಇನ್ನೊಂದು ಕಡೆ ೫ ಅಡಿ ೯ ಇಂಚು  ಉದ್ದ ಮತ್ತು ೯ ಇಂಚು ಬಾಯಿ ಅಳತೆ ಇರುವ ಚಿಕ್ಕ ಕಬ್ಬಿಣದ ಫಿರಂಗಿಯಿದೆ. ೨೫೦ ವರ್ಷಗಳಿಗೂ ಮೀರಿ ಮರ್ತುಜಾಬಾದ್ ಫಿರಂಗಿ ಉಪರಿ ಬುರುಜು ಮತ್ತು ಅಲ್ದಿ ಬುರುಜಿನ ಫಿರಂಗಿಗಳು ಹಾಗೂ ನಗರ ಖಾನಾದ ಮುಂಭಾಗದಲ್ಲಿರುವ ಫಿರಂಗಿಗಳು ಬಿಜಾಪುರದಲ್ಲಿ ಪ್ರಮುಖವಾದ ಇತರೆ ಫಿರಂಗಿಗಳು ಕಂಡುಬರುತ್ತವೆ.

ಇವುಗಳ ಜೊತೆಗೆ ಕುಮಟಗಿ ಮಹಲ್, ಐನಾಪುರ ಮಹಲ್ ಮತ್ತು ಹಾಸಿಂ ದೀರ್ ದರ್ಗಾ ಅಥವಾ ಸಮಾಧಿ, ಹಾಜಿ ಹಾಸನ್ ಸಮಾಧಿ, ಮಹ್ತರ್ ಮಹಲ್, ಅರಸ್ ಮಹಲ್ , ಅದಾಲತ್ ಮಹಲ್, ಆನಂದ ಮಹಲ್, ಗಗನ್ ಮಹಲ್, ಚರ್ಚು, ಸಾತ್ಮಂಜಿಲ್, ಅಂಡೂ ಮಸಿದಿ, ಉಪರಿ ಬಾವಡಿ, ಚಾಂದ್ ಬಾವಡಿ, ಇಬ್ರಾಹಿಂ ರೋಜಾ ಅಫ್ಜಲ್ ಖಾನ್ ಸ್ಮಾರಕ, ಸಂಗೀತ ಮಹಲ್, ಜೈನ ದೇವಾಲಯ, ಸಿದ್ಧರಾಮೇಶ್ವರ ದೇವಾಲಯ ಹಾಗೂ  ನರಸಿಂಹ ದೇವಾಲಯಗಳ ವಾಸ್ತುಶೈಲಿಯ ಪರಂಪರೆಯ ಸ್ಮಾರಕಗಳನ್ನು ಒಂದು ವರದಿ ಮಾಡಿ ೨೦೧೪ ರಲ್ಲಿ ಯುನೆಸ್ಕೋಗೆ ವರದಿ ನೀಡಿದೆ. ಇವುಗಳನ್ನು ಮುಂದಿನ ಪೀಳಿಗೆಗೆ ಸಂರಕ್ಷಿಸುವ ಉದ್ದೇಶವನ್ನು ಹೊಂದಿದೆ.

ಉತ್ತರ ಕರ್ನಾಟಕದ ಬಯಲು ಸೀಮೆಯಲ್ಲಿರುವ ಐಹೊಳೆ, ಬಾದಾಮಿ ಹಾಗೂ ಬಿಜಾಪುರಗಳನ್ನು ೨೦೧೪-೧೫ ರಲ್ಲಿ ವಿಶ್ವಪಾರಂಪರಿಕ ತಾಣಗಳ ಪಟ್ಟಿಗೆ ಸೇರಿಸಲು ಪ್ರಸ್ತಾವನೆ ಸಲ್ಲಿಸಲಾಗಿದೆ. ೧೯೯೭ ಕ್ಕೂ ಪೂರ್ವದಲ್ಲಿ ಈ ಮೂರು ನಗರಗಳು ಬಿಜಾಪುರ ಜಿಲ್ಲೆಯಲ್ಲಿ ಇದ್ದವು. ಬಿಜಾಪುರದಿಂದ ಬಾಗಲಕೋಟೆ ಜಿಲ್ಲೆಯಾಗಿ ರಚನೆಗೊಂಡ ನಂತರ ಐಹೊಳೆ ಮತ್ತು ಬಾದಾಮಿ ಬಾಗಲಕೋಟೆ ಜಿಲ್ಲೆಯಲ್ಲಿ ಸೇರಿದವು. ಚಾಲುಕ್ಯರ ಅಪರೂಪದ ವಾಸ್ತುಶಿಲ್ಪಕ್ಕೆ ಸಾಕ್ಷಿಯಾಗಿರುವ ಈ ಜಿಲ್ಲೆಯ ಐಹೊಳೆ ಮತ್ತು ಬಾದಾಮಿ ಐತಿಹಾಸಿಕ ನಗರಗಳನ್ನು ಯುನೆಸ್ಕೋದ ವಿಶ್ವಪರಂಪರೆ ಪಟ್ಟಿಗೆ ಸೇರಿಸಲು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಪ್ರಸ್ತಾವನೆ ಸಲ್ಲಿಸಿದೆ. ಇದರೊಂದಿಗೆ ಪ್ರತ್ಯೇಕವಾಗಿ ಬಿಜಾಪುರ ಕೂಡ ಸೇರಿದೆ. ಐತಿಹಾಸಿಕ ಮಹತ್ವದ ಕಟ್ಟಡಗಳನ್ನು, ಸ್ಮಾರಕಗಳನ್ನು ಸಂರಕ್ಷಿಸುವ ನಿಟ್ಟಿನಲ್ಲಿ ಭಾರತ ಸರ್ಕಾರವು ೨೦೧೦ರಲ್ಲಿ[೬೧] ಐತಿಹಾಸಿಕ ಸ್ಮಾರಕಗಳು, ಪ್ರಾಚ್ಯತಾಣ ಹಾಗೂ ಅವಶೇಷಗಳ

ಕಾಯ್ದೆಗೆ ಅನುಮೋದನೆ ನೀಡಿದ ಬಳಿಕ ರಾಷ್ಟ್ರದೆಲ್ಲೆಡೆ ಸ್ಮಾರಕಗಳ ರಕ್ಷಣೆಗೆ ವಿಶೇಷ ಮಹತ್ವ ನೀಡುತ್ತಿರುವ ಹೊತ್ತಿನಲ್ಲಿಯೇ, ಚಾಲುಕ್ಯರ ಆಡಳಿತದ ಐತಿಹ್ಯವನ್ನು ಸಾರುವ ಪ್ರದೇಶಗಳನ್ನು ವಿಶ್ವಪರಂಪರೆಯ ಪಟ್ಟಿಗೆ ಸೇರಿಸುವ ಕುರಿತಂತೆ ಪ್ರಸ್ತಾವನೆ ಸಲ್ಲಿಸುವ ಮೂಲಕ ಇನ್ನಷ್ಟು ರಕ್ಷಣೆಗೆ ಮುಂದಾಗಿದೆ.

ಐಹೊಳೆಯಲ್ಲಿ ಚಾಲುಕ್ಯರಿಗಿಂತಲೂ ಮುಂಚೆಯೇ ಮೂರನೆಯ ಶತಮಾನದಲ್ಲಿ ದೇವಾಲಯ ನಿರ್ಮಾಣದ ಕುರುಹುಗಳು ಕಂಡುಬಂದಿವೆ. ಆದ್ದರಿಂದ ಜಾಗತಿಕ ಪರಂಪರೆ ಪಟ್ಟಿಗೆ ಸೇರಿಸಲು ಇವು ಅತ್ಯಂತ ಸೂಕ್ತವಾಗಿವೆ. ಐಹೊಳೆಯ ದುರ್ಗಗುಡಿ ಹಾಗೂ ಬಾದಾಮಿಯ ಅಗಸ್ತ್ಯ ಕೆರೆಯ ಬಳಿ ಇರುವ ನಾಲ್ಕು ಗುಹೆಗಳು ಅಪರೂಪದ ವಾಸ್ತುಶಿಲ್ಪಕ್ಕೆ ಹೆಸರಾಗಿದ್ದು, ವಿಶ್ವಪರಂಪರೆ ಪಟ್ಟಿಯಲ್ಲಿ ಸೇರ್ಪಡೆಯಾಗುವುದರಿಂದ ಯುನೆಸ್ಕೋದಿಂದ ಆರ್ಥಿಕ ನೆರವು ದೊರೆತು ಇವುಗಳ ಸಂರಕ್ಷಣೆಗೆ ಅನುಕೂಲವಾಗಲಿದೆ.

ದಕ್ಷಿಣ ಕರ್ನಾಟಕದ ಪ್ರದೇಶದಲ್ಲಿರುವ ಪ್ರಮುಖ ತಾಣಗಳಾದ ಬೇಲೂರು-ಹಳೇಬೀಡು, ಸೋಮನಾಥಪುರ ಹಾಗೂ ಶ್ರವಣಬೆಳಗೊಳ ಅರೆಮಲೆನಾಡು ಪರಿಸರದಲ್ಲಿದ್ದು ಉತ್ತಮವಾದ ವಾಸ್ತುಶೈಲಿಯ ಕಲಾ ಕೇಂದ್ರಗಳಾಗಿವೆ ಇಲ್ಲಿ ಪ್ರಾಚೀನ ಗಂಗರಿಂದ ಹಿಡಿದು ವಿಜಯನಗರ ಹಾಗೂ ಮೈಸೂರು ಒಡೆಯರ ಕಾಲದವರೆಗೂ ಜೀರ್ಣೋದ್ಧಾರಗೊಂಡ ವಾಸ್ತುಮಾದರಿಗಳಿವೆ. ಈ ಪ್ರದೇಶಗಳ ಸಂರಕ್ಷಣೆಗೆ ಹಾಗೂ ವಿಶ್ವಪಾರಂಪರಿಕ ತಾಣಗಳ ಪಟ್ಟಿಗೆ ಸೇರ್ಪಡೆ ಮಾಡಲು ೨೦೧೪ರಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ ನಾಮ ನಿರ್ದೇಶನಕ್ಕಾಗಿ ವರದಿ ನೀಡಿದೆ. ಅರೆಮಲೆನಾಡು ಸೀಮೆಯಲ್ಲಿರುವ ಸಂಭಾವ್ಯ ತಾಣಗಳನ್ನು ಅವುಗಳ ಸ್ಥಳನಾಮ, ರಾಜಕೀಯ ಇತಿಹಾಸ ಮತ್ತು ಅಲ್ಲಿನ ಪ್ರಮುಖ ಸಂರಕ್ಷಿತ ಸ್ಮಾರಕಗಳ ಪಟ್ಟಿಯ ಜೊತೆಗೆ ಕಲಾವೈಭವವನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ.

**ಬೇಲೂರು-ಹಳೇಬೀಡು :**

ಬೇಲೂರು ಹಾಸನ ಜಿಲ್ಲೆಯ ಒಂದು ತಾಲೂಕು ಕೇಂದ್ರ, ಯಗಚಿ ನದಿ ದಡದಲ್ಲಿರುವ ಈ ಪಟ್ಟಣ ಸುಪ್ರಸಿದ್ದ ಐತಿಹಾಸಿಕ ಹಾಗೂ ಕರ್ನಾಟಕದ ಪ್ರಮುಖ ಪ್ರವಾಸಿ ಕೇಂದ್ರಗಳಲ್ಲೊಂದಾಗಿದೆ. ಸ್ಥಳ ಪುರಾಣ ಮತ್ತು ಐತಿಹ್ಯಗಳ ಪ್ರಕಾರ ಇದಕ್ಕೆ ಮೊದಲಿಗೆ ವೇಲಾಪುರ, ವೇಲೂರು ಎಂದು ಹೆಸರುಗಳಿದ್ದವು.[೬೨] ಕೆಲವೊಂದು ಶಾಸನಗಳಲ್ಲಿ ಬೇಲುಹೂರು ಎಂದು ಕರೆಯಲಾಗಿದೆ. ಇಲ್ಲಿರುವ ಕೇಶವ ದೇವಾಲಯದ ಖ್ಯಾತಿ ಮತ್ತು

ಪ್ರಾಂತ್ಯಗಳಿಂದ ಅಭಿನವ ಕ್ಷೋಣಿ, ವೈಕುಂಟ, ದಕ್ಷಿಣ ವಾರಣಾಸಿ ಎಂದು ಈ ಸ್ಥಳಗಳನ್ನು ಕರೆಯಲಾಗಿದೆ.[೬೩]

ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿಗೆ ಸೇರಿದ ಒಂದು ಪ್ರಮುಖ ಗ್ರಾಮವೇ ಹಳೇಬೀಡು. ಇದು ಸಹ ಇತಿಹಾಸ ಪರಂಪರೆಯನ್ನು ಹೊಂದಿರುವ ಪ್ರಸಿದ್ದ ಸ್ಥಳ. ಇದೊಂದು ಸಾಮಾನ್ಯ ಹಳ್ಳಿಯಾಗಿದ್ದರೂ ಲೋಕ ಪ್ರಸಿದ್ಧವಾದ ಕಲಾಕ್ಷೇತ್ರವಾಗಿ ಉಳಿದುಕೊಂಡಿದೆ. ಈ ನೆಲೆ ೧೦ನೆಯ ಶತಮಾನದಲ್ಲಿಯೇ ಒಂದು ಸಣ್ಣ ಹಳ್ಳಿಯಾಗಿ ಪ್ರಾಯಶಃ ಹುಟ್ಟಿಕೊಂಡಿರಬೇಕು. ಆಗ ಅಲ್ಲಿ ನಿರ್ಮಿಸಿದ ದೊಡ್ಡ ಕೆರೆಯಿಂದ ಇದಕ್ಕೆ ದೋರಸಮುದ್ರವೆಂಬ ಹೆಸರು ಬಂದಿದೆ.[೬೪]

**ರಾಜಕೀಯ ಇತಿಹಾಸ :**

ಹೊಯ್ಸಳ ಪೂರ್ವ ಕಾಲದ ಬೇಲೂರಿನ ಬಗ್ಗೆ ವಿಶ್ವಸ್ವನೀಯ ಮಾಹಿತಿಗಳಾವುವು ದೊರಕಿಲ್ಲ. ಈಗಲೂ ಬೇಲೂರಿನ ಸುತ್ತ ಇರುವ ಕೋಟೆ ಕಂದಕ, ಇಲ್ಲಿನ ವಿಷ್ಣುಸಮುದ್ರ ಹಾಗೂ ಸುತ್ತಲೂ ಕೆರೆಗಳು ಹಾಗೂ ದೇವಾಲಯಗಳು ಇದರ ಪ್ರಾಚೀನತೆಗೆ ಸಾಕ್ಷಿಗಳಾಗಿ ಉಳಿದಿವೆ.[೬೫] ಹೊಯ್ಸಳರ ಎರಡನೆಯ ವಿನಯಾದಿತ್ಯ ತನ್ನ ರಾಜಧಾನಿಯನ್ನು ಸೊಸೆವೂರಿನಿಂದ ಇಲ್ಲಿಗೆ ವರ್ಗಾಯಿಸಿದ. ಮುಂದೆ ಅವನ ಕಾಲದಲ್ಲೇ ದೊರಸಮುದ್ರ ಅಥವಾ ಹಳೇಬೀಡಿಗೆ ರಾಜಧಾನಿ ವರ್ಗಾವಣೆಯಾಯಿತು. ಆದರೆ ವಿಷ್ಣುವರ್ಧನನ ಕಾಲದವರೆಗೂ ಇವೆರಡೂ ಅವಳಿ ರಾಜಧಾನಿಗಳಾಗಿದ್ದವು. ೧೧೧೬ರಲ್ಲಿ ವಿಷ್ಣುವರ್ಧನ ತಲಕಾಡಿನ ಚೋಳರ ಮೇಲಿನ ವಿಜಯದ ಸ್ಮಾರಕವಾಗಿ ರಾಜಧಾನಿ ಬೇಲೂರಿನಲ್ಲಿ ವಿಜಯನಾರಾಯಣ ದೇವಾಲಯವನ್ನು ೧೧೧೭ರಲ್ಲಿ ಪ್ರತಿಷ್ಠಾಪಿಸಿದ. ೧೧೩೬ರ ಹೊತ್ತಿಗೆ ಬೇಲೂರು, ದೊರಸಮುದ್ರ ಮತ್ತು ವಿಷ್ಣುಸಮುದ್ರ ಈ ಮೂರು ರಾಜಧಾನಿಗಳಾಗಿದ್ದವೆಂದು ತಿಳಿಯುತ್ತದೆ. ವಿಷ್ಣುವರ್ಧನನ ಆಳ್ವಿಕೆಯ ಅಂತ್ಯದವರೆಗೆ ದೋರಸಮುದ್ರಕ್ಕೆ ಹೆಚ್ಚು ಪ್ರಾಶಸ್ತ್ಯ ದೊರಕಲಾರಂಭಿಸಿತು.[೬೬] ಕ್ರಮೇಣ ಬೇಲೂರು ರಾಜಧಾನಿಯ ಪ್ರತಿಷ್ಠೆಯನ್ನು ಕಳೆದುಕೊಂಡರೂ ಸೈನ್ಯಶಿಬಿರವಾಗಿಯೂ ಪವಿತ್ರ ವಿಷ್ಣುಕ್ಷೇತ್ರವಾಗಿಯೂ ಹೊಯ್ಸಳ ಯುಗದುದ್ದಕ್ಕೂ ತನ್ನ ಪ್ರಾಧಾನ್ಯವನ್ನು ಉಳಿಸಿಕೊಂಡಿತು. ೧೩೧೧ರಲ್ಲಿ ಮಲ್ಲಿಕ್‌ಕಾಫರ್ ಹೊಯ್ಸಳ ರಾಜ್ಯದ ಮೇಲೆ ದಾಳಿ ಮಾಡಿ ರಾಜಧಾನಿ ದೋರಸಮುದ್ರವನ್ನು ಹಾಳುಗೆಡಪಿದಾಗ ಬೇಲೂರು ಮತ್ತೇ ರಾಜಧಾನಿಯ ಸ್ಥಾನ ಪಡೆಯಿತು. ಆದರೆ ಆಗಿನ

ದೊರೆ ಮುಮ್ಮಡಿ ಬಲ್ಲಾಳ ತಿರುವಣ್ಣಾಮಲೆ ಸೇರಿದಂತೆ ಬೇರೆ ಬೇರೆ ಕಡೆಗಳಲ್ಲಿ ನೆಲೆವೀಡುಗಳನ್ನು ಮಾಡಿಕೊಂಡು ಆಳಿದ.

ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಬೇಲೂರು ಪ್ರಾಂತೀಯ ಕೇಂದ್ರವಾಗಿದ್ದಂತೆ ತಿಳಿದುಬರುತ್ತದೆ ಇದು ಮೊದಲು ಬಲಂ ಪ್ರಾಂತದಲ್ಲಿದ್ದು, ಅನಂತರ ೧೩೯೭ರಲ್ಲಿ ಬೇಲೂರು ನಾಯಕರ ವಶದಲ್ಲಿತ್ತು. ಕೃಷ್ಣದೇವರಾಯ ಎರ್ರ ಕೃಷ್ಣಪ್ಪನಾಯಕನಿಗೆ ಬೇಲೂರು ರಾಜ್ಯವನ್ನು ಬಳುವಳಿಯಾಗಿ ೧೫೪೨ರಲ್ಲಿ ಕೊಟ್ಟದ್ದಾಗಿ ಶಾಸನಗಳಿಂದ ತಿಳಿದುಬರುತ್ತದೆ.[೬೭] ಇವನ ವಂಶದವರು ೧೭೯೯ರ ವರೆಗೆ ಇಲ್ಲಿ ಆಳುತಿದ್ದರು. ಆದರೆ ಶಿವಪ್ಪನಾಯಕ ಬೇಲೂರು ರಾಜ್ಯವನ್ನು ೧೬೫೪ರಲ್ಲಿ ವಶಪಡಿಸಿಕೊಂಡು ವಿಜಯನಗರದ ದೇಶ ಭ್ರಷ್ಟ ದೊರೆ ಶ್ರೀರಂಗರಾಯನಿಗೆ ಕೊಟ್ಟನು. ೧೬೯೪ರಲ್ಲಿ ಮೈಸೂರು ದೊರೆ ಚಿಕ್ಕದೇವರಾಜ ಮತ್ತು ಇಕ್ಕೇರಿಯ ನಾಯಕರಲ್ಲಿ ನಡೆದ ಒಡಂಬಡಿಕೆ ಪ್ರಕಾರ ಬೇಲೂರು ಪಾಳೆಯಗಾರರ ವಂಶದವರಿಗೆ ಅದನ್ನು ಹಿಂತಿರುಗಿಸಲಾಯಿತು. ಇವರು ಮುಂದೆ ಸಕಲೇಶಪುರ ತಾಲೂಕಿನ ಐಗೂರಿನಿಂದ ಆಳತೊಡಗಿದರು. ಹೈದರ್ ಮತ್ತು ಟಿಪ್ಪು ಆಳ್ವಿಕೆಯಲ್ಲಿ ಇದು ಮತ್ತೆ ಮೈಸೂರು ರಾಜ್ಯಕ್ಕೆ ಸೇರಿತು.[೬೮] ೧೭೯೯ರಲ್ಲಿ ಟಿಪ್ಪುವಿನ ಮರಣಾನಂತರ ಪಾಳೆಯಗಾರ ವಂಶದ ವೆಂಕಟಾದ್ರಿ ಸ್ವತಂತ್ರನಾಗಿರಲೆತ್ನಿಸಿ ಬ್ರಿಟಿಷರ ವಿರುದ್ಧ ಹೋರಾಡಲು ೧೮೦೧ರಲ್ಲಿ ಅವನನ್ನು ಸೆರೆಹಿಡಿದು ಗಲ್ಲಿಗೇರಿಸಲಾಯಿತು.

**ಬೇಲೂರಿನ ಸಂರಕ್ಷಣಾ ಸ್ಮಾರಕಗಳು :**

ಬೇಲೂರಿನಲ್ಲಿ ಚನ್ನಕೇಶವ ದೇವಾಲಯ ಸಂಕೀರ್ಣದ ಪ್ರವೇಶಕ್ಕೆ ಪೂರ್ವ ದಿಕ್ಕಿನಲ್ಲಿ ಎರಡು ದ್ವಾರಗಳಿವೆ. ಒಂದು ಗೋಪುರವಿರುವ ಮಹಾದ್ವಾರ ಹಾಗೂ ಮತ್ತೊಂದು ಆನೆಬಾಗಿಲು. ಪ್ರಮುಖದ್ವಾರದ ಮೇಲಿರುವ ಗೋಪುರವು ಐದು ತಲಗಳಿಂದ ಕೂಡಿದ್ದು, ಶಾಲಾ ಮಾದರಿಯ ಶಿಖರದ ಮೆಲ್ತುದಿಯಲ್ಲಿ ಐದು ಕಲಶಗಳಿವೆ. ಈ ದೇವಾಲಯ ಸಂಕೀರ್ಣದಲ್ಲಿ ಚನ್ನಕೇಶವ ದೇವಾಲಯ, ಕಪ್ಪೆಚೆನ್ನಿಗರಾಯ ದೇವಾಲಯ, ಸೌಮ್ಯನಾಯಕಿ ದೇವಾಲಯ, ವೀರನಾರಾಯಣ ದೇವಾಲಯ, ಆಂಡಾಳ್ ದೇವಾಲಯ, ವಾಸುದೇವ ತೀರ್ಥ, ಉತ್ತರದ ಗೋಡೆ ಬದಿಯಲ್ಲಿ ಕೈಸಾಲೆ ಮಂಟಪಗಳು, ವಾಯುವ್ಯ ದಿಕ್ಕಿನಲ್ಲಿ ಧಾನ್ಯಗಾರ, ಆಗ್ನೇಯ ದಿಕ್ಕಿನಲ್ಲಿ ವಾಹನ ಮಂಟಪ, ಯಾಗಶಾಲೆ, ಪಾಠಶಾಲೆಗಳು ಇವೆ. ಇವುಗಳ ಜೊತೆಗೆ ಪ್ರಾಚೀನ ಕೆರೆಗಳು, ಶಂಕರೇಶ್ವರ ದೇವಾಲಯ ಸಂಕೀರ್ಣ ವಿಷ್ಣುಸಮುದ್ರ

ದೇವಾಲಯಗಳ ಸಂಕೀರ್ಣ, ಕಲ್ಯಾಣಿ, ಮುಖ್ಯವಾಗಿ ಬಿಡಿ ಶಿಲ್ಪಗಳಾದ ದರ್ಪಣ ಸುಂದರಿ, ಶಿಲಾಬಾಲಿಕೇಯರ ಶಿಲ್ಪಗಳು ಮತ್ತು ಉತ್ಸವಗಳು ಇಲ್ಲಿನ ಕಲಾಸಂಪತ್ತುಗಳಾಗಿವೆ.

**ಚನ್ನಕೇಶವ ದೇವಾಲಯ ಸಂಕೀರ್ಣ :**

ಮುಖ್ಯ ದೇವಾಲಯವನ್ನು ಹೊಯ್ಸಳ ದೊರೆ ವಿಷ್ಣುವರ್ಧನನು ಕ್ರಿ.ಶ.೧೧೧೭ರಲ್ಲಿ ಕಟ್ಟಿಸಿದನು.[೧೯] ಇದು ಹಲವಾರು ಪ್ರಾಚೀನ ಕಟ್ಟಡಗಳ ಸಂಕೀರ್ಣವಾಗಿದೆ. ಇಲ್ಲಿ ಮುಖ್ಯವಾಗಿ ಚನ್ನಕೇಶವ ದೇವಾಲಯವು ಅದನ್ನು ಸುತ್ತುವರಿದಂತೆ ಕಪ್ಪೆಚೆನ್ನಿಗರಾಯ, ಸೌಮ್ಯನಾಯಕಿ, ವೀರನಾರಾಯಣ ಮುಂತಾದ ದೇವಾಲಯಗಳಿವೆ. ೧೩ನೆಯ ಶತಮಾನದ ಆರಂಭದಲ್ಲಿ ಹೊಯ್ಸಳ ವೀರಬಲ್ಲಾಳನು ಅಳವಡಿಸಿದ ವಾಸುದೇವ ಪುಷ್ಕರಣಿ ವಿಜಯನಗರದ ಎರಡನೆಯ ಹರಿಹರನ ಕಾಲದ ೧೩೯೭ರಲ್ಲೂ ನಿರ್ಮಿಸಿದ ರಾಜಗೋಪುರ ವಿಜಯನಗರ ದೇವರಾಯನ ಆಡಳಿತ ಕಾಲದಲ್ಲಿ ೧೪೧೪ರಲ್ಲಿ ನಿರ್ಮಿಸಲ್ಪಟ್ಟ ಕಾರ್ತಿಕ ದೀಪಸ್ತಂಭ, ಉಯ್ಯಾಲೆ ಮಂಟಪಗಳಲ್ಲದೆ ಕೈಸಾಲೆ, ಎರಡು ಸೇದುವ ಬಾವಿಗಳು ಕಂಡುಬರುತ್ತವೆ. ಚನ್ನಕೇಶವ ದೇವಾಲಯವು ದ್ರಾವಿಡ ಮಾದರಿಯಲ್ಲಿದ್ದು ಎರಡು ಗರ್ಭಗೃಹಗಳನ್ನು ಹೊಂದಿದ್ದು, ದೇವಾಲಯದಲ್ಲಿ ದರ್ಪಣ ಸುಂದರಿ, ಶುಕಭಾಷಿಣಿ, ವಸಂತನ ನೃತ್ಯ ಮುರೊಜಮೊದೋ, ಕೋತಿಯ ಕುಪಿತೆ, ವೀರಾಯೋಚಿತೆ, ಮಹಾಭಾರತ ಕಥಾಕೋಶ ಶೃಂಗಾರ, ತ್ರಿಭಂಗಿ ನೃತ್ಯ, ಡೋಲು ನೃತ್ಯ, ತಾಂಡವೇಶ್ವರಿ, ಮುರಳೀಧರ[೨೦] ಮುಂತಾದ ಶಿಲ್ಪಗಳಿವೆ.

**ಶಂಕೇಶ್ವರ ದೇವಾಲಯ ಸಂಕೀರ್ಣ :**

ಬೇಲೂರು ಕೋಟೆಯ ಉತ್ತರಕ್ಕೆ ಕಳಸದ ಕೆರೆಯ ಪಶ್ಚಿಮ ದಂಡೆಯ ಮೇಲೆ ಈ ಸ್ಮಾರಕವು ನಿರ್ಮಾಣವಾಗಿದೆ. ೧೩ನೆಯ ಶತಮಾನದ ಹೊಯ್ಸಳ ಶೈಲಿಯ ಶಂಕೇಶ್ವರರ ದೇವಾಲಯವು ಗರ್ಭಗೃಹ, ಸುಖನಾಸಿ ಮತ್ತು ಶಿಖರ ಭಾಗಗಳನ್ನು ಹೊಂದಿದ್ದು ಶಿಥಿಲಾವಸ್ಥೆಯಲ್ಲಿದೆ. ದೇವಾಲಯದ ಉತ್ತರ ಪಾರ್ಶ್ವದಲ್ಲಿ ವಿಜಯನಗರ ಕಾಲದ ಹೊಯ್ಸಳರ ಕಟ್ಟಡಗಳ ಬಿಡಿಭಾಗಗಳಿಂದ ನಿರ್ಮಿಸಿದ ಪಾರ್ವತಿ ಗುಡಿಯಿದೆ. ಇದು ವಿಜಯನಗರ ಶೈಲಿಯದ್ದು ಶಿಥಿಲವಾಗಿದೆ. ಮುಖ್ಯದೇವಾಲಯದ ಮುಂಭಾಗದಲ್ಲಿ ಹೊಯ್ಸಳ ಶೈಲಿಯ ದೊಡ್ಡ ನಂದಿಯ ವಿಗ್ರಹವಿದೆ. ಇದರ ಉತ್ತರ ಬದಿಯಲ್ಲಿ ೧೫ ಅಡಿ ಎತ್ತರದ ಕಲ್ಲಿನ ದೀಪ ಸ್ತಂಭವಿದೆ.

**ವಿಷ್ಣು ಸಮುದ್ರ ದೇವಾಲಯಗಳ ಸಂಕೀರ್ಣ :**

ಇದು ಬೇಲೂರಿನ ದೊಡ್ಡ ಕೆರೆ. ಕೆರೆಯ ಪಶ್ಚಿಮ ದಂಡೆಯಲ್ಲಿ ದಿಬ್ಬದ ಮೇಲೆ ಅಮೃತೇಶ್ವರ ದೇವಾಲಯವಿದೆ. ದೇವಾಲಯ ಶಿಥಿಲವಾಗಿದ್ದು ಆವರಣದಲ್ಲಿ ದೇವಾಲಯದ ಬಿಡಿಭಾಗಗಳು ಮತ್ತು ಶಿಲ್ಪಗಳು ಬಿದ್ದಿವೆ. ಈ ಸಂಕೀರ್ಣದಲ್ಲಿ ತೆಪ್ಪದಕೊಳ ಎಂಬ ಪುಷ್ಕರಣಿ, ಸೊಪಾನಗಳು, ತೆಪ್ಪೋತ್ಸವ ಮಂಟಪ, ನಿವೇದನ ಮಂಟಪ, ಪಾತಾಳೇಶ್ವರ ದೇವಾಲಯವಿದೆ. ಕೋಟೆಯ ಉತ್ತರಕ್ಕೆ ಇರುವ ಈ ದೇವಾಲಯ ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದ್ದು ಮಣ್ಣಿನಲ್ಲಿ ಮುಚ್ಚಿದ ಅಧಿಷ್ಠಾನ ಭಾಗವು ಗರ್ಭಗೃಹ, ಭಿತ್ತಿ ಸೇರಿದಂತೆ ೨೬ ಭಿತ್ತಿ ಶಿಲ್ಪಗಳು ಮತ್ತು ೧೨ ಇತರ ಶಿಲ್ಪಗಳಿವೆ. ದೇವಾಲಯದ ಮುಂಭಾಗದಲ್ಲಿ ನಂದಿಯ ಶಿಲ್ಪವಿದೆ.[೭೧]

**ಪ್ರಾಚೀನ ಕೆರೆಗಳು :**

ಬೇಲೂರಿಗೆ ಸಂಬಂಧಿಸಿದಂತೆ ಎರಡಯ ಪ್ರಾಚೀನ ಕೆರೆಗಳು ಇಲ್ಲಿವೆ. ಆ ಕೆರೆಗಳೆಂದರೆ ಕಳಸದ ಕೆರೆ ಮತ್ತು ವಿಷ್ಣು ಸಮುದ್ರ. ಕಳಸದ ಕೆರೆಯು ಕೋಟೆಯ ಉತ್ತರ ಬದಿಯಲ್ಲಿ ಕಳಸಿನ ಕೆರೆ ಎಂದು ಜನಪ್ರಿಯವಾಗಿರುವ ಕೆರೆ. ಶಾಸನಗಳು ಇದನ್ನು ಹೊಸಲ ಸಮುದ್ರ ಎಂದು ಹೆಸರಿವೆ.[೭೨] ೧೩ನೆಯ ಶತಮಾನದಲ್ಲಿ ಇದನ್ನು ಶುದ್ಧಿಕರಿಸಿ ಬಲಪಡಿಸಲಾಗಿತ್ತು. ಪ್ರಾಚೀನ ಬೇಲೂರಿನ ರಕ್ಷಣಾ ವ್ಯವಸ್ಥೆಯಲ್ಲಿ ಇದು ಗಮನಾರ್ಹ ಪಾತ್ರವಹಿಸಿತ್ತು. ಈ ಕೆರೆಯ ಪಶ್ಚಿಮ ದಡದಲ್ಲಿ ಶಂಕರೇಶ್ವರ ದೇವಾಲಯದ ಸಂಕೀರ್ಣವಿದೆ. ವಿಷ್ಣುಸಮುದ್ರ ಬೇಲೂರಿನ ದೊಡ್ಡಕೆರೆ ಕೋಟೆಯ ದಕ್ಷಿಣ ಬದಿಯಲ್ಲಿರುವ ಈ ಪ್ರಾಚೀನ ಕೆರೆ ವಿಷ್ಣುವರ್ಧನ ಕಾಲದಲ್ಲೇ ಪುಟ್ಟದಾಗಿ ಅಸ್ತಿತ್ವದಲ್ಲಿತ್ತು. ನರಸಿಂಹನ ಆಡಳಿತದಲ್ಲಿ ಪದ್ಮರಸ ಎಂಬಾತನು ವಿಶಾಲವಾಗಿ ಇದನ್ನು ನಿರ್ಮಿಸಿದನು. ಮುಂದೆ ವಿಜಯನಗರದ ಅರಸ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ೧೫೨೫ರಲ್ಲಿ ಈ ಕೆರೆಯ ಉತ್ತರ ದಿಕ್ಕಿನ ಮೂಲೆಯು ತೆಪ್ಪದ ಕೊಳವಾಗಿ ಪರಿಪರ್ತಿತವಾಯಿತು. ಇದರ ಮೂರು ಬದಿಗಳಲ್ಲಿ ಸೋಪಾನಗಳುಳ್ಳ ಮಂಟಪಗಳು ಹಾಗೂ ದೇವಾಲಯವೂ ಇದೆ.

**ಪ್ರಾಚೀನ ಕಲ್ಯಾಣಿ :**

ಚನ್ನಕೇಶವ ದೇವಾಲಯದ ಈಶಾನ್ಯ ದಿಕ್ಕಿನಲ್ಲಿರುವ ಕಲ್ಯಾಣಿಯನ್ನು ಶಾಸನಗಳಲ್ಲಿ ವಾಸುದೇವ ಸರೋವರ[೭೩] ಎಂದು ಉಲ್ಲೇಖಿಸಲಾಗಿದೆ. ಇದನ್ನು ೧೧೭೫ರಲ್ಲಿ ಇಮ್ಮಡಿ ಹೊಯ್ಸಳ ಬಲ್ಲಾಳನು ನಿರ್ಮಿಸಿದನು. ಈ ಕಲ್ಯಾಣಿಯ ದ್ವಾರಗಳ ಪಾರ್ಶ್ವದಲ್ಲಿ ಆನೆಗಳ ಮೂರ್ತಿಗಳಿವೆ. ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ಮಂಟಪಗಳಿವೆ. ನಾಲ್ಕು ಪಾರ್ಶ್ವಗಳಿಂದ

ತಳಕ್ಕೆ ಕಿರಿದಾಗಿ ಹೋಗುವ ೩೫ ಮೆಟ್ಟಿಲುಗಳಿಂದ ಕೂಡಿದ ಈ ಕಲ್ಯಾಣಿಯಲ್ಲಿ ದೇವಾಲಯದ ಕೆಲವು ನಿಯೋಜಿತ ಉತ್ಸವಗಳನ್ನು ಆಚರಿಸಲಾಗುತ್ತದೆ.

**ಹಳೇಬೀಡು ಸಂರಕ್ಷಣಾ ಸ್ಮಾರಕಗಳು :**

ಹಳೇಬೀಡಿನ ದೇವಾಲಯ ಸಮೂಹ ನೋಡಲು ಅತ್ಯಂತ ಸುಂದರವಾಗಿದೆ. ದೇವಾಲಯದ ಭಿತ್ತಿಶಿಲ್ಪಗಳು ಅಪೂರ್ವ ಕೆತ್ತನೆಗಳಿಂದ ಕೂಡಿದ್ದು ಕಲೆ ಮತ್ತು ವಾಸ್ತುಶಿಲ್ಪದ ಪರಿಪೂರ್ಣತೆಗೆ ಮಾದರಿಯಾಗಿವೆ. ಹಳೇಬೀಡಿನ ದೇವಾಲಯಗಳ ಹೊರ ಭಿತ್ತಿಯಲ್ಲಿ ಇರುವ ಶಿಲ್ಪಗಳನ್ನು ಮತ್ತು ವಾಸ್ತುಶಿಲ್ಪದ ಸಂಗ್ರಹಾಲಯವೆಂದೇ ಅನಿಸಿದರೆ ಆಶ್ಚರ್ಯವಿಲ್ಲ, ಈ ದೇವಾಲಯದ ಕಲಾಕೃತಿಗಳು ಅಷ್ಟೊಂದು ಅದ್ಭುತವಾಗಿದೆ. ಹಳೇಬೀಡಿನಲ್ಲಿ ಸಂರಕ್ಷಿತ ಸ್ಮಾರಕಗಳ ಪಟ್ಟಿಯನ್ನು ಯುನೆಸ್ಕೋ ಸಂಸ್ಥೆಗೆ ನೀಡಲಾಗಿದೆ.

೧. ಹೊಯ್ಸಳೇಶ್ವರ ದೇವಾಲಯ

೨. ಕೇದಾರೇಶ್ವರ ದೇವಾಲಯ

೩. ರಂಗನಾಥ ದೇವಾಲಯ

೪. ಬಸದಿಗಳು

೫. ಇತರೆ ದೇವಾಲಯಗಳು

**ಹೊಯ್ಸಳೇಶ್ವರ ದೇವಾಲಯ :**

ಈ ದೇವಾಲಯವು ಪ್ರಾಯಶಃ ಹೊಯ್ಸಳ ದೇವಾಲಯಗಳಲ್ಲಿಯೇ ಅತ್ಯಂತ ವಿಶಾಲವಾದ ಹಾಗೂ ಸಂಪೂರ್ಣ ಅಲಂಕರಣಗಳನ್ನು ಹೊಂದಿದ ಏಕೈಕ ದೇವಾಲಯವೆಂದು ಹೇಳಬಹುದು. ಇದರ ಸರಿಸಾಟಿಯಾಗಿ ಬೇಲೂರಿನ ಚನ್ನಕೇಶವ ದ್ವಿಕೂಟಾಚಲ ದೇವಾಲಯವಾಗಿದೆ. ಕ್ರಿ.ಶ. ೧೧೨೧ರ[೭೪] ಶಾಸನದ ಪ್ರಕಾರ ವಿಷ್ಣುವರ್ಧನನ ಮಂತ್ರಿಯಾದ ಕೇತುಮಲ್ಲ ದಂಡನಾಯಕನು ತನ್ನ ರಾಜನ ಗೌರವಾರ್ಥವಾಗಿ ಹೊಯ್ಸಳೇಶ್ವರ ದೇವಾಲಯವನ್ನು ಕಟ್ಟಿಸಿದನು ಎಂದು ತಿಳಿದುಬರುತ್ತದೆ. ಹೊಯ್ಸಳೇಶ್ವರ ಮತ್ತು ಶಾಂತಳೇಶ್ವರ ಜೋಡಿ ದೇವಾಲಯಗಳ ಗರ್ಭಗೃಹಗಳಲ್ಲಿರುವ ಲಿಂಗಗಳು ಬೃಹದಾಕಾರವಾಗಿದ್ದು ಎತ್ತರವಾದ ಪಾಣಿಪೀಠಗಳ ಮೇಲಿವೆ. ಮೊದಲನೆಯ ಗರ್ಭಗೃಹದಲ್ಲಿ ಹೊಯ್ಸಳೇಶ್ವರ ಹಾಗೂ ಇನ್ನೊಂದು ಗರ್ಭಗೃಹದಲ್ಲಿ ರಾಣಿ ಶಾಂತಲೆಯ ಗೌರವಾರ್ಥವಾಗಿ ಪ್ರತಿಷ್ಠಾಪಿಸಲ್ಪಟ್ಟಿರುವ ಶಾಂತಳೇಶ್ವರ ಲಿಂಗಗಳಿವೆ. ಎರಡು ಗರ್ಭಗೃಹಗಳ ಮುಂದೆ ಸುಖನಾಸಿ ಇದೆ. ಎರಡು ಗರ್ಭಗುಡಿಗಳಿಗೂ ಇರುವ ನವರಂಗಗಳನ್ನು ಒಂದು ಕೈಸಾಲೆಯ ಮೂಲಕ

ಸೇರಿಸಿದೆ. ದೇವಾಲಯದ ಕಂಬಗಳು ಚಿರುಕಿ ಯಂತ್ರದಲ್ಲಿ ಕಡೆದವುಗಳಾಗಿದ್ದು ಅವುಗಳಲ್ಲಿರುವ ಕಂಬಗಳು ತುಂಬಾ ಹೊಳಪಾಗಿವೆ. ಮಧ್ಯದಲ್ಲಿ ದಪ್ಪ ಕಂಬಗಳ ಮೇಲೆ ಮಣಿಹಾರಗಳೂ, ಕೀರ್ತಿಮುಖಗಳು ಮತ್ತು ಅಲಂಕಾರಿಕ ಪಟ್ಟಿಕೆಗಳನ್ನು ಸೊಗಸಾಗಿ ಮೂಡಿಸಲಾಗಿದೆ. ಗರ್ಭಗುಡಿಗಳ ನವರಂಗದ ಮುಂದೆ, ಪ್ರತ್ಯೇಕವಾಗಿ ಮುಖಮಂಟಪ ಹಾಗೂ ಬೃಹತ್ 'ನಂದಿ' ವಿಗ್ರಹಗಳಿವೆ.

ಹೊಯ್ಸಳೇಶ್ವರ ದೇವಾಲಯದ ಎದುರು ಇರುವ ನಂದಿ ವಿಗ್ರಹ ದೊಡ್ಡದಾಗಿದ್ದು, ಸುಮಾರು ೯ ಅಡಿ ಎತ್ತರವಾಗಿದೆ ನಂದಿಗೆ ಹಾಕಿರುವ ಸರಪಳಿ, ಗೆಜ್ಜೆಸರ ಮತ್ತು ನುಲಿಹಗ್ಗ ಇವುಗಳನ್ನೆಲ್ಲಾ ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಈ ನಂದಿ ಮಂಟಪದ ಹಿಂಭಾಗದಲ್ಲಿ ಸಪ್ತಶ್ವನ ಮತ್ತು ಅರುಣ ಸಮೇತ ಇರುವ ಸೂರ್ಯ ದೇವಾಲಯವಿದೆ. ಶಾಂತಳೇಶ್ವರ ದೇವಾಲಯದ ಎದುರು ಇರುವ ನಂದಿ ೮ ಅಡಿ ಎತ್ತರವಿದ್ದು, ಇದೂ ಸಹ ಆಕರ್ಷಕವಾಗಿದೆ ಕುಸುರಿ ಕೆಲಸದಲ್ಲಿ ಶಿಲ್ಪಕಲೆಯಲ್ಲಿ ಈ ದೇವಾಲಯದ ಕೆತ್ತನೆ ಅತ್ಯುತ್ತಮವಾದದ್ದು ದೇವಾನುದೇವತೆಗಳ, ಪುರಾಣ ಪುಣ್ಯಕಥೆಗಳ ಶಿಲ್ಪಗಳು, ಹಾಡುಗಾರ್ತಿಯರ, ನೃತ್ಯಗಾರ್ತಿಯರ ಹಾವಭಾವಗಳು, ವಾದ್ಯನಿರತರ, ವೀರರ, ಸೈನಿಕರ, ನರ್ತಕರ, ಆನೆರಥ, ಕುದುರೆ, ಕಾಲಾಳುಗಳು ಹಲವು ಬಗೆಯ ಪ್ರಾಣಿಪಕ್ಷಿಗಳು, ಗಿಡ ಬಳ್ಳಿಗಳು ಇಲ್ಲಿನ ಶಿಲ್ಪಗಳ ಕಲಾ ಪ್ರೌಢಿಮೆಯನ್ನು ಎತ್ತಿ ತೋರಿಸುತ್ತವೆ.

ಇತರೆ ಹೊಯ್ಸಳ ದೇವಾಲಯಗಳಂತೆ ಈ ದೇವಾಲಯವೂ ನಕ್ಷತ್ರಕಾರದ ೪ ಅಡಿ ಎತ್ತರದ ಜಗತಿಯ ಮೇಲೆ ನಿರ್ಮಾಣ ಮಾಡಲ್ಪಟ್ಟಿವೆ. ದೇವಾಲಯಕ್ಕೆ ನಾಲ್ಕು ದ್ವಾರಗಳಿವೆ ಪೂರ್ವದಲ್ಲಿ ಎರಡು ಮುಖ್ಯ ದ್ವಾರಗಳು ದಕ್ಷಿಣ ದಿಕ್ಕಿನಲ್ಲಿ ಒಂದು, ಉತ್ತರ ದಿಕ್ಕಿನಲ್ಲಿ ಇನ್ನೊಂದು ಪ್ರದಕ್ಷಿಣಾಕಾರವಾಗಿ ಮೊದಲು ಹೊಯ್ಸಳೇಶ್ವರ ದೇವಾಲಯದ ಮುಖ್ಯಪೂರ್ವದ್ವಾರದ ಕಡೆಯಿಂದ ಹೊರಟರೆ ಪೂರ್ವ ದ್ವಾರದಲ್ಲಿ ನಂದಿಕೇಶ್ವರ ಮತ್ತು ಭೃಂಗಿ ದ್ವಾರಪಾಲಕರ ವಿಗ್ರಹಗಳು, ದ್ವಾರದ ಮೇಲ್ಭಾಗದಲ್ಲಿ ನಟರಾಜ ವರುಣ–ವಾರಿಣಿ, ಬಲಭಾಗದಲ್ಲಿ ಬ್ರಹ್ಮ, ಎಡಭಾಗದಲ್ಲಿ ವಿಷ್ಣು, ಎರಡು ಕಡೆಯೂ ಮಕರ ತೋರಣದ ಸುಂದರ ಕೆತ್ತನೆಗಳಿವೆ.[೭೫]

ಪೂರ್ವ ಭಾಗದ ಭಿತ್ತಿಯಲ್ಲಿ ಹನ್ನೊಂದು ಸಾಲುಗಳಲ್ಲಿ ಅಲಂಕಾರಿಕ ಪಟ್ಟಿಗಳು ಕ್ರಮವಾಗಿ ಕೆಳಗಿನಿಂದ ಮೇಲಕ್ಕೆ ಶಕ್ತಿಯ ಪ್ರತೀಕವಾದ ಆನೆಗಳ ಸಾಲು, ಧೈರ್ಯದ ಪ್ರತೀಕ ಸಿಂಹಗಳ ಸಾಲು, ಅಲಂಕಾರದ ಪ್ರತೀಕವಾದ ಹೂಬಳ್ಳಿಗಳ ಸುರಳಿ ಸಾಲು, ವೇಗಕ್ಕೆ

ಪ್ರತೀಕವಾದ ಅಶ್ವಗಳ ಸಾಲು, ಮತ್ತೆ ಅಲಂಕಾರಿಕ ಪಟ್ಟಿಕೆಗಳ ಸಾಲು, ರಾಮಾಯಣ, ಮಹಾಭಾರತ ಮತ್ತು ಭಾಗವತದ ಪುರಾಣ ಕಥೆಗಳ ಸಾಲು ಶಿಲ್ಪಯುದ್ಧದ ದೃಶ್ಯಗಳು, ಎದುರು ಬದುರು ಇರುವ ಆನೆ, ರಥಗಳು, ಕಾಲಾಳುಗಳು, ನಂತರದಲ್ಲಿ ಮಕರ ಪ್ರಾಣಿಗಳು, ಹಂಸಗಳ ಸಾಲು, ಸಂಗೀತ ಮತ್ತು ನೃತ್ಯಗಾರರು, ಹತ್ತನೆ ಸಾಲಿನಲ್ಲಿ ಕ್ಷೇತ್ರಪಾಲಕರು ದೇವಾಲಯ ರಕ್ಷಕರು ಹಾಗೂ ಕೊನೆಯ ಸಾಲಿನಲ್ಲಿ ಸಾಮಾನ್ಯ ಜನಜೀವನ ಹಾಗೂ ಮಿಥುನ ಶಿಲ್ಪಗಳು, ಮೇಲ್ಭಾಗದಲ್ಲಿ ಸ್ತಂಭಗಳ ಮಧ್ಯೆ ಜಾಲಂಧ್ರಗಳು ಗಾಳಿ ಬೆಳಕಿಗಾಗಿರುವ ವ್ಯವಸ್ಥೆಯಾಗಿದೆ.

ದಕ್ಷಿಣ ಬಾಗಿಲು ಆಕರ್ಷಕವಾಗಿದ್ದು, ಮೇಲ್ಭಾಗದಲ್ಲಿ ಮಕರ ತೋರಣ, ದ್ವಾರದ ಎರಡು ಬದಿಗಳಲ್ಲಿ ಮನೋಹರವಾದ ದ್ವಾರಪಾಲಕ ವಿಗ್ರಹಗಳಿವೆ. ಮೆಟ್ಟಿಲುಗಳ ಎರಡೂ ಬದಿಯಲ್ಲಿ ಪುಟ್ಟ ಗೂಡುಗಳಿವೆ ಗೂಡುಗಳ ಮೇಲೆ ಶಿಖರಗಳಿವೆ ಪ್ರದಕ್ಷಿಣವಾದ ಜಗತಿಯಿಂದ ಕೆಳಗೆ ಇಳಿಯುವ ಮೆಟ್ಟಿಲುಗಳ ಎರಡೂ ಬದಿಯಲೂ ಸಹ ಪುಟ್ಟ ಗೂಡುಗಳಿದ್ದು, ಗೂಡುಗಳ ಮೇಲೆ ವಿಮಾನ ಗೋಪುರಗಳಿವೆ. ಈ ದ್ವಾರದ ಮುಂದೆ ದೇವಾಲಯದ ಆವರಣದಲ್ಲಿ ಪೂರ್ವಾಭಿಮುಖವಾಗಿರುವ ಬೃಹತ್ ಗಣಪತಿಯ ವಿಗ್ರಹವಿದೆ. ಆ ವಿಗ್ರಹದ ಎದುರಲ್ಲಿ ಪಶ್ಚಿಮಾಭಿಮುಖವಾಗಿ ಹೊಯ್ಸಳ ಲಾಂಛನವಾದ ಸಳನ ವಿಗ್ರಹವಿದ್ದು ಇದು ಸಂಪೂರ್ಣವಾಗಿ ಭಿನ್ನವಾಗಿದೆ.

**ಕೇದಾರೇಶ್ವರ ದೇವಾಲಯ :**

ಕಲಾದೃಷ್ಟಿಯಿಂದ ಮನಸೆಳೆಯುವ ಹಳೇಬೀಡಿನ ಮತ್ತೊಂದು ದೇವಾಲಯವೆಂದರೆ ಕೇದಾರೇಶ್ವರ ದೇವಾಲಯ. ಈ ದೇವಾಲಯವು ಹೊಯ್ಸಳೇಶ್ವರ ದೇವಾಲಯದ ನೈಋತ್ಯ ದಿಕ್ಕಿನಲ್ಲಿದ್ದು, ಬಸ್ತಿಹಳ್ಳಿ ಬಸದಿಗಳ ನಂತರ ೧/೨ ಕಿ.ಮೀ. ಪೂರ್ವಕ್ಕೆ, ಊರಿನ ಹೊರವಲಯದಲ್ಲಿ ಕೆರೆಯ ದಂಡೆಯಲ್ಲಿದೆ. ಸುಮಾರು ೧೫ ಡಿಗ್ರಿ ಆಗ್ನೇಯಕ್ಕೆ ಮುಖಮಾಡಿ ಕಟ್ಟಲ್ಪಟ್ಟಿದೆ. ಈ ದೇವಾಲಯವನ್ನು ಎರಡನೆಯ ವೀರಬಲ್ಲಾಳನ ರಾಣಿ ಕೇತಲಾದೇವಿಯು ತನ್ನ ಮನೆದೇವರ ಹೆಸರಿನಲ್ಲಿ ಕಟ್ಟಿಸಿದಳೆಂದು ತಿಳಿದುಬರುತ್ತದೆ. ಈ ದೇವಾಲಯವನ್ನು ಹದಿನಾರು ಕೊನಗಳುಳ್ಳ ನಕ್ಷತ್ರಾಕಾರದ ಜಗತಿಯ ಮೇಲೆ ನಿರ್ಮಾಣ ಮಾಡಲಾಗಿದ್ದು, ನೆಲಮಟ್ಟದ ಮೂಲೆಗಳಲ್ಲಿರುವ ಆನೆಗಳು ದೇವಾಲಯವನ್ನು ಹೊತ್ತು ನಿಂತಿರುವಂತೆ ರೂಪಿಸಲಾಗಿದೆ. ಈ ದೇವಾಲಯದಲ್ಲಿ ಮೂರು ಗರ್ಭಗೃಹಗಳಿವೆ, ಗರ್ಭಗೃಹಗಳಲ್ಲಿ ಯಾವ

ವಿಗ್ರಹಗಳೂ ಕಾಣಸಿಗುವುದಿಲ್ಲ. ದೇವಾಲಯದ ಒಳಭಾಗದಲ್ಲಿ ಸುಂದರ ಕಂಬಗಳಿವೆ. ಭುವನೇಶ್ವರಿಗಳು ಸುಂದರವಾಗಿ ಕೇತ್ತಲ್ಪಟ್ಟಿವೆ.

ದೇವಾಲಯದ ಮುಖ್ಯ ದ್ವಾರದ ಮತ್ತು ಎಡ ಬಲದ ಗೋಡೆಯಲ್ಲಿ ಜಾಲಂಧ್ರಗಳನ್ನು ಅಳವಡಿಸಲಾಗಿದೆ. ಹೊರಗೋಡೆಯ ಭಿತ್ತಿಯಲ್ಲಿ ರಾಮಾಯಣ, ಮಹಾಭಾರತ ಮತ್ತು ಭಾಗವತಕ್ಕೆ ಸಂಬಂಧಿಸಿದ ಸುಂದರವಾದ ಕೆತ್ತನೆಗಳಿವೆ.[೭೬] ಕೆಳಭಾಗದಿಂದ ಇರುವ ಪಟ್ಟಿಕೆಗಳಲ್ಲಿ ಆನೆಗಳು, ಕುದುರೆ, ಸಿಂಹಗಳು, ಲತೆಗಳು, ಮಕರಗಳು, ಹಂಸಗಳ ಮುಂತಾದ ಚಿತ್ರ ಪಟ್ಟಿಕೆಗಳಿವೆ. ಇದರಲ್ಲಿ ಹಂಸಗಳು ಮತ್ತು ಮೊಸಳೆಗಳು ಅತ್ಯಂತ ಮನಮೋಹಕವಾಗಿವೆ. ಪ್ರಭಾವಳಿಗಳನ್ನು ಸುಂದರ ಪ್ರತಿಮೆಗಳನ್ನು, ರಾಮಾಯಣ, ಮಹಾಭಾರತದ ಮತ್ತು ಭಾಗವತದ ಕಥಾನಕ ಶಿಲ್ಪಗಳನ್ನು ಇಲ್ಲಿ ರೂಪಿಸಲಾಗಿದೆ. ಈ ಶಿಲ್ಪಗಳು ಅತ್ಯಾಕರ್ಷಕವಾಗಿದ್ದು, ಅಡ್ಡ ಪಟ್ಟಿಕೆಗಳ ಮೇಲೆ ವಿಷ್ಣುವಿನ ಅವತಾರಗಳ ಶಿಲ್ಪಗಳು ಮತ್ತು ಹಲವಾರು ದೇವದೇವಿಯರ ಶಿಲ್ಪಗಳಿವೆ, ಕೈಲಾಸವನ್ನು ಮೇಲೆತ್ತುತ್ತಿರುವ ರಾವಣ, ಸೂರ್ಯ ಮತ್ತು ಬ್ರಹ್ಮ ವಿಗ್ರಹಗಳು ಮೋಹಕವಾಗಿವೆ.

**ರಂಗನಾಥ ದೇವಾಲಯ :**

ಇದೊಂದು ಪ್ರಾಚೀನ ದೇವಾಲಯವಾಗಿದ್ದು ದೇವಾಲಯದ ಗರ್ಭಗೃಹದಲ್ಲಿ ಅನಂತಶಯನ ೬ ಅಡಿ ಎತ್ತರವುಳ್ಳ ವಿಗ್ರಹದ ಪ್ರಭಾವಳಿಯಲ್ಲಿ ಅಷ್ಟದಿಕ್ಪಾಲಕರನ್ನು ಕೆತ್ತಿದ್ದಾರೆ. ಸುಖನಾಸಿ ಮತ್ತು ಮಂಟಪದ ಪ್ರಾಚೀನ ಭಾಗಗಳಿವೆ.

**ಬಸದಿಗಳು :**

ಹಳೇಬೀಡಿನ ಸುತ್ತುಮುತ್ತಲು ಹಲವು ಬಸದಿಗಳನ್ನು ನಾವು ಕಾಣುತ್ತೇವೆ. ಹತ್ತಿರದಲ್ಲಿ ಇರುವ ಬಸ್ತಿಹಳ್ಳಿ ಎಂಬಲ್ಲಿ ಸುಂದರವಾದ ಮೂರು ಬಸದಿಗಳಿವೆ. ಅವುಗಳಲ್ಲಿ ಜೈನ ತೀರ್ಥಂಕರರಾದ ಪಾರ್ಶ್ವನಾಥ, ಆದಿನಾಥ ಮತ್ತು ಶಾಂತಿನಾಥ ಇವರುಗಳ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ. ಕ್ರಿ.ಶ.೧೧೩೩ರಲ್ಲಿ ತನ್ನ ರಾಜನ ದಿಗ್ವಿಜಯದ ನೆನಪಿನಲ್ಲಿ ವಿಷ್ಣುವರ್ಧನನ ಆಪ್ತ ದಂಡನಾಯಕ ಗಂಗರಾಜನ ಮಗ ಪ್ರಧಾನ ಬೊಪ್ಪನು, ತಂದೆಯ ಹೆಸರಿನಲ್ಲಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದನು. ಅದೇ ಸಮಯದಲ್ಲಿ ವಿಷ್ಣುವರ್ಧನನಿಗೆ ಪ್ರೋತ್ಸಾಹವಾದ್ದರಿಂದ ಅದಕ್ಕೆ ವಿಜಯ ಪಾರ್ಶ್ವನಾಥನೆಂದು[೭೭] ಹೆಸರಿಸಿ ಪ್ರಸಾದವನ್ನು ಸ್ವೀಕರಿಸಿದನೆಂಬ ಐತಿಹ್ಯವಿದೆ. ಈ ಪಾರ್ಶ್ವನಾಥ ವಿಗ್ರಹವು ಭವ್ಯ ಹಾಗೂ ಪ್ರಶಾಂತವಾಗಿದ್ದು,

೪.೫ ಮೀಟರ್ ಎತ್ತರವಿದ್ದು ನಿಂತ ಭಂಗಿಯಲ್ಲಿದೆ. ಏಳು ಹೆಡೆಯ ಸರ್ಪವೊಂದು ಈ ವಿಗ್ರಹದ ತಲೆಯ ಮೇಲಿದೆ ಯಕ್ಷ ಮತ್ತು ಯಕ್ಷಿಯರ ಸಣ್ಣ ವಿಗ್ರಹಗಳಿವೆ.

ಕ್ರಿ.ಶ ೧೧೩೮ರಲ್ಲಿ, ಆದಿನಾಥ ಬಸದಿಯನ್ನು ಸೇನಾಧಿಪತಿ ಹೆಗ್ಗಡೆ ಮಲ್ಲಿಮಯ್ಯ ಎಂಬುವವನು ಕಟ್ಟಿಸಿದನು. ಆದಿನಾಥ ವಿಗ್ರಹವು ಕುಳಿತ ಭಂಗಿಯಲ್ಲಿದ್ದು ೧ ಮೀಟರ್ ಎತ್ತರವಾಗಿದೆ. ವಿಗ್ರಹದ ಅಕ್ಕಪಕ್ಕ ಗೋಮುಖ, ಯಕ್ಷ ಮತ್ತು ಚಕ್ರೇಶ್ವರಿಯದ್ದೆಂದು ಹೇಳಲಾಗುವ ಸಣ್ಣ ಸಣ್ಣ ವಿಗ್ರಹಗಳಿವೆ. ಮುಖ್ಯ ವಿಗ್ರಹವು ಭಿನ್ನವಾಗಿರುವುದರಿಂದ ಹಜಾರದಲ್ಲಿಯೇ ಇರಿಸಲಾಗಿದೆ.[೭೮] ಕ್ರಿ.ಶ.೧೧೯೨ರಲ್ಲಿ ಇಮ್ಮಡಿ ಬಲ್ಲಾಳನ ಕಾಲದಲ್ಲಿ ನಿರ್ಮಿಸಲಾಗಿದೆಯೆಂದು ಹೇಳಲಾಗುವ 'ಶಾಂತಿನಾಥ ಬಸದಿ'ಯಲ್ಲಿ ೫ ಮೀಟರ್ ಎತ್ತರವಿರುವ ಶಾಂತಿನಾಥ ತೀರ್ಥಂಕರರ ಹಿಂಭಾಗದಲ್ಲಿ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಕಿಂಪುರುಷ ಯಕ್ಷ ಮತ್ತು ಮಹಾಮಾನಸಿ ಯಕ್ಷಿಯ ವಿಗ್ರಹಗಳು ಅಕ್ಕಪಕ್ಕಗಳಲ್ಲಿವೆ. ಈ ಬಸದಿಯ ಮುಂಭಾಗದಲ್ಲಿ ೭ ಮೀಟರ್ ಎತ್ತರವಿರುವ ಬ್ರಹ್ಮಸ್ತಂಭದ ಮೇಲೆ ಯಕ್ಷನ ವಿಗ್ರಹವಿದೆ.

**ಇತರೆ ದೇವಾಲಯಗಳು :**

ಹಳೇಬೀಡಿನ ಸುತ್ತುಮುತ್ತ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ದೇವಾಲಯಗಳು, ಶಾಸನಗಳು ಇವೆ. ಹತ್ತಿರದಲ್ಲಿ ಇರುವ ಬಸ್ತಿಹಳ್ಳಿಯ ಆಗ್ನೇಯಕ್ಕೆ ವಿರಕ್ತ ಮಠವೊಂದಿದ್ದು, ಹತ್ತಿರದಲ್ಲೆ ಈಶ್ವರ ದೇವಾಲಯವಿದೆ. ಹಳೇಬೀಡಿಗೆ ಆಗ್ನೇಯದಲ್ಲಿ ಕೋಟೆಗೋಡೆಯ ಹತ್ತಿರ ವೀರಭದ್ರ ದೇವಾಲಯವಿದೆ. ಈ ಗುಡಿಯ ಸುಖನಾಸಿ ಮತ್ತು ನವರಂಗಗಳನ್ನು ಹೊಯ್ಸಳರ ಕಾಲದಲ್ಲಿ ನಿರ್ಮಾಣ ಮಾಡಿದವುಗಳಾಗಿವೆ ಎಂದು ಹೇಳುತ್ತಾರೆ. ಹೊರಾವರಣದ ಗೋಡೆಯಲ್ಲಿ ಆನೆ ಸಾಲು, ಲತಾ ಪಟ್ಟಿಕೆಗಳೂ ಇದ್ದು ಸುಮಾರು ಎರಡೂವರೆ ಅಡಿ ಎತ್ತರದ ವಿಗ್ರಹಗಳು ಕೆತ್ತಲ್ಪಟ್ಟಿವೆ. ಗರ್ಭಗುಡಿಯಲ್ಲಿರುವ ವೀರಭದ್ರ ವಿಗ್ರಹ ಆಧುನಿಕ ರೀತಿಯಲ್ಲಿ ಆರು ಅಡಿ ಎತ್ತರದ್ದಾಗಿದೆ. ಕೈಯಲ್ಲಿ ಕತ್ತಿ, ತ್ರಿಶೂಲ, ಡಮರುಗವನ್ನು ಹಿಡಿದಿರುವ ವಿಗ್ರಹ ಮೇಲೆ ಪುಷ್ಪ ತೋರಣ, ಮಲ್ಹಾರ ತೋರಣಗಳಿವೆ.

**ಸೋಮನಾಥಪುರ :**

ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ ತಾಲ್ಲೂಕಿನಲ್ಲಿರುವ ಸೋಮನಾಥಪುರವು ಚಾರಿತ್ರಿಕ ಸ್ಥಳವಾಗಿದೆ. ಇದು ತಾಲ್ಲೂಕು ಕೇಂದ್ರದಿಂದ ೧೦ ಕಿ.ಮೀ. ದೂರದಲ್ಲಿ ಕಾವೇರಿ ನದಿಯ ಎಡದಂಡೆಯ ಮೇಲಿದೆ. ಹೊಯ್ಸಳ ಶಿಲ್ಪಕಲೆಗೆ ಪ್ರಸಿದ್ಧವಾದ

ಸುಂದರ ಪ್ರಕೃತಿಯ ಮಧ್ಯದಲ್ಲಿರುವ ಒಂದು ಪ್ರೇಕ್ಷಣಿಯ ಸ್ಥಳ. ೧೩ನೆಯ ಶತಮಾನದಲ್ಲಿ ಇದೊಂದು ಅಗ್ರಹಾರವಾಗಿದ್ದೂ, ಈ ಅಗ್ರಹಾರಕ್ಕೆ ಸರ್ವಸಾಮಾನ್ಯ ಮಹಾಅಗ್ರಹಾರ, ವಿದ್ಯಾನಿಧಿ ಪ್ರಸನ್ನ ಸೋಮನಾಥಪುರ ಅಥವಾ ಚತುರ್ವೇದಿ ಮಂಗಲವೆಂಬ ಹೆಸರಿದ್ದಿತು.[೭೯] ಕಲೆ ಮತ್ತು ವಿದ್ಯಾಭ್ಯಾಸಕ್ಕೆ ಈ ಅಗ್ರಹಾರ ಆಗರವಾಗಿತ್ತೆಂದು ಶಾಸನಗಳು ವರ್ಣಿಸುತ್ತವೆ. ಹೊಯ್ಸಳ ಚಕ್ರವರ್ತಿ ಮೂರನೆಯ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಆತನ ಸಂಧಿವಿಗ್ರಹಿಯೂ, ಮಂತ್ರಿ ಮತ್ತು ದಂಡನಾಯಕನೂ ಆಗಿದ್ದ ಸೋಮನಾಥ ಈ ಅಗ್ರಹಾರವನ್ನು ಕ್ರಿ.ಶ. ೧೨೬೮ರಲ್ಲಿ[೮೦] ನಿರ್ಮಿಸಿ ತನ್ನ ಹೆಸರಿನಲ್ಲಿ ಸೋಮನಾಥಪುರವೆಂದು ಕರೆದನು.

ಕ್ರಿ.ಶ.೧೩೧೧ರಲ್ಲಿ ದೆಹಲಿಯ ದೊರೆ ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕನಾದ ಮಲ್ಲಿಕ್‌ಕಾಫ್‌ರನು ನಡೆಸಿದ ದಾಳಿಯಲ್ಲಿ ಈ ದೇಗುಲವು ಭಾಗಶಃ ವಿರೂಪಗೊಂಡಿತು. ಅದೃಷ್ಟವಶಾತ್ ಮೂರು ಶಿಖರಗಳೂ ಹಾನಿಗೊಳಪಡದೆ ಹಾಗೆಯೇ ಉಳಿದುಕೊಂಡಿವೆ. ಆದರೂ ಹಲವು ವಿಗ್ರಹಗಳು ಭಿನ್ನವಾಗಿದ್ದ ಕಾರಣ ೨೦ನೆಯ ಶತಮಾನದಲ್ಲಿ ಆಗಿನ ಮೈಸೂರು ಸರ್ಕಾರವು ದೇವಾಲಯದ ಸಂಕೀರ್ಣವನ್ನು ಜೀರ್ಣೋದ್ಧಾರ ಮಾಡಿತೆಂದು ಎಲ್ಲ ಮೂಲಗಳಿಂದ ತಿಳಿದುಬರುತ್ತದೆ. ಈಗ ದೇವಾಲಯವು ಭಾರತೀಯ ಪುರಾತತ್ವ ಇಲಾಖೆಯ ನಿರ್ವಹಣೆಗೊಳಪಟ್ಟಿದೆ. ಈ ತ್ರಿಕೂಟಾಚಲ ದೇವಾಲಯವು ಅತ್ಯಂತ ಸುಂದರವಾದ ಕೆತ್ತನೆಗಳಿಂದ ಕೂಡಿದೆ.

**ಸಂರಕ್ಷಣಾ ಸ್ಮಾರಕಗಳು :**

ಸೋಮನಾಥಪುರದಲ್ಲಿ ಹಲವು ಪ್ರಾಚೀನ ದೇವಾಲಯಗಳಿವೆ ಅವುಗಳು ಈ ಕೆಳಗಿನಂತಿವೆ.

೧. ಕೇಶವ ದೇವಾಲಯ

೨. ಲಕ್ಷ್ಮೀ ನರಸಿಂಹ ದೇವಾಲಯ

೩. ಪಂಚಲಿಂಗೇಶ್ವರ ದೇವಾಲಯ

**ಕೇಶವ ದೇವಾಲಯ :**

ಈ ದೇವಾಲಯವು ನಕ್ಷತ್ರಕಾರದ ತಳಪಾಯವನ್ನು ಹೊಂದಿದ್ದು, ದೇವಾಲಯದಲ್ಲಿ ಮೂರು ಗರ್ಭಗುಡಿಗಳಿವೆ. ಇವು ನಕ್ಷತ್ರಾಕಾರದಲ್ಲಿ ಕಂಡುಬರುತ್ತವೆ. ಪ್ರತಿಯೊಂದು ಗರ್ಭಗುಡಿಗೂ ಪ್ರತ್ಯೇಕ ಶಿಖರಗಳೂ ಇವೆ. ಹದಿನಾರು ಕೋನಗಳ ವಿನ್ಯಾಸವಿರುವ ಈ

ಶಿಖರಗಳೂ ಕೆಳಗಿನಿಂದ ಮೇಲಕ್ಕೆ ಸಣ್ಣದಾಗುತ್ತ ಬರುವಂತೆ ವಿನ್ಯಾಸಗೊಂಡಿದ್ದು, ಮೇಲ್ಭಾಗದಲ್ಲಿ ಕಲ್ಲಿನ ಕಳಶವಿದೆ. ಈ ಮೂರು ಶಿಖರಗಳೂ ಅತ್ಯುತ್ತಮ ಶಿಲ್ಪ ವೈಭವ ಕೆತ್ತನೆಗಳನ್ನು ಹೊಂದಿದ್ದು, ವಿನ್ಯಾಸ, ಗಾತ್ರ ಹಾಗೂ ಕೆತ್ತನೆಯಲ್ಲಿ ಏಕ ರೂಪತೆಯನ್ನು ಹೊಂದಿದ್ದು, ಅತ್ಯಂತ ಆಕರ್ಷಕವಾಗಿದೆ. ಪ್ರಧಾನ ಶಿಖರ ಪಶ್ಚಿಮದಲ್ಲಿದ್ದು, ಉಳಿದೆರಡು ಉತ್ತರ ಮತ್ತು ದಕ್ಷಿಣದಲ್ಲಿವೆ. ಇತರ ಹೊಯ್ಸಳ ದೇವಾಲಯಗಳಂತೆ ಈ ದೇವಾಲಯವು ಜಗತಿಯ ಮೇಲೆ ಕಟ್ಟಲ್ಪಟ್ಟಿದೆ. ಜಗತಿಯ ಮೂಲೆಗಳಲ್ಲಿ ಕೆಲವೆಡೆ ಆನೆಗಳಿವೆ. ಈ ಆನೆಗಳೂ ದೇವಾಲಯದ ಭಾರವನ್ನು ಹೊತ್ತಿರುವಂತೆ ಭಾಸವಾಗುತ್ತದೆ.

ದೇವಾಲಯದ ನೆಲಗಟ್ಟನ್ನು ಏರವುದಕ್ಕೆ ಪೂರ್ವ ದಿಕ್ಕಿನಲ್ಲಿ ಮಾತ್ರ ಮೆಟ್ಟಿಲುಗಳಿವೆ. ಮೆಟ್ಟಿಲುಗಳ ಎರಡು ಬದಿಯಲ್ಲಿಯೂ ಪುಟ್ಟ ಗೂಡುಗಳಿದ್ದು, ಅವುಗಳಲ್ಲಿ ದ್ವಾರಪಾಲಕ ಮೂರ್ತಿಗಳಿವೆ. ದೇವಾಲಯದ ದ್ವಾರದಲ್ಲಿಯೂ ಸುಂದರವಾದ ದ್ವಾರಪಾಲಕ ವಿಗ್ರಹಗಳಿವೆ. ಪ್ರದಕ್ಷಿಣಾಕಾರವಾಗಿ ದೇವಾಲಯದ ಹೊರಭಾಗದ ಮುಖಮಂಟಪದ ಅಧಿಷ್ಠಾನದಲ್ಲಿ, ಕೆಳಗಿನಿಂದ ಮೇಲಕ್ಕೆ ಕವಚ ಸಹಿತ ಆನೆಗಳ ಸಾಲು, ಅಲ್ಲಲ್ಲಿ ಮಾವುತರೂ, ಸೈನಿಕರೂ ಇದ್ದಾರೆ. ಮೇಲೆ ಅಶ್ವಾರೋಹಿಗಳ ಸಾಲು, ಅಲ್ಲಲ್ಲಿ ಕತ್ತಿ ಗುರಾಣಿ ಹಿಡಿದಿರುವ ಸೈನಿಕರು, ಮೇಲೆ ಲತಾಪಟ್ಟಿಕೆಗಳ ಸಾಲು ಅದರ ಮೇಲೆ ರಾಮಾಯಣ, ಮಹಾಭಾರತ ಮತ್ತು ಭಾಗವತದ ದೃಶ್ಯಗಳು, ಪೌರಾಣಿಕ ಕಥಾ ವಿಗ್ರಹಗಳು, ಅದರ ಮೇಲೆ ಸಣ್ಣ ಸ್ತಂಭಗಳ ಮಧ್ಯೆ ವಿಷ್ಣುವಿನ ನಾನಾ ರೂಪದ ವಿಗ್ರಹಗಳು, ಮತ್ತು ಸಣ್ಣ ಸಣ್ಣ ಗೋಪುರಗಳು ಮತ್ತೊಂದು ಲತಾಪಟ್ಟಿಕೆಯ ಸಾಲಿನ ಮೇಲೆ ವಿವಿಧ ಭಂಗಿಯಲ್ಲಿರುವ ಮಿಥುನ ಶಿಲ್ಪಗಳು, ಶೃಂಗಾರ ಶಿಲ್ಪಗಳನ್ನು ಕಾಣಬಹುದು. ಮೇಲೆ ಸ್ತಂಭಗಳ ಮಧ್ಯೆ ಜಾಲಂಧ್ರಗಳು ಗಾಳಿ ಬೆಳಕಿಗಾಗಿ ಇವೆ.

ಇನ್ನೂ ದೇವಾಲಯದ ಮುಖ್ಯ ಭಾಗ ಅಂದರೆ ಗರ್ಭಗುಡಿಗಳ ಹೊರಭಾಗದ ಭಿತ್ತಿಯ ಕೆಳಭಾಗದಲ್ಲಿ ಆರು ಅಡ್ಡ ಪಟ್ಟಿಕೆಗಳಿವೆ. ಕೆಳಗಿನಿಂದ ಮೇಲಕ್ಕೆ ಮೊದಲಿಗೆ ಆನೆಗಳ ಸಾಲು ಕೆಲವು ಮೂಲೆಗಳಲ್ಲಿ ಒಂದೇ ಮುಖ ಎರಡೂ ದೇಹಗಳಿರುವ ಆನೆ. ಅಲ್ಲೊಂದಿಲ್ಲೊಂದು ಕಡೆ ಮಾವುತರು, ಎರಡನೇ ಸಾಲಿನಲ್ಲಿ ಅಶ್ವಾರೋಹಿ ಶಸ್ತ್ರ ಸಜ್ಜಿತ ಸೈನಿಕರು ವಿವಿಧ ಭಂಗಿಗಳಲ್ಲಿದ್ದಾರೆ. ಮೂರನೆಯ ಸಾಲಿನಲ್ಲಿ ಲತಾ ಪಟ್ಟಿಕೆಗಳು, ಕೆಲವು ಮೂಲೆಗಳಲ್ಲಿ ಕೀರ್ತಿಮುಖ, ನಾಲ್ಕನೇ ಸಾಲಿನಲ್ಲಿ ರಾಮಾಯಣ, ಮಹಾಭಾರತ, ಭಾಗವತದ ಕಥೆಗಳು, ಈ ನಾಲ್ಕನೆಯ ಸಾಲಿನಲ್ಲಿ ಮುಖ್ಯವಾಗಿ ದಶರಥನು ತನ್ನ ರಾಣಿಯರೊಂದಿಗೆ ಕುಳಿತು ಋಷಿಗಳ ಉಪದೇಶ ಕೇಳುತ್ತಿರುವ ಚಿತ್ರಗಳಿವೆ. ಅಲ್ಲದೇ ಪುತ್ರಕಾಮೇಷ್ಟಿಯಾಗ

ಮಾಡುತ್ತಿರುವುದು, ರಾಮ, ಲಕ್ಷ್ಮಣ, ಭರತ, ಶತ್ರುಘ್ನರ ಜನನ, ರಾಮನು ಶಿವಧನಸ್ಸನ್ನು ಮುರಿದು ಸೀತೆಯನ್ನು ವರಿಸುವುದು, ದಶಕಂಠ ರಾವಣನು ಸೀತಾದೇವಿಯನ್ನು ತನ್ನ ವಿಮಾನದಲ್ಲಿ ಹೊತ್ತೊಯ್ಯುತ್ತಿರುವ ದೃಶ್ಯ, ಬಾಲಕನಾದ ಕೃಷ್ಣನು ಬೆಣ್ಣೆಯನ್ನು ಕದಿಯುತ್ತಿರುವ ದೃಶ್ಯ,[೮೧] ಪಾಂಡವರು-ಕೌರವರು ಇರುವ ಮರವನ್ನೇ ಅಲ್ಲಾಡಿಸಿ, ಅವರನ್ನೆಲ್ಲಾ ಕೆಳಗೆ ಕೆಡುವುತ್ತಿರುವ ದೃಶ್ಯ, ಭೀಮ ಬಕಾಸುರನಿಗಾಗಿ ಬಂಡಿಯಲ್ಲಿ ಆಹಾರ ಒಯ್ಯುತ್ತಿರುವ ದೃಶ್ಯ, ಬಕಾಸುರ ಸಂಹಾರ, ಮಹಾಭಾರತದ ಯುದ್ಧದ ಸನ್ನಿವೇಶಗಳು ರಥಗಳೂ, ಆನೆಗಳೂ, ಕಾಲಾಳುಗಳೂ, ಇತ್ಯಾದಿ. ಭಾಗವತದಲ್ಲಿ ಶೇಷಾಶಾಯಿ ವಿಷ್ಣು, ವಾಸುದೇವನು ಯಮುನಾ ನದಿಯನ್ನು ದಾಟುತ್ತಿರುವುದು, ಕೃಷ್ಣನು ಗೋವರ್ಧನ ಗಿರಿಯನ್ನು ಕಿರುಬೆರಳಿನಲ್ಲಿ ಎತ್ತಿ ಹಿಡಿದಿರುವುದು ಇತ್ಯಾದಿ ಚಿತ್ರಣಗಳನ್ನು ಸುಂದರವಾಗಿ ಕಂಡರಿಸಲಾಗಿದೆ.

ಪಟ್ಟಿಕೆಗಳ ಐದನೆಯ ಸಾಲಿನಲ್ಲಿ ಮಕರಗಳ ಸಾಲು, ಹಂದಿಯ ದೇಹ, ಸಿಂಹದ ಕಾಲು, ಮೊಸಳೆಯ ಮುಖ, ಆನೆಯ ಸೊಂಡಿಲು, ಹಸುವಿನ ಕಿವಿ, ಕೋತಿಯ ಕಣ್ಣು, ನವಿಲು ಗರಿಯಂತೆ ಹರಡಿಕೊಂಡಿರುವ ಬಾಲ, ಇವುಗಳನ್ನು ಹೊಂದಿರುವ ಕಾಲ್ಪನಿಕ ಪ್ರಾಣಿ ಈ ಮಕರ ಮತ್ತು ಕೊನೆಯದಾಗಿ ಹಂಸಗಳ ಸಾಲು ಈ ಹಂಸಗಳ ಸಾಲಿನಲ್ಲಿ ಒಂದು ಕಡೆ ಮರಿ ಹಂಸಗಳಿಗೆ ತಾಯಿ ಹಂಸ ಆಹಾರ ಕೊಡುತ್ತಿರುವ 'ಮಾತೃ ವಾತ್ಸಲ್ಯದ ದೃಶ್ಯ' ತಟ್ಟನೆ ನಮ್ಮ ಗಮನ ಸೆಳೆಯುತ್ತದೆ. ವಿತಾನದ ಕೆಳಗೆ ಪಟ್ಟಿಕೆಗಳ ಮೇಲ್ಭಾಗದ ನಡುವಿನ ಭಿತ್ತಿಯಲ್ಲಿ ಸುಂದರವಾಗಿ ಕೆತ್ತಿರುವ ದೇವಾನುದೇವತೆಯರ ಶಿಲ್ಪಗಳಿವೆ. ನಾಟ್ಯಗಣಪತಿ, ನಾಟ್ಯ ಸರಸ್ವತಿ, ರತಿ ಮನ್ಮಥ, ವಿಷ್ಣು, ಶ್ರೀಕೃಷ್ಣ ಪಾರಿಜಾತ, ಲಕ್ಷ್ಮೀಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡಿರುವ ನರಸಿಂಹ, ನಾಟ್ಯ ಸರಸ್ವತಿ, ಕೇಶವನಾರಾಯಣ, ಮುಕುಂದ, ಮಾಧವ, ಅಚ್ಯುತಗೋವಿಂದ ಹೀಗೆ ವಿಷ್ಣುವಿನ ವಿಗ್ರಹಗಳು, ಲಕ್ಷ್ಮೀನಾರಾಯಣ-ಕಮಲದ ಹೂವಿನ ಮೇಲೆ ಲಕ್ಷ್ಮೀಯು ತನ್ನ ಪಾದವನ್ನು ಇರಿಸುವುದು, ಆ ಕಮಲದ ಹೂವು ನಲುಗಿ ಬಾಗುತ್ತಿರುವಾಗ ಲಕ್ಷ್ಮೀಯ ವಾಹನವಾದ ಆನೆಯು ಕಮಲದ ಹೂವನ್ನು ಎತ್ತಿ ಹಿಡಿದಿರುವುದು[೮೨] ಬಹಳ ಸುಂದರವಾಗಿ ಚಿತ್ರಿಸಲ್ಪಟ್ಟಿದೆ.

ನಂತರದಲ್ಲಿ ಉಷಾ ಮತ್ತು ಛಾಯಾರೊಡಗೂಡಿ ತನ್ನ ಎರಡೂ, ಕೈಯಲ್ಲಿ ಪದ್ಮಗಳನ್ನು ಹಿಡಿದಿರುವ ಸೂರ್ಯನ ವಿಗ್ರಹ, ಮಹಿಷಾಸುರಮರ್ದಿನಿ, ನಾಟ್ಯಲಕ್ಷ್ಮೀ ಹಾಗೂ ಮೂಲೆಗಳಲ್ಲಿ ಫಲಧಾರಿಣಿ, ಪುಷ್ಪಧಾರಿಣಿಯರು, ತಾಳವಾದಕಿಯರು, ನೃತ್ಯಗಾರ್ತಿಯರು, ಸಂಗೀತಗಾರರು, ನೃತ್ಯಗಾರರು, ಡೋಲುಬಾರಿಸುತ್ತಿರುವವರು ಮುಂತಾದವರ ಶಿಲ್ಪಗಳೂ

ಕಂಡುಬರುತ್ತವೆ. ಈ ಎಲ್ಲಾ ಶಿಲ್ಪಗಳ ವಿಶೇಷತೆಯೆಂದರೆ ಪ್ರತಿಯೊಂದು ಶಿಲ್ಪದ ಮೇಲ್ಭಾಗದಲ್ಲಿ ಪ್ರಭಾವಳಿ ಇರುವುದು, ಈ ಶಿಲ್ಪಗಳ ಪೀಠಸ್ಥಾನದಲ್ಲಿ ಅವುಗಳನ್ನು ಕೆತ್ತಿದ ಶಿಲ್ಪಿಗಳ ಹೆಸರುಗಳಿವೆ. ಮಲ್ಲಿತಂಮ, ಮಸಣಿತಂಮ, ಚೌಡಯ್ಯ, ಬಾಲಯ್ಯ, ಲೋಹಿತ, ಎಳೆ ಮಾಸಯ್ಯ[೮೩] ಇತ್ಯಾದಿ ಶಿಲ್ಪಿಗಳ ಹೆಸರುಗಳಿವೆ.

ದೇವಾಲಯದ ಒಳಗೆ ಪ್ರವೇಶಿಸಿದರೆ, ಅಲ್ಲಿನ ಶಿಲ್ಪಕಲಾನವಿನತೆಯು ನಿಮ್ಮನ್ನು ಬೆರಗುಗೊಳಸಿಸುತ್ತದೆ. ಮೂರು ಗರ್ಭಗೃಹಗಳಿಗೂ ಸುಖನಾಸಿಯಿದೆ. ಇವುಗಳಿಗೆ ಸೇರಿದಂತೆ ಒಂದು ನವರಂಗವಿದೆ ಗರ್ಭಗುಡಿಯ ದ್ವಾರ ಬಂಧಗಳು ನಾಜೂಕಿನ ಕೆತ್ತನೆಗಳಿಂದ ಕೂಡಿರುವುದನ್ನು ಗಮನಿಸಬಹುದು. ನವರಂಗದಲ್ಲಿ ಚಿರುಕಿ ಯಂತ್ರ ಬಳಸಿ ಸುಂದರವಾಗಿ ಕಡೆಯಲ್ಪಟ್ಟಿರುವ ಹಲವು ವಿನ್ಯಾಸಗಳ ೧೮ ಕಂಬಗಳಿವೆ. ಇಲ್ಲಿರುವ ಭುವನೇಶ್ವರಿ ಕೆತ್ತನೆಗಳು ಬಹಳ ಸುಂದರ ಹಾಗೂ ನಾಜೂಕು ಕೆತ್ತನೆಗಳಿಂದ ನೋಡುಗರ ಮೆಚ್ಚುಗೆಗಳಿಸಿವೆ. ಬೋರಲು ಹಾಕಿದಂತಿರುವ ಕಮಲದ ಹೂವು, ಕಮಲದ ಮೊಗ್ಗು, ಬಾಳೆಗೊನೆ, ಬಾಳೆ ಹೂವಿನ ಮೊಗ್ಗು ಹಲವು ಗಾತ್ರದವುಗಳೂ, ಮಧ್ಯದ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರು ಅದರ ಮೇಲೆ ಬಗ್ಗಿದ ತೊಲೆಗಳಿಂದ ಮಾಡಿದ ಕಮಾನು ಅದರ ಮಧ್ಯದಲ್ಲಿ ತೂಗಾಡುತ್ತಿರುವ ಕಮಲದ ಮೊಗ್ಗು ಮನೋಹರವಾಗಿದೆ. ಈ ಭುವನೇಶ್ವರಿಗಳ ರಚನೆಗಳು ಹೊಯ್ಸಳ ಕಲಾಕೃತಿಯ ಹೆಮ್ಮೆಯ ಪ್ರತೀಕವೆನಿಸಿವೆ. ಮರದ ತೊಲೆಗಳಂತೆ ಕಲ್ಲಿನಲ್ಲಿ ಕಡೆದಿರುವ ಕೋತಿಗಳನ್ನು ಜೋಡಿಸಿರುವ ಅಂತರ್ಬಂಧಿಕೆ ರೀತಿ ಅಚ್ಚರಿಹುಟ್ಟಿಸುತ್ತದೆ. ಪೂರ್ವ ದ್ವಾರದ ಹತ್ತಿರವಿರುವ ವಿತಾನವು ಅತ್ಯಂತ ಸುಂದರವಾಗಿದೆ. ಕೆಳಗೆ ಅಷ್ಟದಿಕ್ಪಾಲಕರು, ಅವರ ಪರಿವಾರ, ಅದರ ಮೇಲೆ ನರ್ತಿಸುತ್ತಿರುವ ಯಕ್ಷ, ವಾದ್ಯಗಾರರು, ಅದರ ಮೇಲೆ ಶಿಖರಾಕೃತಿಗಳು ಇರುವವು. ಇವುಗಳ ಮಧ್ಯೆ ಶೈವ, ವೈಷ್ಣವ ವಿಗ್ರಹಗಳಿವೆ.

ದಕ್ಷಿಣದ ಗರ್ಭಗುಡಿಯ ಸುಕನಾಸಿಯ ದ್ವಾರದಲ್ಲಿಯೂ ಭದ್ರ, ಸುಭದ್ರ, ದ್ವಾರಪಾಲಕರಿರುವರು. ದ್ವಾರದ ಮೇಲೆ ಲಕ್ಷ್ಮೀನಾರಾಯಣ, ವೇಣುಗೋಪಾಲ ವಿಗ್ರಹಗಳಿವೆ. ಗರ್ಭಗುಡಿಯ ದ್ವಾರದಲ್ಲಿ ಜಯ–ವಿಜಯರಿರುವರು. ಗರ್ಭಗುಡಿಯಲ್ಲಿ ಸುಮಾರು ೨ ಅಡಿ ಪೀಠದ ಮೇಲೆ ಗರುಡ ನಾಲ್ಕೂವರೆ ಅಡಿ ಎತ್ತರದ ವೇಣುಗೋಪಾಲಸ್ವಾಮಿ ವಿಗ್ರಹವಿದೆ. ಕೃಷ್ಣನು ತ್ರಿಭಂಗಿಯಲ್ಲಿ ತಮಾಲ ವೃಕ್ಷದ ಕೆಳಗೆ ನಿಂತು ಎರಡು ಕೈಗಳಿಂದಲೂ ಕೊಳಲನ್ನು ಬಾರಿಸುತ್ತಿದ್ದಾನೆ. ಪ್ರಭಾವಳಿಯಲ್ಲಿ ಗೋವುಗಳು ತಲೆಯನ್ನೆತ್ತಿಕೊಂಡು ಕೃಷ್ಣನತ್ತ ದೃಷ್ಟಿ ಹರಿಸಿ, ವೇಣುಗಾನವನ್ನು ಆಲಿಸುತ್ತಾ ನಿಂತಿವೆ. ಗೋಪಿಕಾ ಸ್ತ್ರೀಯರು ತದೇಕ ಚಿತ್ತದಿಂದ ಕೃಷ್ಣನ

ಕೊಳಲು ನಿನಾದವನ್ನು ಕೇಳುತ್ತಿರುವರು. ಪಶ್ಚಿಮ ಗರ್ಭಗುಡಿಯ ದ್ವಾರದ ಮೇಲೆ ಲಕ್ಷ್ಮೀನಾರಾಯಣ, ಗರುಡನ ಮೇಲೆ ಕುಳಿತಿರುವ ಶ್ರೀಕೃಷ್ಣ ಸತ್ಯಭಾಮ, ಪಾರಿಜಾತ ಅಪಹರಣದ ಕಥೆ, ಮೇಲ್ಛಾವಣಿಯಲ್ಲಿ ದಿಕ್ಪಾಲಕರೂ, ಗಂಧರ್ವರೂ ಇರುವರು. ಗರ್ಭಗುಡಿಯಲ್ಲಿ ಗರುಡಪೀಠದಲ್ಲಿ ಮೂಲ ಕೇಶವನ ವಿಗ್ರಹ ಕಂಡುಬರುವುದಿಲ್ಲ. ಆದರೆ ಈ ಸ್ಥಳದಲ್ಲಿ ಬೇರೊಂದು ಕೇಶವನ ವಿಗ್ರಹವನ್ನು ತಂದಿರಿಸಲಾಗಿದೆ.[೮೪]

ಉತ್ತರ ಗರ್ಭಗುಡಿಯ ಸುಖನಾಸಿಯ ದ್ವಾರದಲ್ಲಿ ಭದ್ರ ಮತ್ತು ಸುಭದ್ರರೆಂಬ ದ್ವಾರಪಾಲಕರಿರುವರು. ದ್ವಾರದ ಮೇಲೆ ಜನಾರ್ಧನ, ಲಕ್ಷ್ಮೀನರಸಿಂಹರ ವಿಗ್ರಹಗಳಿವೆ. ಗರ್ಭಗುಡಿಯ ದ್ವಾರಬಂಧದ ಮೇಲೆ ಅಕ್ಷಮಾಲೆ, ಚಕ್ರ, ಶಂಖ ಹಾಗೂ ಕಳಶಗಳನ್ನು ಹಿಡಿದಿರುವ ಲಕ್ಷ್ಮೀ ವಿಗ್ರಹವಿದೆ. ಮೇಲೆ ಯೊಗನಾರಾಯಣನು ಯೋಗ ಮುದ್ರೆಯಲ್ಲಿರುವನು ಗರ್ಭಗುಡಿಯ ಗರುಡ ಪೀಠದ ಮೇಲೆ ನಿಂತಿರುವ ನಾಲ್ಕುವರೆ ಅಡಿ ಎತ್ತರದ ಕಪ್ಪು ಶಿಲೆಯ ಸುಂದರವಾದ ಜನಾರ್ಧನ ವಿಗ್ರಹವಿದೆ. ನಾಲ್ಕು ಕೈಗಳಲ್ಲಿ ಪದ್ಮ, ಚಕ್ರ, ಶಂಖ, ಗದೆಗಳಿವೆ. ವಿಗ್ರಹದ ಪ್ರಭಾವಳಿಯಲ್ಲಿ ಸೂರ್ಯನ ಪ್ರಭೆ ಮತ್ತು ಕೀರ್ತಿ ಮುಖವಿದೆ ದೇವಾಲಯದ ಸುತ್ತಲೂ ಆವೃತ ಮಂಟಪಗಳಿರುವ ಪ್ರಕಾರವಿದೆ. ಈ ಪ್ರಕಾರದಲ್ಲಿ ೬೪ ದೈವ ಗೃಹಗಳಿವೆ. ಆದರೆ ವಿಗ್ರಹಗಳು ಕಂಡುಬರುವುದಿಲ್ಲ. ದೇವಾಲಯದ ಪ್ರಕಾರವನ್ನು ಪ್ರವೇಶಿಸಲು ಒಂದು ದ್ವಾರ ಮಂಟಪವಿದೆ.

**ಲಕ್ಷ್ಮೀನರಸಿಂಹ ದೇವಾಲಯ :**

ಕೇಶವ ದೇವಾಲಯದ ನೈರುತ್ಯಕ್ಕೆ ಸುಮಾರು ಮೂರು ಫರ್ಲಾಂಗ್‌ಗಳಷ್ಟು ಅಂತರದಲ್ಲಿ ಕಾವೇರಿ ನದಿಯ ದಡದ ಹತ್ತಿರ ಸೋಮನಾಥನಿಂದ ನಿರ್ಮಾಣವಾದ ಲಕ್ಷ್ಮೀನರಸಿಂಹ ದೇವಾಲಯವಿದೆ. ಇದೊಂದು ಮಧ್ಯಮ ಗಾತ್ರದ ಕಟ್ಟಡವಾಗಿದ್ದು, ಗರ್ಭಗೃಹ, ಸುಖನಾಸಿ, ಒಂಭತ್ತು ಅಂಕಣದ ನವರಂಗ ಜಗುಲಿ ಇರುವ ಮಂಟಪಗಳಿವೆ. ದೇವಾಲಯದ ಎಲ್ಲಾ ಕಂಬಗಳು ದುಂಡಾಕಾರದಿಂದ ಕೂಡಿದ್ದು, ಇಲ್ಲಿ ಹೆಚ್ಚು ಕೆತ್ತನೆ ಕೆಲಸ ಕಂಡುಬರುವುದಿಲ್ಲ. ಆ ದ್ವಾರಗಳನ್ನು ಯಾವುದೇ ರೀತಿಯ ಶಿಲ್ಪಗಳು ಆವರಿಸಿಲ್ಲ. ಇದರ ಮೂಲವಿಗ್ರಹ ಈಗಿಲ್ಲ. ನವರಂಗದ ಒಳಮಾಳಿಗೆಗಳು ಗುಮ್ಮಟಾಕಾರವಾಗಿವೆ.[೮೫]

**ಪಂಚಲಿಂಗೇಶ್ವರ ದೇವಾಲಯ :**

ಕೇಶವ ದೇವಾಲಯಕ್ಕೆ ಈಶಾನ್ಯದಲ್ಲಿ ಸುಮಾರು ೨೫೦ ಮೀಟರ್ ಅಂತರದಲ್ಲಿರುವ ಪಂಚಲಿಂಗೇಶ್ವರ ದೇವಾಲಯ ಐದು ಗರ್ಭಗೃಹಗಳುಳ್ಳ ಪಂಚಕೂಟಾಚಲವಾಗಿದೆ. ಇವು ಒಂದು ಸಾಲಿನಲ್ಲಿದ್ದು, ಅವುಗಳಲ್ಲಿನ ಲಿಂಗಗಳಿಗೆ ಬಿಜ್ಜಳೇಶ್ವರ ಮತ್ತು ಸೋಮನಾಥೇಶ್ವರ

ಎಂಬ ಹೆಸರಿದೆ. ಈ ದೇವಾಲಯಗಳು ಸ್ಥಳೀಯ ಗ್ರಾನೈಟ್ ಶಿಲೆಯಿಂದ ನಿರ್ಮಾಣವಾಗಿವೆ. ಒಂದೊಂದರಲ್ಲಿಯು ಒಂದು ಗರ್ಭಗೃಹ, ಸುಖನಾಸಿ, ಮುಂದೆ ೯ ಅಂಕಣಗಳ ತೆರೆದ ಮಂಟಪಗಳಿವೆ. ಸುಖನಾಸಿಗಳ ಮುಂಭಾಗದ ಒಂದು ಸಾಲು ಅಂಕಣಗಳು ಮಾತ್ರ ಒಂದಕ್ಕೊಂದು ಜೋಡಿಸಲ್ಪಟ್ಟ ಈ ಐದು ದೇವಾಲಯಗಳನ್ನು ಒಂದಾಗಿ ಸೇರಿಸಿರುವ ನೀಳವಾದ ಮೊಗಸಾಲೆಯಾಗಿದೆ. ಉಳಿದಂತೆ ದೇವಾಲಯಗಳು ಬೇರೆ ಬೇರೆಯಾಗಿವೆ. ಈ ದೇವಾಲಯಗಳಿಗೆ ಜಗಲಿಯಲ್ಲಿನ ಚೌಕ ವಿನ್ಯಾಸದಲ್ಲಿರುವ ಗರ್ಭಗೃಹಗಳ ಮೇಲೆ ಅಂತಸ್ತುಗಳಾಗಿ ಮೇಲೆದ್ದಿರುವ ಚೌಕ ವಿನ್ಯಾಸದ ಗೋಪುರಗಳಿವೆ.[೮೬] ಈ ದೇವಾಲಯದ ಯಾವ ಭಾಗದಲ್ಲೂ ಮೂರ್ತಿ ಶಿಲ್ಪಗಳಾಗಲಿ, ಎಲ್ಲವೂ ನೇರ ಸರಳ ಮುದ್ರಣ ರೀತಿಯ ಮಂಟಪಗಳು, ಒಂದೇ ರೀತಿಯ ಉರುಳೆಯಾಕಾರದ ದಪ್ಪ ಕಂಬಗಳಿಂದ ಕೂಡಿದೆ. ಒಂದೊಂದು ಕಂಬವು ಚೌಕಾಗಿದ್ದು ಅದರ ಮೇಲೆ ಅಷ್ಟಮುಖ ಅನಂತರ ಹದಿನಾರು ಮುಖಗಳ ಪಟ್ಟಿಕೆಗಳೂ ಇದ್ದು, ಉಳಿದಂತೆ ಉರುಳೆಯಾಕಾರದ ದಿಂಡನ್ನು ಹೊಂದಿವೆ.

ಗರ್ಭಗುಡಿಗಳಲ್ಲಿ ಈಗ ಲಿಂಗಗಳಿಲ್ಲ, ಆದರೆ ದುಂಡಗೆ ಸುಂದರವಾಗಿ ಕಂಡರಿಸಿದ ಪಾಣಿಪೀಠಗಳು ಬುಡಮೇಲಾಗಿ ಬಿದ್ದಿವೆ. ಸುಖನಾಸಿಗಳ ಬಾಗಿಲಿನ ಎಡಭಾಗಕ್ಕೆ ಗೋಡೆಗೆ ಸೇರಿದಂತೆ ಒಂದೊಂದು ವಿಗ್ರಹಗಳ ಪೀಠಗಳು ಇವೆ. ಇವು ಬಹುಶಃ ಶಿವ ಪಂಚಾಯತನ ಮೂರ್ತಿಗಳನ್ನು ಹೊಂದಿದ್ದಿರಬೇಕು. ಆದರೆ ಈಗ ಯಾವ ಮೂರ್ತಿಗಳು ಉಳಿದು ಬಂದಿಲ್ಲ.

ಹೊಯ್ಸಳ ರೂವಾರಿಗಳು ವೈವಿಧ್ಯಮಯವಾದ ಅಲಂಕಾರ ತುಂಬಿ ತುಳುಕುವಂತೆ ಅತೀ ಸೂಕ್ಷ್ಮವಾಗಿ ನವಿರಾಗಿ ಅತಿಶಯೋಕ್ತಿಯೇನೋ ಎನ್ನುವಷ್ಟರ ಮಟ್ಟಿಗೆ ಕಂಡರಿಸಿ ದೇವಾಲಯಗಳನ್ನು ನಿರ್ಮಿಸುವುದರಲ್ಲಿ ನಿಷ್ಠಾವಂತರಾಗಿದ್ದುದನ್ನು ಕೇಶವ ದೇವಾಲಯವು ಎತ್ತಿ ತೋರಿಸುತ್ತದೆ. ಅತ್ಯಂತ ಸರಳವಾಗಿಯೂ, ಶ್ಲಾಘನೀಯವಾಗಿಯೂ ಇರುವಂತೆ ದೇವಾಲಯಗಳ ಶಿಲ್ಪಗಳನ್ನು ನಿರ್ಮಿಸಬಲ್ಲವರಾಗಿದ್ದ ರೆಂಬುದಕ್ಕೆ ಈ ಪಂಚಲಿಂಗ ದೇವಾಲಯ ನಿದರ್ಶನವಾಗಿದೆ. ಹೊಯ್ಸಳ ದೇವಾಲಯಗಳಲ್ಲೇ ಇದೊಂದು ಅಪೂರ್ವವಾದ ಮಾದರಿಯಾಗಿದೆ. ಇಂತಹ ಸ್ಮಾರಕಗಳನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ಕಾಯ್ದಿರಿಸುವ ಹೊಣೆ ನಮ್ಮೆಲ್ಲರದ್ದಾಗಿರುವುದರಿಂದ ಸ್ಮಾರಕಗಳ ಸಂರಕ್ಷಣೆ ವಿಶ್ವಪಾರಂಪರಿಕ ತಾಣಗಳ ಪಟ್ಟಿಗೆ ಸೇರಿಸಿ ಅವುಗಳ ವೈಜ್ಞಾನಿಕ ಸಂರಕ್ಷಣೆಗಾಗಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಸೋಮನಾಥಪುರದ ಸ್ಮಾರಕಗಳನ್ನು ವರದಿ ಮಾಡಿ ಯುನೆಸ್ಕೋಗೆ ಕಳುಹಿಸಿದೆ.

**ಶ್ರವಣಬೆಳಗೊಳ :**

ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಒಂದು ಪಟ್ಟಣ ಹಾಗೂ ಜೈನರ ಪವಿತ್ರ ಯಾತ್ರ ಸ್ಥಳವಾದ ಶ್ರವಣಬೆಳಗೋಳ ಹಾಸನಕ್ಕೆ ೫೧ ಕಿ.ಮೀ ದೂರದಲ್ಲಿ. ಚನ್ನರಾಯಪಟ್ಟಣಕ್ಕೆ ೧೧ಕಿ.ಮೀ ಅಂತರದಲ್ಲಿ ಕೇಂದ್ರಿಕೃತಗೊಂಡಿರುವುದು. ಇಲ್ಲಿಯ ದೊಡ್ಡ ಬೆಟ್ಟದ ಮೇಲಿರುವ ಗೊಮ್ಮಟ ವಿಗ್ರಹ ಪ್ರಪಂಚದಾದ್ಯಂತ ಖ್ಯಾತವಾಗಿದೆ. ಶಾಸನಗಳಲ್ಲಿ ಈ ಸ್ಥಳವನ್ನು ಕಟಪು, ಕಟಪ್ಪ, ಕಟ್ಟಪ್ಪ, ಕವ್ಬಿಪ್ಪು, ವೆಳ್ಗೊಳ, ಬೆಳ್ಗೊಳ, ಧವಳಸರ ತೀರ್ಥ, ಶ್ವೇತ ಸರೋವರ ಎಂಬ ಮುಂತಾಗಿ ಹೆಸರುಗಳಿಂದ ಕರೆಯಲಾಗಿದೆ. ಅತೀ ಪ್ರಾಚೀನವಾದ ಸು. ೬-೭ನೆಯ ಶತಮಾನದ ಸಂಸ್ಕೃತ ಶಾಸನದಲ್ಲಿ ಕಟವಪ್ರವೆಂದಿದೆ.[೮೭] ೭ನೆಯ ಶತಮಾನಕ್ಕೆ ಸಂಬಂಧಿಸಿದ ೫೪ ಶಾಸನಗಳಲ್ಲಿ ೪೧ ಸಲ್ಲೇಖನ ಸಂನ್ಯಾಸನ ವಿಧಿಗಳಿಂದ ದೇಹ ಮುಡಿಪಿಟ್ಟ ಸಂಗತಿಯನ್ನು ನಿರೂಪಿಸುವ ಜೈನಶಾಸನಗಳು ಪ್ರಕಟಗೊಂಡಿವೆ.[೮೮] ದೇವಿರಪ್ಪನವರು 'ಕಳ್' ಎಂಬ ಶಬ್ದಕ್ಕೆ ಕಪ್ಪು ಎಂದು ಅರ್ಥೈಸಿ ಕಪ್ಪಾದ ಗುಡ್ಡ, ಕರಿಗುಡ್ಡ ಎಂದು ಅರ್ಥೈಸಿದ್ದಾರೆ. ಕಟಯೆಂದರೆ ಸಮಾಧಿ ಮಾಡತಕ್ಕ ಪ್ರದೇಶವೆಂದು ಅರ್ಥನೀಡಿರುವ ಮೋನಿಯರ್ ವಿಲಿಯಂಸ್ ಅವರ ನಿಘಂಟುವಿನ ಅರ್ಥವನ್ನಿಡದು, ಕಟವಪ್ರದೇಶವೆಂದರೆ ಸಮಾಧಿಗುಡ್ಡ ಎಂಬ ಅರ್ಥವನ್ನೂ ನೀಡಿರುತ್ತಾರೆ. ಶಿರೂರ್ ಅವರು ಕಟವಪು ಎಂಬುದು ಸಂಸ್ಕೃತ ಭಾಷೆಯ ಸಮಾಸವಾಗಿದ್ದು, ಕಟ ಎಂದರೆ ಒಂದು ಬಗೆಯ ಹುಲ್ಲು, ವಪ್ರ ಎಂದರೆ ಬೆಟ್ಟದ ಮಗ್ಗುಲ ಪ್ರದೇಶ ಸಾನು ಪ್ರದೇಶ ಎಂದು ಅರ್ಥೈಸಿರುತ್ತಾರೆ.[೮೯]

ವೆಳ್ಗೊಳ ಅಥವಾ ಬೆಳ್ಗೊಳ ಎಂಬ ಹೆಸರು ಈ ಸ್ಥಳಕ್ಕೆ ಬಂದ ಬಗೆ ಮತ್ತು ಹಳೆಯ ಗ್ರಾಮ ಇದ್ದಿರಬಹುದಾದ ಸ್ಥಳವನ್ನು ಗುರುತಿಸುವುದು ಅಗತ್ಯ. ವೆಳ್ಗೊಳದ ಉಲ್ಲೇಖ ಮುಖ್ಯವಾಗಿ ಕ್ರಿ.ಶ.ಸು. ೬೫೦ರ ತೇದಿಯ ಶಾಸನದಲ್ಲಿ ಉಲ್ಲೇಖಗೊಂಡಿದೆ.[೯೦] ವೆಳ್ಗೊಳ/ಬೆಳ್ಗೊಳವು ಸಮಾನ ಪದವಾಗಿದ್ದು ವೆಳ್+ಕೊಳ ಎಂಬ ಎರಡು ಪದಗಳನ್ನು ಒಳಗೊಂಡಿದೆ. ವಿದ್ವಾಂಸರು ಈ ಪದಕ್ಕೆ ಬಿಳಿಯ ಕೊಳ ಎಂದು ಅರ್ಥೈಸಿರುತ್ತಾರೆ. ಶ್ರವಣಬೆಳಗೊಳದ ಶಾಸನಗಳಲ್ಲಿ ವೆಳ್ಗೊಳ, ಬೆಳ್ಗೊಳ, ಬೆಳುಗೊಳ, ಬಿಳಗೊಳ ಮುಂತಾದ ಕನ್ನಡ ರೂಪಗಳೂ ದೊರೆಯುವಂತೆ 'ಧವಳಸರಸ್' ಎಂಬ ಸಂಸ್ಕೃತ ಪದವೂ ಉಲ್ಲೇಖವಾಗಿದೆ. ಶ್ರವಣಬೆಳಗೊಳದ ಸುತ್ತ ಈ ಬೆಳಗೊಳ ಕೊಳವಲ್ಲದೆ ಇನ್ನೂ ಅನೇಕ ಕೊಳಗಳಿದ್ದು 'ಹಾಲೊರತಿ' ಹಾಲುಗೊಳ ಅಥವಾ ಅಮೃತಕೊಳ ಎಂಬ ಹೆಸರಿದ್ದು ಇವೆಲ್ಲಾ ಬಿಳಿ ಎಂಬ ಅರ್ಥವನ್ನೇ ಸೂಚಿಸುತ್ತವೆ.

ಆದರೂ ಈ ಶಬ್ದದ ಹಿನ್ನೆಲೆಯನ್ನು ಗಮನಿಸಿದಾಗ ಬೆಳ್ ಎಂದರೆ ಬಿಳಿಯೆಂಬುದಕ್ಕಿಂತ ಬೇರೆ ಅರ್ಥವಿದೆಯೆ ಎಂಬ ಬಗ್ಗೆ ಗಮನ ಹರಿಸುವುದು ಸೂಕ್ತ. ದ್ರಾವಿಡ ಭಾಷಾ ಸಮುದಾಯದಲ್ಲಿ ವೆಳ್ ಎಂದರೆ 'ಬಿಳಿ' ಎಂಬ ಅರ್ಥಕ್ಕಿಂತಲೂ ನೀರು ಎಂಬ ಅರ್ಥವೇ ಪ್ರಧಾನವಾಗಿರುವುದು. ವೆಳ್, ವೆಳ್ಳ ಮುಂತಾದವು ನೀರನ್ನು ಸೂಚಿಸುತ್ತವೆ. ಹೀಗಾಗಿ ಇದು ಜಲ ಸಂಬಂಧ ಸೂಚಕ ಪದವಾಗಿರುವ ಸಂಭವವೇ ಹೆಚ್ಚು. ಚಿಕ್ಕ ದೇವರಾಜ ಒಡೆಯರು ಇಲ್ಲಿ ಕಲ್ಲಿನಲ್ಲಿ ಈಗೀನ ಸೋಪಾನಕೊಳ ಕಟ್ಟಿಸುವುದಕ್ಕೆ ಮೊದಲು ಇಲ್ಲಿ ಸಣ್ಣ ಕುಂಟೆ ಅಥವಾ ಮಡುವಿದ್ದಿರಬೇಕು.[೯೧] ಮೊದಲೇ ಹೇಳಿರುವಂತೆ ಶ್ರವಣಬೆಳಗೊಳದ ಸುತ್ತಮುತ್ತ ನೀರಿನ ಸೆಲೆಗಳಿದ್ದು, ಈಗಿನ ಕೊಳವೂ ಮೂಲತಃ ನೀರಿನ ಒರತೆಯೇ ಆಗಿದ್ದು, ಅದಕ್ಕೆ ತಡೆಕಟ್ಟಿರಬೇಕು. ಕೊಳ ಎಂಬುದಕ್ಕೆ ಮಡುವು ಎಂಬ ಅರ್ಥವೂ ಇದೆ. 'ಮಡು' ಎಂದರೆ ತೀರ್ಥವೆಂಬ ಅರ್ಥವಿದೆ. ಹೀಗಾಗಿ ಇದು ಬಿಳಿಯ ಕೊಳವಲ್ಲ. ನೀರಿನ ಮಡು ನೀರಿನ ಕೊಳ ಎಂಬ ಅರ್ಥ ನೀಡುವುದು ಸರಿಯೆನ್ನಿಸುತ್ತದೆ. ಮುಂದೆ ಬೆಳ್ ಎಂಬುದು ಗುಣವಾಚಕ ಅರ್ಥದಲ್ಲಿ ಪ್ರಯೋಗವಾಗಿ ಬಿಳಿ ಎಂಬ ಅರ್ಥವನ್ನು ಪಡೆಯಿತು.

ಈ ಕೊಳದ ಹತ್ತಿರ ಮೊದಲು ಜನವಸತಿ ಇರಲಿಲ್ಲ. ಸಾಮಾನ್ಯವಾಗಿ ನೀರಿನ ವಸತಿಯಿರುತ್ತಿದ್ದುದು ಕಂಡುಬರುತ್ತದೆ. ಅಂತಹ ಒಂದು ವಸತಿ ಈಗಿನ ಶ್ರವಣಬೆಳಗೋಳದಲ್ಲಿದ್ದು, ಅದು ಕೊಳದ ಬಳಿಗಿಂತ ಈಗಿನ ಅಕ್ಕನ ಬಸದಿಯ ಬಳಿ ಅಥವಾ ಅಕ್ಕನ ಬಸದಿಯಿಂದ ಜಿನನಾಥಪುರಕ್ಕೆ ಹೋಗುವ ಮಾರ್ಗದ ಬಳಿಯಿದ್ದಿರಬೇಕು. ಚಿಕ್ಕ ಬೆಟ್ಟದ ಮೇಲೆ ತಪಸ್ಸು ಮಾಡುತಿದ್ದ ಅಥವಾ ಅವರನ್ನು ನೋಡಲು ಬರುತ್ತಿದ್ದವರು ಬೆಳ್ಗೊಳದ ಕಡೆಗೆ ಬರಬೇಕಿದ್ದರೆ ಅಕ್ಕನ ಬಸದಿಯಿಂದ ಜಿನನಾಥಪುರಕ್ಕೆ ಬರುವ ಕಡೆಯಿಂದ ಚಿಕ್ಕಬೆಟ್ಟವನ್ನು ಏರಿ ಇಳಿಯಬೇಕಿತ್ತು. ಇಲ್ಲಿ ಹಳೆಯ ದಾರಿ ಇಂದಿಗೂ ಇದೆ. ಈ ಐತಿಹಾಸಿಕ ಜೈನ ಕ್ಷೇತ್ರವನ್ನು ಇಲ್ಲಿನ ಸ್ಮಾರಕಗಳ ಕಲಾವಾಸ್ತುಮಾದರಿಯನ್ನು ಒಟ್ಟುಗೂಡಿಸಿ ಎಲ್ಲಾ ವಿಶ್ವಪಾರಂಪರಿಕ ನೆಲೆಗಳ ಪಟ್ಟಿಗೆ ಸೇರಿಸಲು ಭಾರತೀಯ ಪುರಾತತ್ವ ಸಂರಕ್ಷಣಾ ಇಲಾಖೆ ಯುನೆಸ್ಕೋಗೆ ವರದಿಯನ್ನು ನೀಡಿದೆ.

ಪ್ರಚಲಿತ ಐತಿಹ್ಯದಂತೆ ಕ್ರಿ.ಶ.ಪೂ. ೩ನೆಯ ಶತಮಾನದಲ್ಲಿ ಮೌರ್ಯ ಅರಸನಾದ ಚಂದ್ರಗುಪ್ತ ತನ್ನ ಗುರು ಭದ್ರಬಾಹುವಿನೊಂದಿಗೆ ಬಂದು ಇಲ್ಲಿ ನೆಲೆನಿಂತ. ಇಲ್ಲಿ ಅತೀ ಪ್ರಾಚೀನವಾದ ೭ನೆಯ ಶತಮಾನದ ಶಾಸನದಲ್ಲಿ ಮಹಾವೀರನ ನಿರ್ವಾಣದ ನಂತರ

ಗೌತಮ ಗಣಧರ ಮೊದಲಾದವರು ಜೈನಗುರುಗಳಾಗಿದ್ದು, ಅವರಲ್ಲೊಬ್ಬನಾದ ಭದ್ರಬಾಹು ಸ್ವಾಮಿ ಉಜ್ಜಯಿನಿಯಲ್ಲಿದ್ದಾಗ ೧೨ ವರ್ಷಗಳ ಬರಗಾಲ ದೇಶವನ್ನು ಕ್ಷೋಭೆಗೆ ಒಳಪಡಿಸುತ್ತದೆ. ಭವಿಷ್ಯವಾಣಿಯನ್ನು ಗಮನಿಸಿ ಸಂಪೂರ್ಣ ಸಂಘ ಉತ್ತರಾಪಥದಿಂದ ದಕ್ಷಿಣಾಪಥಕ್ಕೆ ವಲಸೆ ಬಂದಿತೆಂದು, ಇಲ್ಲಿ ಪ್ರಭಾಚಂದ್ರನೆಂಬ ಆಚಾರ್ಯನು ತನ್ನ ಅವಸಾನ ಕಾಲವನ್ನರಿತು ಸಮಾಧಿ ಹೊಂದಬಯಸಿ, ಒಬ್ಬ ಶಿಷ್ಯನೊಡನೆ ಕಟವಪ್ರಗಿರಿಗೆ ಬಂದು ಇಲ್ಲಿ ಜೀವ ತೊರೆದನೆಂದೂ ಹೇಳಿದೆ. ಇಲ್ಲಿ ಹೆಸರಿಸಲಾದ ಭದ್ರಬಾಹು, ಪ್ರಭಾಚಂದ್ರ ಹಾಗೂ ಅವರ ಶಿಷ್ಯರನ್ನು ಗುರುತಿಸುವುದರಲ್ಲಿ ಭಿನ್ನಾಬಿಪ್ರಾಯಗಳಿವೆ.[೨]

**ರಾಜಕೀಯ ಇತಿಹಾಸ :**

ಇಂದಿನ ಶ್ರವಣಬೆಳಗೊಳದ ಇತಿಹಾಸ ನಮಗೆ ತಿಳಿದು ಬರುವುದು ಚಿಕ್ಕಬೆಟ್ಟದಲ್ಲಿರುವ ೬ನೆಯ ಶತಮಾನಕ್ಕೆ ಸೇರಿದ ಶಾಸನದಿಂದೀಚೆಗೆ ಎಂದು ಹೇಳಲಾಗಿದೆ. ಅದಕ್ಕಿಂತ ಹಿಂದಿನ ಶ್ರವಣಬೆಳಗೊಳ ಹೇಗಿದ್ದಿರಬಹುದೆಂದು ಊಹೆಗೆ ಬಿಟ್ಟ ವಿಷಯ. ಸುಮಾರು ೩೦೦೦ ವರ್ಷಗಳ ಹಿಂದೆ ಇದು ಬೆಟ್ಟ, ಬಯಲು, ನೀರಿನ ಸೆಲೆಗಳಿಂದ ಕೂಡಿದ ಸ್ಥಳವಾಗಿದ್ದಿರಬೇಕು. ಚಿಕ್ಕ ಬೆಟ್ಟ ಅಥವಾ ಕಳ್ವಪ್ಪು, ದೊಡ್ಡಬೆಟ್ಟ ಅಥವಾ ಪೆರ್ಗಳ್ವಪ್ಪು ಇವುಗಳ ಮಧ್ಯೆ ನೀರಿನ ಸಣ್ಣ ಝರಿ ಜೊತೆಗೆ ಅಲ್ಲಲ್ಲಿ ಸಣ್ಣ ಮೊರಡಿಗಳು ಇದ್ದವು.[೩] ಚಿಕ್ಕಬೆಟ್ಟವು ಕೆಲವು ಪ್ರಾಕೃತಿಕ ದೋಣಿಗಳಿಂದ ಕೂಡಿ, ಅನೇಕ ಕಲಾ ಸೆರೆಗಳನ್ನು ಹೊಂದಿದ ಜನವಸತಿಗೆ ಅನುಕೂಲವಾಗಿ ಪರಿಣಮಿಸಿತ್ತು. ದೊಡ್ಡ ಬೆಟ್ಟವು ಕಲ್ಲಾಸರೆಗಳಿಂದ ಮತ್ತು ಕಾಡುಕಲ್ಲುಗಳಿಂದ ಕೂಡಿತ್ತು. ಆದರೆ ನೀರಿನ ಸೌಕರ್ಯ ತೀರ ಕಡಿಮೆ ಇತ್ತು. ಈ ಪ್ರದೇಶವಲ್ಲದೆ ಬೆಟ್ಟಗಳ ಸುತ್ತಮುತ್ತಲ ಪ್ರದೇಶಗಳು ನೀರಿನ ಒರತೆ ಇಲ್ಲವೆ ಆಸರೆಗಳಿಂದ ಕೂಡಿದ್ದವು. ಮಳೆಗಾಲದಲ್ಲಿ ತುಂಬಿ ಹರಿಯುತ್ತಾ ಬೇಸಿಗೆಯಲ್ಲಿ ಕಂಡೂ ಕಾಣದಂತೆ ಹರಿಯುವ ಸಣ್ಣ ತೊರೆಗಳು, ಕಾಡು, ಮುಂತಾದವುಗಳಿಂದ ಕೂಡಿ ದುರ್ಗಮವಾಗಿತ್ತು. ಇಂತಹ ಪರಿಸರವು ಜನವಸತಿಗೆ ಅನುಕೂಲವಾಗಿದ್ದು, ವಿರಳ ಸಂಖ್ಯೆಯಲ್ಲಿ ಜನ ಇಲ್ಲಿ ವಾಸಿಸುತ್ತಿದ್ದಿರಬೇಕು. ಈ ಬಗ್ಗೆ ಶ್ರವಣಬೆಳಗೊಳದ ಸಮೀಪದಲ್ಲಿ ಓಡಾಡಿದಾಗ ಶಿಲಾಯುಗದ ಮಾನವ ಇಲ್ಲಿ ವಾಸಿಸುತ್ತಿದ್ದನೆಂಬುದಕ್ಕೆ ಕೆಲವು ಸುಳುಹುಗಳು ಕಾಣಬರುತ್ತವೆ. ಶ್ರವಣಬೆಳಗೊಳದ ಪೂರ್ವ ದಿಕ್ಕಿಗೆ ಅಥವಾ ಗ್ರಾಮದ ಹಿಂಬದಿಗೆ ಹಿಂದಿನ ಜನರು ನಿಲ್ಲಿಸಿರುವ ನಿವಿಸುಗಲ್ಲುಗಳು ಕಾಣಬರುತ್ತವೆ.[೪] ಇವು ಸುಮಾರು ೫ ಅಡಿ ಎತ್ತರವಾಗಿದ್ದು, ಬಹುಗಾತ್ರದವಾಗಿದ್ದು, ಪೂರ್ವಕ್ಕೆ ಬಾಗಿ ನಿಂತಿವೆ. ಹಿಂದೆ ನೆಲೆನಿಂತಿದ್ದ ಜನ ಮಡಿದ ತಮ್ಮವರಿಗಾಗಿ ನಿಲ್ಲಿಸಿರುವ

ಕಲ್ಲುಗಳು ಇವಾಗಿವೆ. ಹೀಗಾಗಿ ಶ್ರವಣಬೆಳಗೊಳದ ಜನವಸತಿಯ ಇತಿಹಾಸವನ್ನು ಈ ಆಧಾರದಿಂದ ಕ್ರಿ.ಶ.ಪೂ.೧೦೦೦ ವರ್ಷಗಳಷ್ಟು ಹಿಂದೆ ಕೊಂಡೊಯ್ಯಬಹುದಾಗಿದೆ.

ವಿವಿಧ ರಾಜ ವಂಶಗಳು ಅರಸರು ಹಾಕಿಸಿರುವ ಶಾಸನಗಳು ಲಭ್ಯವಿದ್ದು, ಗಂಗ, ರಾಷ್ಟ್ರಕೂಟ, ಚಾಲುಕ್ಯರು, ಹೊಯ್ಸಳ, ವಿಜಯನಗರ, ಚಂಗಾಳ್ವ, ಮೈಸೂರು ಒಡೆಯರು ಮುಂತಾದವರುಗಳನ್ನು ಹೆಸರಿಸಬಹುದು. ಧಾರ್ಮಿಕ ಪರಂಪರೆ ಮತ್ತು ಐತಿಹಾಸಿಕ ಪರಂಪರೆಗಳೆರಡು ಮೆಳೈಸಿಕೊಂಡು ಬಂದಿರುವುದು ಶ್ರವಣಬೆಳಗೊಳದ ವಿಶೇಷವಾಗಿದೆ. ಗಂಗದೊರೆ ಇಮ್ಮಡಿ ರಾಚಮಲ್ಲನ[೫] ಶಾಸನವೇ ಇಲ್ಲಿ ದೊರೆಯುವ ಪ್ರಾಚೀನ ಶಾಸನವಾಗಿದೆ. ಕ್ರಿ.ಶ. ಸುಮಾರು ೧೦ ನೆಯ ಶತಮಾನದ ಶಾಸನವು[೬] ಗಂಗವಜ ಲೆಂಕಭೋಯಿಗನು ರಕ್ಕಸಮಣಿಗೂ ವದ್ಯೆಗ ಮತ್ತು ಕೋಣೆಯ ಗಂಗರಿಗೆ ನಡೆದ ಯುದ್ದದಲ್ಲಿ ಈತ ಮರಣ ಹೊಂದಿದ್ದನ್ನು ತಿಳಿಸುತ್ತದೆ. ಇಲ್ಲಿ ಉಲ್ಲೇಖಿತವಾಗಿರುವ ವದ್ಯೆಗನೂ ಮೂರನೆಯ ಅಮೋಘವರ್ಷನಾಗಿದ್ದಾನೆ. ಇನ್ನೊಂದು ಶಾಸನದಲ್ಲಿ[೭] ಎರೆಗಂಗನ ಮಹಾಮಂತ್ರಿ ಗುರೆಪಾಳನ ಉಲ್ಲೇಖವಿದೆ. ಗುರೆಪಾಳನ ಅಳಿಯ ನಾಗವರ್ಮನ ವಿಚಾರವನ್ನು ತಿಳಿಸುವ ಈ ಶಾಸನವು ಗುರೆಪಾಳನು ನರಸಿಂಹ ಮಂತ್ರಿಯ ಅಳಿಯನೆಂದು ಹೇಳುವುದರ ಮೂಲಕ ಇಬ್ಬರು ಮಂತ್ರಿಗಳನ್ನು ಪರಿಚಯಿಸುತ್ತದೆ. ಮತ್ತೊಂದು ಶಾಸನ ಮಾರಸಿಂಹನ ಸಾಧನೆಗಳ ಬಗ್ಗೆ ವಿವರಿಸಿದೆ. ಇದರಲ್ಲಿ ರಾಷ್ಟ್ರಕೂಟ ದೊರೆ ಮೂರನೆಯ ಕೃಷ್ಣನು ಗೂರ್ಜರರನ್ನು ಗೆದ್ದು ಗೂರ್ಜರಾಧಿರಾಜನೆನಿಸಿಕೊಂಡನೆಂದೂ, ಶಬರನಾಯಕನಾದ ನರಗ ಮತ್ತು ವನವಾಸಿದೇಸದ ಅರಸನನ್ನು ಸೋಲಿಸಿದನೆಂದು ದಾಖಲಿಸಿದೆ. ಗೋಣೂರು, ಉಚ್ಚಂಗಿ, ಬನವಾಸಿ, ಪಾಭಸೆಕೋಟೆ ಮುಂತಾದ ಯುದ್ಧಗಳಲ್ಲಿ ಜಯಗಳಿಸಿ ಚಾಲುಕ್ಯ ರಾಜಾದಿತ್ಯನನ್ನು ಸೋಲಿಸಿದನೆಂಬ ವಿವರಗಳಿವೆ. ಈ ಹೋರಾಟಗಳಲ್ಲಿ ಗಂಗ ಮಂತ್ರಿ ಚಾವುಂಡರಾಯನು ಅಪಾರವಾದ ನೆರವನ್ನಿತ್ತನು. ೩ನೆಯ ಕೃಷ್ಣನ ಮೈದುನ ಮತ್ತು ಮಾಂಡಲೀಕನಾಗಿದ್ದ ಮಾರಸಿಂಹನು ನಾಲ್ಕನೆಯ ಇಂದ್ರನಿಗೆ ಪಟ್ಟಕಟ್ಟಿ ರಾಷ್ಟ್ರಕೂಟ ಸಾಮ್ರಾಜ್ಯವನ್ನು ಉಳಿಸುವ ಪ್ರಯತ್ನ ಮಾಡಿದನು.

ಚಾವುಂಡರಾಯ ಗಂಗರ ಮಂತ್ರಿಯಾಗಿ ಹೊಂದಿದ ಪ್ರಸಿದ್ದಿಗಿಂತ ಬಾಹುಬಲಿಯ ಬೃಹತ್ ಮೂರ್ತಿಯನ್ನು ಪ್ರತಿಷ್ಠಾಪಿಸುವುದರ ಮೂಲಕ ಜಗತ್ಪ್ರಸಿದ್ಧನಾಗಿದ್ದಾನೆ. ಬ್ರಹ್ಮಕ್ಷತ್ರ ಕುಲದವನಾದ ಚಾವುಂಡರಾಯನು ತನ್ನ ಸ್ವಾಮಿಯಾದ ಗಂಗರ ಇಮ್ಮಡಿ ಮಾರಸಿಂಹನು ನಾಲ್ಕನೆಯ ಇಂದ್ರನ ಪರವಾಗಿ ಪಾತಾಳಮಲ್ಲನ ಸಹೋದರ, ನೊಳಂಬರು, ರಣಗಂಗರಾಜ

ಮುಂತಾದವರ ವಿರುದ್ಧ ಹೋರಾಟಗಳಲ್ಲಿ ಶೂರನಾಗಿ ಕಾದಿದನೆಂದು ವರ್ಣಿತನಾಗಿದ್ದಾನೆ.[೯೮] ಧಾರವರ್ಷ ಧ್ರುವನ ಮಗನಾದ ರಣಾವಲೋಕ ಕಂಬಯ್ಯನು ಗಂಗವಾಡಿ ಪ್ರಾಂತ್ಯಕ್ಕೆ ಅಧಿಪತಿಯಾಗಿದ್ದನೆಂದು ಮತ್ತು ಜೈನಯತಿಯೊಬ್ಬರಿಗೆ ದಾನ ನೀಡಿದ ಶಾಸನವೊಂದು[೯೯] ಉಲ್ಲೇಖಿಸಿದೆ. ಇನ್ನೊಂದು ಶಾಸನ ನಾಲ್ಕನೆಯ ಇಂದ್ರನದಾಗಿದೆ. ಇಲ್ಲಿ ಉಲ್ಲೇಖಿತನಾಗಿರುವ ಇಂದ್ರ ಮೂರನೆಯ ಕೃಷ್ಣನ ಮೊಮ್ಮಗನೂ, ಗಂಗ ಮಾರಸಿಂಹನಿಗೂ ಮೊಮ್ಮಗನಾಗಿದ್ದಾನೆ. ಕ್ರಿ.ಶ. ೧೧ನೆಯ ಶತಮಾನದ ಚಾಲುಕ್ಯರ ಶಾಸನದಲ್ಲಿ[೧೦೦] ಜಗಭಕ್ಷಣ ಚಕ್ರವರ್ತಿಯೆಂಬ ಬಿರುದನ್ನು ಹೊಂದಿದ್ದ ಗೊಗ್ಗಿ ಎಂಬುವವನನ್ನು ಹೆಸರಿಸುತ್ತದೆ. ಚಾಲುಕ್ಯರು ಜೈ ಆಚಾರ್ಯರನ್ನು ಗೌರವಿಸುತ್ತಿದ್ದರೆಂಬುದು ಶ್ರವಣಬೆಳಗೊಳದ ಅನೇಕ ಶಾಸನಗಳಿಂದ ವ್ಯಕ್ತವಾಗುತ್ತದೆ. ಹೊಯ್ಸಳ ದಂಡನಾಯಕನಾಗಿದ್ದ ಗಂಗರಾಜನ ಅತ್ತಿಗೆಯನ್ನು ಪ್ರಶಂಸಿಸುವ ಶಾಸನಗಳು[೧೦೧] ಶ್ರವಣಬೆಳಗೋಳದಲ್ಲಿ ಲಭ್ಯವಿದೆ. ಈಕೆ ಮೋಕ್ಷಾತಿಲಕವೆಂಬ ವ್ರತವನ್ನು ಮಾಡಿದಳೆಂದು ಉಲ್ಲೇಖವಿದೆ. ನಾರಾಯಣ ದೇವರನ್ನು ಮಾಡಿಸಿದಳೆಂದೂ ವಿವರಿಸಲಾಗಿದೆ ಏಚ ಅಥವಾ ಏಚಿರಾಜನ ಮಗ ತಿಳಿಸುವ ಶಾಸನದಲ್ಲಿ[೧೦೨] ಏಚಿರಾಜನ ಪತ್ನಿ ಪೋಚಕಬ್ಬೆ ಮತ್ತು ಅಕೆಯ ಸೊಸೆ ಲಕ್ಷ್ಮಿ ಇಬ್ಬರೂ ಸೇರಿ ಜಿನಾಲಯವೊಂದನ್ನು ಕಟ್ಟಿಸಿದರೆಂದು ಹೇಳಲಾಗಿದೆ. ಇದನ್ನು ಲಕ್ಷ್ಮೀ ಅಥವಾ ಲಕ್ಕತಿಯನ್ನು ದಂಡನಾಯಕಿತಿ ಲಕ್ಕಲೆಯೆಂದು ಕರೆಯಲಾಗಿದೆ. ಕ್ರಿ.ಶ. ೧೧೧೫ರ ಶಾಸನದಲ್ಲಿ[೧೦೩] ಈಕೆಯ ಅಣ್ಣ ಬೂಚಿರಾಜನು ನಿಧನ ಹೊಂದಿದಾಗ ಆತನಿಗಾಗಿ ನಿಶಧಿಯೊಂದನ್ನು ಸ್ಥಾಪಿಸಿದಳು. ಕ್ರಿ.ಶ. ೧೧೧೫ರಲ್ಲಿ ಈಕೆಯ ಗುರು ಪ್ರಭಾಚಂದ್ರ ಸಿದ್ಧಾಂತ ದೇವರ ಗುರುಗಳಾದ ಮೇಘಚಂದ್ರ ತ್ರೈವಿಧ್ಯದೇವರ ಮರಣವನ್ನು ತಿಳಿಸುತ್ತದೆ.[೧೦೪] ಕ್ರಿ.ಶ. ೧೧೨೦ರಲ್ಲಿ ಈಕೆಯ ಹಿರಿಯ ಸಹೋದರಿ ದೇಮವ್ವ ಸಂನ್ಯಾಸನ ವಿಧಿಯಿಂದ ಮುಡುಪಿದಳು.[೧೦೫] ಮತ್ತು ಈಕೆಯು ಬಸದಿಯೊಂದನ್ನು ಕಟ್ಟಿಸಿದ ಉಲ್ಲೇಖವಿದೆ.[೧೦೬] ತನ್ನ ಬಂಧುಗಳ, ಗುರುಗಳ ಈ ವಿಯೋಗಗಳ ನಂತರ ಲಕ್ಕಲೆಯು ಸಹ ಸಮಾಧಿ ಮರಣವನ್ನು ಹೊಂದಿದಳೆಂದು ಶಾಸನದಿಂದ[೧೦೭] ತಿಳಿದುಬರುತ್ತದೆ.

ಹೊಯ್ಸಳರ ಇನ್ನೊಬ್ಬ ಮಂತ್ರಿಯಾದ ಚಂದ್ರಮೌಳಿಯ ಉಲ್ಲೇಖ ಎರಡು ಶಾಸನಗಳಲ್ಲಿ[೧೦೮] ಇದೆ. ಇತನು ಶಿವಭಕ್ತನಾಗಿದ್ದು ತನಗಾರಾಧ್ಯಂ, ಹರಂ, ಎಂದು ಕರೆದುಕೊಂಡಿದ್ದಾನೆ. ಈತನ ಪತ್ನಿಯಾದ ಅಚಲದೇವಿಯು ಅಕ್ಕನ ಬಸದಿಯನ್ನು ಕಟ್ಟಿಸಿದಳು. ತಾನು ಶೈವನಾದರೂ ತನ್ನ ಪತ್ನಿ ಜಿನ ಭಕ್ತೆಯಾಗಿರಲು ಅವಕಾಶಕೊಟ್ಟುದಲ್ಲದೆ ಬಸದಿ ನಿರ್ಮಾಣಕ್ಕೂ ಸಹಕರಿಸಿದ ಚಂದ್ರಮೌಳಿಯ ಧರ್ಮಸಹಿಷ್ಣುತಾ ಮನೋಭಾವ

ಅನುಕರಣೀಯ. ಹೊಯ್ಸಳ ರಾಣಿಯಾದ ಶಾಂತಲದೇವಿಯ ಉಲ್ಲೇಖವಿರುವ ಐದು ಶಾಸನಗಳು[೧೦೯] ಲಭ್ಯವಿವೆ. ಸವತಿಗಂಧಾವರಣ ಬಸದಿಯನ್ನು ಕಟ್ಟಿಸಿದಳು. ಶಾಂತಲೆ ಕಲ್ಕುಣಿ ನಾಡಿನ ಮೊಟ್ಟೆನವಿಲೆ ಗ್ರಾಮವನ್ನು ಮೇಘಚಂದ್ರ ದೇವರ ಶಿಷ್ಯ ಪ್ರಭಾಚಂದ್ರ ಸಿದ್ಧಾಂತ ದೇವಗೆ ದತ್ತಿಯಾಗಿ ನೀಡಿದ್ದಾಳೆ. ಶಾಂತಲೆಯು ಶಿವಗಂಗೆಯಲ್ಲಿ ಮುಡುಪಿದ ಸುದ್ದಿ ತಿಳಿದ ನಂತರ ಈಕೆಯ ತಾಯಿ ಮಾಚಿಕಬ್ಬೆಯು ಸಂನ್ಯಾಸವನ್ನು ತೆಗೆದುಕೊಂಡು ಸಮಾಧಿ ಮರಣವನ್ನಪ್ಪಿದಳು. ಇಲ್ಲಿ ಕೂಡ ಶೈವ ಜೈನಧರ್ಮಗಳ ಸಮ್ಮಿಲನವನ್ನು ಕಾಣಬಹುದು.[೧೧೦] ನಯಕೀರ್ತಿ ಸಿದ್ದಾಂತ ದೇವರ ಶಿಷ್ಯನಾದ ಹಿರಿಯ ದಂಡನಾಯಕ ಹುಳ್ಳರಸನನ್ನು ಉಲ್ಲೇಖಿಸುವ ಶಾಸನಗಳು[೧೧೧] ಶ್ರವಣಬೆಳಗೊಳದಲ್ಲಿವೆ. ಸವಣೀರು, ಚಿಕ್ಕ ಮತ್ತು ಕಗ್ಗರೆ ಗ್ರಾಮಗಳನ್ನು ಹೊಯ್ಸಳ ಒಂದನೆಯ ನರಸಿಂಹನಿಂದ ಪಡೆದು ಬಾಹುಬಲಿಗೆ ದತ್ತಿಯಾಗಿ ನೀಡಿದ ದಾನಿಯಾಗಿದ್ದಾನೆ. ವಾಜೀ ವಂಶಕ್ಕೆ ಸೇರಿದ ಯಕ್ಷರಾಜನ ಪುತ್ರನಾದ ಹುಳ್ಳರಾಜನ ತಾಯಿ ಲೋಕಾಂಬಿಕೆ ಮುಂದೆ ಇನ್ನೂ ಹಲವು ಅಧಿಕಾರಿಗಳು ನೀಡಿದ ದಾನಗಳ ಬಗ್ಗೆ ತಿಳಿಸುವ ಶಾಸನಗಳು ಇಲ್ಲಿವೆ.

ವಿಜಯನಗರದ ಅರಸನ ೫ ಶಾಸನಗಳು ದೊರಕಿವೆ. ಇವುಗಳಲ್ಲಿ ಮುಖ್ಯವಾಗಿ ಕ್ರಿ.ಶ ೧೪೦೪ರ ಶಾಸನದಲ್ಲಿ[೧೧೨] ಇಮ್ಮಡಿ ಹರಿಹರರಾಯನ ದಿನಾಂಕ ೩೦-೮-೧೪೦೪ ಮರಣವನ್ನು ಸೂಚಿಸುತ್ತದೆ. ಹಾಗೆಯೇ ಕ್ರಿ.ಶ. ೧೫ನೆಯ ಶತಮಾನದ ಶಾಸನದಲ್ಲಿ[೧೧೩] ದೇವರಾಯ ಮಹಾರಾಯರ ರಾಣಿ ಭೀಮಾದೇವಿಯೆಂಬುವವಳು ಶಾಂತಿನಾಥ ಸ್ವಾಮಿಯನ್ನು ಮಾಡಿಸಿದಳೆಂದು ವಿವರಿಸಿದೆ. ಇಮ್ಮಡಿ ದೇವರಾಯನ ಮರಣದ ದಿನಾಂಕವನ್ನು ೨೯-೮-೧೪೪೬ ಎಂದು ತಿಳಿಸಿರುವ ಶಾಸನವೂ[೧೧೪] ಲಭ್ಯವಿದೆ.

ಮೈಸೂರು ಒಡೆಯರಾದ ಚಾಮರಾಜ ಒಡೆಯರು ಶ್ರವಣಬೆಳಗೊಳಕ್ಕೆ ಬಂದಿದ್ದಾಗ ಇಲ್ಲಿನ ಮಠದ ಸಾಲದ ಬಗ್ಗೆ ತಿಳಿದು ತಮ್ಮ ತಂದೆತಾಯಿಗಳ ಪುಣ್ಯಾರ್ಥವಾಗಿ ಈ ಸಾಲವನ್ನು ತೀರಿಸಿ ಕೊಡುತ್ತಾರೆ.[೧೧೫] ಕ್ರಿ.ಶ. ೧೬೭೨ನೆಯ ಶಾಸನದಲ್ಲಿ[೧೧೬] ದೊಡ್ಡ ದೇವರಾಜ ಒಡೆಯರು ಬ್ರಾಹ್ಮಣರ ಅನ್ನಸತ್ರಕ್ಕೆ ವ್ಯವಸ್ಥೆ ಮಾಡಿದ್ದನ್ನು ವಿವರಿಸಿದೆ. ಜೈನರಿಗೆ ಸಂಬಂಧಿಸಿದ ಕೆಲವು ಶಾಸನಗಳಲ್ಲಿ ಇದೂ ಒಂದು. ಇನ್ನೊಂದು ಶಾಸನದಲ್ಲಿ ಚಿಕ್ಕದೇವರಾಜೇಂದ್ರ ಒಡೆಯರು ಕಲ್ಯಾಣಿಯನ್ನು ದುರಸ್ತಿಗೊಳಿಸಿದ[೧೧೭] ವಿಚಾರವಿದೆ. ದೊಡ್ಡ ಕೃಷ್ಣರಾಜ ಒಡೆಯರ ಶಾಸನದಲ್ಲಿ[೧೧೮] ಕಲ್ಯಾಣಿಯನ್ನು ಚಿಕ್ಕದೇವರಾಜ ಕಲ್ಯಾಣಿಯೆಂದು ಕರೆಯಲಾಗಿದೆ. ಕೃಷ್ಣರಾಜ ಒಡೆಯರ ಶಾಸನವೊಂದು[೧೧೯] ಭಾರಿಗಾಟು ಕಂದಾಚಾರ ಸವಾರ

ಕಛೇರಿಯಲ್ಲಿ ಭಕ್ಷಿಯಾಗಿದ್ದ ದೇವರಾಜೈ ಅರಿಸಿನವರು ಬಾಹುಬಲಿಯ ಮಸ್ತಾಕಾಭಿಷೇಕದಂದು ಮರಣಿಸಿದರೆಂದೂ ಅವರ ಮಗ ಪುಟ್ಟದೇವರಾಜೈ ಅರಸಿನವರು ೧೦೦ ವರಾಹದ ಪುದುವಟ್ಟನ್ನು ಸ್ಥಾಪಿಸಿ ಪ್ರತಿವರ್ಷ ಆ ದಿನದಂದು ಗೋಮ್ಮಟೇಶ್ವರನಿಗೆ ವಿಶೇಷ ಪೂಜೆ ಸಲ್ಲಿಸಬೇಕೆಂದು ದಾಖಲಾಗಿದೆ. ಮಂಡಲೇಶ್ವರ ಕುಲೋತ್ತುಂಗ ಚಂಗಾಳವ ಮಹಾದೇವನನ್ನು ಉಲ್ಲೇಖಿಸುವ ಶಾಸನವೊಂದಿದೆ. ಈತನ ಪ್ರಧಾನ ಶಿರೋಮಣಿ, ಸಮ್ಯಕ್ತವ ಚೂಡಾಮಣಿ ಚಂನ್ನಬೊನ ಬಳ್ಳಿವಾಡವನ್ನು ಜೀರ್ಣೋದ್ಧಾರ ಮಾಡಿಸಿದನೆಂಬ ವಿವರವಿದೆ.

**ಸಂರಕ್ಷಿತ ಸ್ಮಾರಕಗಳು :**

ಶ್ರವಣಬೆಳಗೊಳದಲ್ಲಿ ಬಸದಿ, ಸ್ತಂಭ, ಕೊಳ ಮುಂತಾದ ರಚನೆಗಳು ಚಿಕ್ಕಬೆಟ್ಟ-ದೊಡ್ಡಬೆಟ್ಟ ಮತ್ತು ಊರಿನಲ್ಲಿ ಕಂಡುಬಂದರೂ ಅವು ಒಂದು ಕಾಲದಲ್ಲಾದ ರಚನೆಗಳಲ್ಲ. ಜನಸಾಂದ್ರತೆ ಹೆಚ್ಚಿದಂತೆ ಧರ್ಮದಲ್ಲಿನ ತತ್ವ ವಿಬೇಧಗಳುಂಟಾದಾಗ ಜೊತೆಗೆ ಅವಶ್ಯಕತೆಗೆ ತಕ್ಕಂತೆ ಸು. ೬ನೆಯ ಶತಮಾನದಿಂದ ಇಂದಿನವರೆಗೆ ರಚನೆಗಳು ಹಾಗೂ ಜೀರ್ಣೋದ್ಧಾರಗಳು ನಡೆಯುತ್ತಲೇ ಬಂದಿವೆ. ಹೀಗೆ ರಚನೆಗಳಾಗುವಾಗ ಆಯಾ ಕಾಲದ ವಾಸ್ತುಶಿಲ್ಪ ಲಕ್ಷಣವನ್ನು ಅಳವಡಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಇಲ್ಲಿನ ಬಸದಿಗಳ ಹಾಗೂ ಇತರ ವಾಸ್ತುರಚನೆಗಳಲ್ಲಿ ಕೆಲವನ್ನು ಮಾತ್ರ ಕಟ್ಟಿದುದಕ್ಕೆ ಉಲ್ಲೇಖವಿದೆ. ಕೆಲವೊಮ್ಮೆ ಜೀರ್ಣೋದ್ಧಾರ ಮಾಡಿಸಿದಾಗ ಬಸದಿಯನ್ನು ನಿರ್ಮಿಸಿದಂತೆ ಹೇಳಿಕೊಂಡಿರುವುದರಿಂದ ಇಂತಹ ಶಾಸನಗಳಿರುವ ಬಸದಿಗಳ ನಿರ್ಮಿತಿಯ ಕಾಲವನ್ನು ನಿರ್ಧರಿಸುವುದು ಕಷ್ಟವಾಗುತ್ತದೆ. ಆದರೂ ಅವುಗಳಲ್ಲಿ ಉಳಿದಿರಬಹುದಾದ ಹಳೆಯ ವಾಸ್ತು ಅವಶೇಷಗಳನ್ನು ಗಮನಿಸಿ ಕಾಲವನ್ನು ನಿರ್ಧರಿಸಬೇಕಾಗುತ್ತದೆ.

೧೨ನೆಯ ಶತಮಾನದ ಪೂರ್ವಾರ್ಧದಲ್ಲಿ ಶ್ರವಣಬೆಳಗೊಳದಲ್ಲಿ ಅನೇಕ ಬಸದಿಗಳನ್ನು ಗಂಗರಾಜ ಮತ್ತವನ ಸಂಬಂಧಿಗಳು ಕಟ್ಟಿಸಿದಂತೆ ಹೇಳಿಕೊಂಡಿದ್ದರೂ ಅವು ಅವರಿಗಿಂತ ಹಿಂದಿನವೆಂಬುದನ್ನು ಅವುಗಳಲ್ಲಿ ಉಳಿದಿರುವ ಅವಶೇಷಗಳಿಂದ ಅರಿಯಬಹುದು. ಹೀಗಾಗಿ ೧೨ನೆಯ ಶತಮಾನದ ಆರಂಭ ಭಾಗದಲ್ಲಿ ಶ್ರವಣಬೆಳಗೊಳದಲ್ಲಿ ನಡೆದದ್ದು ಬಹುತೇಕ ಜೀರ್ಣೋದ್ಧಾರ ಕಾರ್ಯ, ಹೀಗೆ ಜೀರ್ಣೋದ್ಧಾರವಾಗುವಾಗ ಅನೇಕ ರಚನೆಗಳಲ್ಲಿರುವ ಮೂಲ ಸ್ವರೂಪವು ಬದಲಾಗಿರುವುದುಂಟು. ಶ್ರವಣಬೆಳಗೊಳದ ಅನೇಕ ವಾಸ್ತುರಚನೆಗಳು ಬದಲಾವಣೆಗೆ

ಒಳಗಾಗಿವೆ. ಅವುಗಳಲ್ಲಿ ಕೆಲವು ವಿಸ್ತಾರವಾಗಿದ್ದರೆ, ಕೆಲವು ಕುಗ್ಗಿವೆ. ಇಲ್ಲಿನ ವಾಸ್ತುರಚನೆಗಳು ಈ ಕೆಳಗಿನಂತಿವೆ.

**ದೊಡ್ಡಬೆಟ್ಟ (ವಿಂಧ್ಯಾಗಿರಿ)**

೧. ಗೊಮ್ಮಟ ಶಿಲ್ಪ

೨. ಸಿದ್ಧರ ಬಸದಿ

೩. ಅಖಂಡ ಬಸದಿ

೪. ಚನ್ನಣ್ಣನ ಬಸದಿ

೫. ಒದೆಗಲ್ಲು ಬಸದಿ

೬. ತ್ಯಾಗದ ಬ್ರಹ್ಮದೇವರ ಕಂಬ

೭. ಚೌವೀಸ ತೀರ್ಥಂಕರ ಬಸದಿ

೮. ಭಂಡಾರ ಬಸದಿ

೯. ಗುಳ್ಳೆಕಾಯಿ ಅಜ್ಜಿ ಮಂಟಪ

೧೦.ಚನ್ನಣ್ಣನ ಮಂಟಪ

೧೧.ಬ್ರಹ್ಮದೇವರ ದೇವಾಲಯ

೧೨.ಪಾತಾಳಯಕ್ಷನ ಕಂಬ

೧೩.ಚನ್ನಣ್ಣನ ಕಂಬ

೧೪.ಲಲಿತ ಸರೋವರ

೧೫.ಚನ್ನಣ್ಣನ ದೋಣಿ

೧೬.ಒಡೆಯರ ಮಂಟಪ

**ಚಿಕ್ಕಬೆಟ್ಟ (ಚಂದ್ರಗಿರಿ)**

೧.ಭದ್ರಬಾಹು ಗುಹೆ

೨.ಚಂದ್ರಗುಪ್ತ ಬಸದಿ

೩.ಚಂದ್ರಪ್ರಭ ಬಸದಿ

೪.ಎರಡುಕಟ್ಟೆ ಬಸದಿ

೫.ಮಜ್ಜಿಗಣ ಬಸದಿ

೬.ಸುಪಾರ್ಶ್ವನಾಥ ಬಸದಿ

೭.ಸವತಿಗಂಧಾವರಣ ಬಸದಿ

೮. ಕತ್ತಲೆ ಬಸದಿ

೯. ತೇರಿನ ಬಸದಿ

೧೦. ಚಾವುಂಡರಾಯನ ಬಸದಿ

೧೧. ಶಾಸನ ಬಸದಿ

೧೨. ಇರುವೆ ಬ್ರಹ್ಮದೇವರ ಗುಡಿ

೧೩. ಶಾಂತೀಶ್ವರ ಬಸದಿ

೧೪. ಪಾರ್ಶ್ವನಾಥ ಬಸದಿ

೧೫. ಶಾಂತಿನಾಥ ಬಸದಿ

೧೬. ಕಾಗೆ ಬ್ರಹ್ಮದೇವರ ಕಂಬ

೧೭. ಮಾನ ಸ್ತಂಭ

೧೮. ಕಂಚಿನ ದೋಣಿ

೧೯. ಲಕ್ಕಿ ದೋಣಿ

೨೦. ಜಿನನ ದೋಣಿ

೨೧. ಇಂದ್ರನ ಮಂಟಪ

೨೨. ಗಂಗರಾಜನ ಮಂಟಪ

೨೩. ಶಾಂತಲೆಯ ಮಂಟಪ

೨೪. ನಯಕೀರ್ತಿಗಳ ಮಂಟಪ

೨೫. ಮಹಾನಮಿ ಮಂಟಪ

**ಶ್ರವಣಬೆಳಗೊಳ :**

೧. ಸಿದ್ಧಾಂತ ಬಸದಿ

೨. ದಾನಶಾಲ ಬಸದಿ

೩. ಭಂಡಾರ ಬಸದಿ

೪. ಅಕ್ಕನ ಬಸದಿ

೫. ನಗರ ಜಿನಾಲಯ

೬. ಮಂಗಾಯಿ ಬಸದಿ

೭. ಜೈನ ಮಠ

೮. ಕಲ್ಯಾಣಿ

ಮೇಲಿನ ವಾಸ್ತು ಮಾದರಿಯ ಬಾಹುಬಲಿಯ ಶಿಲ್ಪ, ಬಸದಿಗಳು ಕಂಬಗಳು, ಮಂಟಪಗಳು ಹಾಗೂ ಕಲ್ಯಾಣಿಯನ್ನು ಶ್ರವಣಬೆಳಗೊಳ ಗ್ರಾಮ ಹಾಗೂ ಎರಡು ಬೆಟ್ಟದಲ್ಲಿರುವ ವಾಸ್ತುಗಳಾಗಿವೆ. ಇವುಗಳಲ್ಲಿ ಪ್ರಮುಖವಾದ ವಾಸ್ತುಗಳನ್ನು ಕೆಳಗೆ ವಿವರಿಸಲಾಗಿದೆ.

**ದೊಡ್ಡಬೆಟ್ಟ (ಇಂದ್ರಗಿರಿ) :**

**ಗೊಮ್ಮಟ ಶಿಲ್ಪ** : ೧೦೨೦ಮೀ ಎತ್ತರದ ದೊಡ್ಡಬೆಟ್ಟದಲ್ಲಿ ಮೇಲೆ ಉತ್ತಾರಾಭಿಮುಖವಾಗಿ ಕಾಯೋತ್ಸರ್ಗ ಭಂಗಿಯಲ್ಲಿ ನಿಂತಿರುವ ೧೭.೭೦ಮೀ ಎತ್ತರದ ಗೊಮ್ಮಟ ಶಿಲ್ಪ ಪ್ರಪಂಚದಲ್ಲಿಯೇ ಅತ್ಯಂತ ಎತ್ತರದ ಏಕಶಿಲೆಯ ಕಲಾಕೃತಿಯಾಗಿದೆ. ಗಂಭೀರವಾದ ಪ್ರಶಾಂತವಾದ ಮುಖಮುದ್ರೆ ತಲೆಯಲ್ಲೆಲ್ಲ ವ್ಯಾಪಿಸಿಕೊಂಡಿರುವ ಗುಂಗುರ ಕೂದಲು, ಪೌರುಷದ ಪ್ರತೀಕವೆಂಬಂತಿರುವ ಭುಜ, ವಿಶಾಲವಾದ ಎದೆ, ನವಿರಾದ ಹೆಬ್ಬೆರಳು, ಹೊರ ಮುಖವಾಗಿರುವಂತೆ ಎರಡು ಹಸ್ತಗಳು, ಸಣ್ಣನಡು, ಮೊಣಕಾಲು, ಪಾದ ಇವುಗಳಿಂದ ಇದು ಗಂಭೀರವಾದ ಶಿಲ್ಪಕೃತಿ ಎನಿಸಿದೆ. ತೊಡೆಗಳ ಕೆಳಭಾಗ ಹುತ್ತದಿಂದ ಆವೃತವಾಗಿದೆ. ಹುತ್ತದಿಂದ ಸರ್ಪಗಳು ಹೊರಬಂದಿವೆ. ಎರಡು ಕಾಲುಗಳನ್ನೂ, ತೋಳುಗಳನ್ನೂ ಮಾಧವೀಲತೆ ಸುತ್ತಿಕೊಂಡಿದೆ. ಕ್ರಿ.ಶ. ೯೩೦ರಲ್ಲಿ ಚಾವುಂಡರಾಯನು ಈ ಮೂರ್ತಿಯನ್ನು ಪ್ರತಿಷ್ಠಾಪಿಸಿದ.[೧೨೦]

**ಒದೆಗಲ್ಲು ಬಸದಿ** : ಅಧಿಷ್ಠಾನಕ್ಕೆ ಒರಗಿ ನಿಂತಿರುವ ಕಲ್ಲು ಕಂಬದ ಆಧಾರದಿಂದ ಈ ದೇವಾಲಯವನ್ನು ಒದೆಗಲ್ಲು ಬಸದಿ ಎಂದು ಕರೆಯಲಾಯಿತು. ಈ ಬೆಟ್ಟದ ಮೇಲಿನ ಮಂದಿರಗಳಲ್ಲಿಯೇ ಇದು ಅತೀ ಎತ್ತರವಾದದ್ದು. ಇದನ್ನುಳಿದು ಈ ಕೇಂದ್ರದಲ್ಲಿ ಬೇರೆಯಾವ ತ್ರಿಕೂಟ ಮಂದಿರವೂ ಇಲ್ಲ. ಸ್ಥಳೀಯ ಗ್ರಾನೈಟ್ ಕಲ್ಲುಗಳಲ್ಲಿ ಕಟ್ಟಲಾದ ಈ ದೇವಾಲಯವು ತನ್ನ ವಾಸ್ತುಲಕ್ಷಣಗಳಿಂದ ಹಾಗೂ ಉನ್ನತವಾದ ಸೋಪಾನ ಪಂಕ್ತಿಗಳಿಂದ ನಮ್ಮನ್ನಾಕರ್ಷಿಸುವುದು. ಹೊರಗೋಡೆಗಳು ತುಂಬಾ ಸರಳವಾಗಿದ್ದು, ನವರಂಗದ ಎಲ್ಲಾ ಕಂಬಗಳು ದುಂಡಾಕಾರವಾಗಿವೆ. ಈ ಬಸದಿಯ ಅಧಿಷ್ಠಾನದ ಭಾಗಗಳು ಇವುಗಳ ಆಧಾರದಿಂದ ಇದನ್ನು ೧೩ನೆಯ ಶತಮಾನದ ಆದಿ ಭಾಗಕ್ಕೆ ಸೇರಿಸಬಹುದಾಗಿದೆ.

**ಸಿದ್ಧರ ಬಸದಿ** : ಗೊಮ್ಮಟನ ಹೊರ ಪ್ರಕಾರದಲ್ಲಿ ಈಶಾನ್ಯಕ್ಕೆ ಪಶ್ಚಿಮಾಭಿಮುಖವಾಗಿ ಈ ಬಸದಿ ಇದೆ. ಗರ್ಭಗೃಹ ಸುಖನಾಸಿಯಲ್ಲಿ ಬಾಗಿಲ ಎರಡೂ ಕಡೆಯಲ್ಲಿ ಎರಡು ನಿಸಧಿ ಶಾಸನಗಳಿದ್ದು, ಇವುಗಳು ಮೇಲ್ಭಾಗದಲ್ಲಿ ಗೋಪುರಗಳನ್ನು ಪಡೆದಿದ್ದು ಸುಂದರವಾಗಿವೆ. ಈ

ನಿಸದಿಗಲ್ಲು ಶಾಸನಗಳು ಕ್ರಿ.ಶ. ೧೩೯೮ರ ಮುನಿ ಪಂಡಿತಾರಾಧ್ಯ ಹಾಗೂ ೧೪೩೯ರ ಶ್ರುತಮುನಿ ಇಹಲೋಕ ತ್ಯಾಗಮಾಡಿದ ವಿಷಯವನ್ನು ತಿಳಿಸುತ್ತದೆ.[೧೨೧] ಈ ಶಾಸನವನ್ನು ಕನ್ನಡ ಕವಿ ಮಂಗರಾಜ ರಚಿಸಿದ್ದಾನೆ. ಇಲ್ಲಿನ ಒಂದು ಶಾಸನವು ಬೆಳಗೊಳದಲ್ಲಿ ಅಕ್ಕನ ಬಸದಿ ಕಟ್ಟಿಸಿದ ಆಚಿಯಕ್ಕನು ಗೊಮ್ಮಟನಾಥನಿಗೆ ಪಕ್ಕದ ಸೀಮೆಯನ್ನು ದತ್ತಿ ಬಿಟ್ಟ ವಿಷಯ ತಿಳಿಸುತ್ತದೆ.

**ಬ್ರಹ್ಮದೇವರ ದೇವಾಲಯ** : ದೊಡ್ಡಬೆಟ್ಟಕ್ಕೆ ಹತ್ತುವ ಮಾರ್ಗದಲ್ಲಿ ಸ್ವಲ್ಪ ಮೇಲಕ್ಕೆ ಈ ಬಸದಿ ಇದೆ. ಇದರಲ್ಲಿನ ದೇವರು ಉದ್ಭವ ಮೂರ್ತಿ, ಹುಟ್ಟು ಗುಂಡು, ಇದನ್ನು ಬ್ರಹ್ಮದೇವರೆಂದು ಕರೆಯುತ್ತಾರೆ. ಈ ಬಸದಿಯ ಕಟ್ಟಡವನ್ನು ಹಿರಿಸಾವೆಯ ಗಿರಿಗೌಡನ ತಮ್ಮ ರಂಗಯ್ಯನು ೧೬೭೯ರ ಸುಮಾರಿನಲ್ಲಿ ಕಟ್ಟಿಸಿದನು. ಇದರ ಮೇಲೆ ೨೦ರ ದಶಕದಲ್ಲಿ ಕಟ್ಟಿದ ಕಟ್ಟಡವೊಂದಿದ್ದು, ಇದರಲ್ಲಿ ಪಾರ್ಶ್ವನಾಥನ ಮೂರ್ತಿ ಇದೆ ಈ ಬಸದಿಯನ್ನು ಇತ್ತೀಚೆಗೆ ನವೀಕರಿಸಲಾಗಿದೆ.

**ಚೌವೀಸ ತೀರ್ಥಂಕರ ಬಸದಿ** : ಇಂದ್ರಗಿರಿಯ ಮೇಲೆ ಹತ್ತಿ ಮೊದಲ ಸುತ್ತಿನ ಕೋಟೆಯನ್ನು ಪ್ರವೇಶಿಸಿದರೆ ಬಲಕ್ಕೆ ಸಿಗುವುದೇ ಈ ಚೌವೀಸ ತೀರ್ಥಂಕರ ಬಸದಿ. ಪೂರ್ವಾಭಿಮುಖವಾಗಿರುವ ಈ ಬಸದಿಯು ಚಿಕ್ಕದಾಗಿದೆ. ಗರ್ಭಗೃಹದಲ್ಲಿ ಒಂದೇ ಕಲ್ಲಿನಲ್ಲಿ ಕಡೆದಿರುವ ಚೌವೀಸ ತೀರ್ಥಂಕರ ಶಿಲ್ಪಗಳನ್ನು ಕೆತ್ತಿದೆ. ಈ ಬಸದಿಯನ್ನು ಕ್ರಿ.ಶ. ೧೬೪೮ರಲ್ಲಿ ಚಾರುಕೀರ್ತಿ ಪಂಡಿತರ ಕಾಲದಲ್ಲಿ ಮುಳ್ಳಿನಾಯ್ಕ ಎಂಬುವವನು ಕಟ್ಟಿಸಿದನೆಂದು ಅಲ್ಲಿನ ಶಾಸನದಿಂದ ತಿಳಿಯುತ್ತದೆ. ಈ ಬಸದಿ ಹಾಗೂ ಒದೆಗಲ್ಲು ಬಸದಿ ಸಮೀಪದಲ್ಲಿ ಉತ್ತರ ದೇಶದ ಯಾತ್ರಾರ್ಥಿಗಳ ನಾಗರಿ ಭಾಷೆಯ ಶಾಸನಗಳು ಕಂಡುಬರುತ್ತವೆ.

**ಚನ್ನಣ್ಣನ ಬಸದಿ (ಚಂದ್ರನಾಥ ಬಸದಿ)** : ಒದೆಗಲ್ಲು ಬಸದಿಯ ಸಮೀಪದ ದೋಣಿಯ ಪಶ್ಚಿಮಕ್ಕೆ ಉತ್ತರಾಭಿಮುಖವಾಗಿ ಈ ಬಸದಿಯಿದೆ. ನರಸಿಂಹಪುರದ ಪಟ್ಟಸೋಮಿಸೆಟ್ಟಿ ಮತ್ತು ದೇಪಿರಮ್ಮನ ಮಕ್ಕಳಾದ ಚಿಕ್ಕಣ ಮತ್ತು ಚೆನ್ನಣ ಎಂಬುವವರು ಕ್ರಿ.ಶ. ೧೬೬೭ರಲ್ಲಿ ಈ ಆದೀಶ್ವರ ಬಸದಿಯನ್ನು ಮಾಡಿಸುತ್ತಾರೆ. ಇದು ಗರ್ಭಗೃಹ, ಮುಖಮಂಟಪ ಮತ್ತು ಸುತ್ತುಮಂಟಪವನ್ನು ಒಳಗೊಂಡಿದೆ. ಗರ್ಭಗೃಹ ಮತ್ತು ಮುಖಮಂಟಪಗಳು ಸುತ್ತುಮಂಟಪಕ್ಕಿಂತ ಎತ್ತರವಾಗಿವೆ.

**ಅಖಂಡ ಬಾಗಿಲು** : ಗೊಮ್ಮಟನ ನೇರಕ್ಕೆ ತಗ್ಗಿನಲ್ಲಿ ದೊಡ್ಡ ಹುಟ್ಟು ಬಂಡೆಯೊಂದರಲ್ಲಿ ಈ ಬಾಗಿಲನ್ನು ಕೊರೆಯಲಾಗಿದೆ. ಇದನ್ನು ಚಾವುಂಡರಾಯನೇ ಕೊರೆಸಿದನೆಂಬ ಪ್ರತೀತಿಯನ್ನು

ಅದರಲ್ಲಿನ ಅರೆಗಂಬಗಳು ಮತ್ತು ಗಜಲಕ್ಷ್ಮೀ ಶಿಲ್ಪ ಸಮರ್ಥಿಸುತ್ತವೆ. ಶೆಟ್ಟರ್ ಅವರು ಇದನ್ನು ಬಿಡಿರಚನೆಯೆಂದಿರುತ್ತಾರೆ ಬಹುಶಃ ಸರಿಯಾಗಿ ಗಮನಿಸದಿರುವುದರಿಂದ ಇಂತಹ ತಪ್ಪು ಅಭಿಪ್ರಾಯ ಅವರದಾಗಿದೆ. ಪರಂಪರೆ ಮತ್ತು ವಾಸ್ತವತೆ ಎರಡರಿಂದಲೂ ಇದು ಅಖಂಡವೇ ಆಗಿದೆ.

**ತ್ಯಾಗದ ಕಂಬ** : ಒದೆಗಲ್ಲು ಬಸದಿಯ ಪಶ್ಚಿಮಕ್ಕಿರುವ ಎರಡಂತಸ್ತಿನ ಮಂಟಪವು ವಾಸ್ತುಶಿಲ್ಪ ದೃಷ್ಠಿಯಿಂದ ಮಹತ್ವದ್ದಾಗಿರದಿದ್ದರೂ ಐತಿಹಾಸಿಕ ದೃಷ್ಠಿಯಿಂದ ಮಹತ್ವದ್ದಾಗಿದೆ. ಮಂಟಪದ ಕೇಂದ್ರಭಾಗದಲ್ಲಿರುವ, ಸೂಕ್ಷ್ಮವಾಗಿ ಕೆತ್ತಲಾದ ಈ ಕಂಬವು ಕಲಾತ್ಮಕವೂ ಸುಂದರವೂ ಆಗಿದೆ. ತ್ಯಾಗದ ಕಂಬವನ್ನು ೧೧ನೆಯ ಶತಮಾನದ ಕೊನೆಯ ಭಾಗದಲ್ಲಿ ನಿರ್ಮಿಸಲಾಯಿತೆಂದು ತಿಳಿದುಬರುವುದು ಮಂತ್ರಿ ಚಾವುಂಡರಾಯ ಇಲ್ಲಿಂದ ದಾನ ನೀಡುತ್ತಿದ್ದಾನೆಂದು ನಂಬಲಾಗಿದೆ. ತನ್ನ ಐಶ್ವರ್ಯವನ್ನಲ್ಲದೆ ತನ್ನ ಜೀವನವನ್ನು ಇಲ್ಲಿ ತ್ಯಾಗ ಮಾಡಿದನೆಂಬ ಒಂದು ವಾದವಿದೆ.

**ಚಿಕ್ಕ ಬೆಟ್ಟ (ಚಂದ್ರಗಿರಿ) :**

**ಪಾರ್ಶ್ವನಾಥ ಬಸದಿ** : ಚಿಕ್ಕ ಬೆಟ್ಟದ ಬಾಗಿಲಿನ ಎದುರಿಗೆ ಇರುವ ಕಟ್ಟಡವೇ ಪಾರ್ಶ್ವನಾಥ ಬಸದಿ ಅಥವಾ ಕಮಠ ಪಾರ್ಶ್ವನಾಥ ಬಸದಿಯಾಗಿದೆ. ಎತ್ತರವಾಗಿರುವ ಈ ಬಸದಿಯನ್ನು ಹೊಯ್ಸಳರ ಕಾಲದಲ್ಲಿ ಗಟ್ಟಿಗಲ್ಲನ್ನು ಬಳಸಿ ನಿರ್ಮಿಸಿರುತ್ತಾರೆ. ಜಗತಿ, ಉಪಾನ, ಕಂಠ, ತ್ರಿಪಟ್ಟ ಕುಮುದ, ಕಂಠ ಮತ್ತು ಕಪೋತವಿದ್ದು ಇದರ ಮೇಲೆ ಪ್ರತಿಮುಖ ಬರುವ ಸ್ಥಳಗಳಲ್ಲಿ ಉದ್ದದ ಸೀಳುಪಟ್ಟಿಕೆಗಳಿವೆ. ಇದರ ಮೇಲೆ ವೇದಿಭಾಗ ಬಂದಿದೆ. ಅದರ ಮೇಲೆ ಎತ್ತರದ ಭಿತ್ತಿಯಲ್ಲಿ ಬ್ರಹ್ಮಕಾಂತ ಉಬ್ಬು ಕಂಬಗಳು ಬಂದಿದ್ದು, ಶಲಾಕ, ಗಂಟಾ, ಎಡೆಕಟ್ಟು, ಕಂಠ ಬೋದಿಗೆಯ ಭಾಗಗಳಿವೆ. ಈ ಭಿತ್ತಿಯಲ್ಲಿ ಪ್ರಧಾನವಾಗಿ ಮೂರು ಪೂರ್ಣ ಪ್ರಮಾಣದ ಕೋಷ್ಟಗಳೂ, ಆರು ಹುಸಿಕೋಷ್ಠಗಳೂ ಬಂದಿವೆ. ಕೋಷ್ಠಗಳೂ ದೇವಾಲಯದ ಶಿಖರದ ಮಾದರಿಯಲ್ಲಿವೆ. ಸಭಾಮಂಟಪದ ಗೋಡೆ ಸಮಾವಾಗಿದ್ದು ಅಲಂಕಾರ ರಹಿತವಾಗಿದೆ. ಪ್ರಸ್ತರ ಭಾಗದಲ್ಲಿ ಇಳಿಜಾರಾಗಿ ಬಾಗಿದ ಶಿಲೆ ಕ್ಷುದ್ರನಾಸಿಗಳಿಂದ ಅಲಂಕೃತವಾದ ಕಪೋತವಿರುವುದು ಈ ಬಸದಿಯಲ್ಲಿ ಕಂಡುಬರುತ್ತದೆ.

**ಕತ್ತಲೆ ಬಸದಿ** : ಯಾವಾಗಲೂ ಕತ್ತಲೆ ತುಂಬಿದ್ದು ಬೆಳಕಿನ ಪ್ರವೇಶ ದುಸ್ತರವಾಗಿದ್ದುದರಿಂದ ಇದಕ್ಕೆ ಕತ್ತಲೆ ಬಸದಿ ಎಂಬ ಹೆಸರೇ ಪ್ರಸಿದ್ಧಿಯಾಯಿತು. ಈಗ ಬೆಳಕು ಬರುವಂತೆ ಮಾಡಿರುತ್ತಾರೆ ಒಳಗೆ ಆದಿನಾಥನ ಬಿಂಬವಿದೆ. ಪೂರ್ವಾಭಿಮುಖವಾಗಿರುವ ಈ

ಬಸದಿಯನ್ನು ಹೊಯ್ಸಳ ವಿಷ್ಣುವರ್ಧನನ ದಂಡನಾಯಕನಾಗಿದ್ದ ಗಂಗರಾಜನು ಕ್ರಿ.ಶ.೧೧೧೮ರಲ್ಲಿ[೧೨೨] ತನ್ನ ತಾಯಿ ಪೋಚವ್ವೆಗಾಗಿ ಕಟ್ಟಿಸಿದಂತೆ ಇಲ್ಲಿನ ಶಾಸನ ತಿಳಿಸುತ್ತದೆ.

**ಚಂದ್ರಗುಪ್ತ ಬಸದಿ :** ಭದ್ರಬಾಹುಮುನಿ ದೇಹತ್ಯಾಗ ಮಾಡಿದ ಅನಂತರ ಅವರ ಶಿಷ್ಯ ಚಂದ್ರಗುಪ್ತಮುನಿ ಇಲ್ಲಿಯೇ ನೆಲೆ ನಿಂತು ಸಲ್ಲೇಖನವನ್ನು ಸ್ವೀಕರಿಸಿ ಗುರುವಿನ ಮಾರ್ಗವನ್ನು ಹಿಡಿಯುತ್ತಾನೆ. ಆತ ಸಲ್ಲೇಖನವನ್ನು ಸ್ವೀಕರಿಸಿ ದೇಹತ್ಯಾಗ ಮಾಡಿದ್ದು ಬಹುಶಃ ಆತನ ಹೆಸರಿನ ಬಸದಿಯಿರುವ ಜಾಗದಲ್ಲಿಯೇ ಇದ್ದಿರಬೇಕೆಂದು ಜನ ಪರಂಪರಾಗತವಾಗಿ ಈ ಸ್ಥಳವನ್ನು ಗುರುತಿಸುತ್ತಿದ್ದರು. ಸುಮಾರು ೭ನೆಯ ಶತಮಾನದವರೆಗೆ ಇಲ್ಲಿ ಯಾವುದೇ ಕಟ್ಟಡವಿರಲಿಲ್ಲ ಅನೇಕ ಜನ ಕಂತಿಯರು, ಗುರುಗಳು, ಶ್ರಾವಕರು ಇಲ್ಲಿ ಬಂದು 'ನೋನ್ತು' ದೇಹವನ್ನು ಬಿಡುತ್ತಾರೆ ಇವರ ನೆನಪಿನಲ್ಲಿ ಒಂದೆರಡು ಶಾಸನಗಳನ್ನು ಬರೆಸಿರುತ್ತಾರೆ. ಉಳಿದಂತೆ ಯಾವ ಗುರುತೂ ಇರಲಿಲ್ಲ. ಇನ್ನೂ ಅನೇಕ ಪ್ರಾಚೀನ ಶಾಸನಗಳು ಇಂದಿನ ರಚನೆಗಳ ಅಡಿಯಲ್ಲಿ ಸೇರಿರಬಹುದು.

**ಶಾಸನ ಬಸದಿ : (ಆದಿನಾಥ ಬಸದಿ)** ಈ ಬಸದಿಯು ೧೦ನೆಯ ಶತಮಾನದ ಆದಿಭಾಗದಲ್ಲಿ ನಿರ್ಮಿತಾದ ಪೂರ್ವಾಭಿಮುಖವಾದ ಬಸದಿ. ಸಾಕಷ್ಟು ಬದಲಾವಣೆಗೆ ಒಳಪಟ್ಟ ಬಸದಿಯೂ ಆಗಿದೆ. ಬಸದಿಯ ಆದಿನಾಥನ ಪೀಠದಲ್ಲಿ ಗಂಗರಾಜನು ಇಂದಿರಾಕುಳಗೃಹ[೧೨೩]ವನ್ನು ಮಾಡಿಸಿದಂತೆ ಉಲ್ಲೇಖವಿದೆ. ಎರಡು ಕಟ್ಟೆ ಬಸದಿ ಮತ್ತು ಶಾಸನ ಬಸದಿಗಳನ್ನು ಗಂಗರಾಜನ ಪರಿವಾರದವರೇ ಜೀರ್ಣೋದ್ಧಾರ ಮಾಡಿಸಿರುವುದರಿಂದ ಇವುಗಳ ಅಧಿಷ್ಠಾನ ಭಾಗಗಳಲ್ಲಿ ಸಾಮ್ಯತೆ ಕಂಡುಬರುತ್ತದೆ. ಇದರ ಮುಂದೆ ಇರುವ ಶಾಸನದಲ್ಲಿ ಗಂಗರಾಜನು ತನ್ನ ತಾಯಿ ಮತ್ತು ಪತ್ನಿಯು ಕಟ್ಟಿಸಿದ ಬಸದಿಗಳ ನಿರ್ವಹಣೆಗೆ ಪರಮ ಎಂಬ ಗ್ರಾಮವನ್ನು ದಾನ ನೀಡಿದಂತೆ ತಿಳಿಸುತ್ತದೆ ಇದೇ ಪಾಠ ಎರಡು ಕಟ್ಟೆ ಬಸದಿ ಬಳಿಯ ಶಾಸನದಲ್ಲೂ ದೊರೆಯುತ್ತದೆ. ಈ ಬಸದಿಯಲ್ಲಿ ಗರ್ಭಗೃಹ, ತೆರೆದ ಅಂತರಾಳ ಆಯತಾಕಾರದ ನವರಂಗವಿದೆ. ಉಪಾನ ಅಧೋಕುಮುದ, ಗಳ, ತ್ರಿಪಟ್ಟಕುಮುದ, ಪಟ್ಟಿಕಾ ಭಾಗಗಳನ್ನು ಪಡೆದಿರುವ ಬಸದಿಯ ಭಿತ್ತಿಯು ಇಟ್ಟಿಗೆಯಿಂದ ರಚಿತವಾಗಿದೆ.

**ಚಂದ್ರಪ್ರಭ ಬಸದಿ :** ಈ ಬಸದಿಯು ಉತ್ತಾರಾಭಿಮುಖವಾಗಿದ್ದು, ಗಂಗರ ಕಾಲದ ವ್ಯವಸ್ಥಿತ ಮಾದರಿಯಲ್ಲಿದ್ದು ಚಂದ್ರಗುಪ್ತ ಬಸದಿಯ ರಚನೆಯ ಮಾದರಿಗಿಂತ ಮುಂದುವರಿದದ್ದಾಗಿದೆ. ಬಸದಿಯ ವಿಗ್ರಹದ ಪೀಠದಲ್ಲಿ 'ವಕ್ರಗಚ್ಚದ ಬಸದಿ' ಎಂದು ೧೧ನೆಯ ಶತಮಾನದ ಶಾಸನವಿದ್ದರೂ ಬಸದಿ ಅದಕ್ಕಿಂತ ಹಳೆಯದು. ಬಸದಿಯು ಗರ್ಭಗೃಹ, ಅಂತರಾಳ

ಸಹಕರಿಸುವುದು. (೪) ಪಾರಂಪರಿಕ ರಚನೆಗಳ ರಚನಾತ್ಮಕ ಸುರಕ್ಷತೆಯ ಮಧ್ಯಸ್ಥಗಾರರ ನಡುವೆ ಸುಸ್ಥಿರ ಸಹಯೋಗಕ್ಕೆ ಅಗತ್ಯವಾದ ವೇದಿಕೆಯನ್ನು ರಚಿಸಲು ಎಂಹೆಚ್‌ಆರ್‌ಡಿ, ಪಾರಂಪರಿಕ ರಚನೆಗಳು, ರಾಷ್ಟ್ರೀಯ ಮತ್ತು ರಾಜ್ಯ ಸಂಸ್ಥೆಗಳಿಗೆ ಸಂಬಂಧಿಸಿದ ಇತರ ರಾಷ್ಟ್ರೀಯ ಸಚಿವಾಲಯಗಳ ತಾಂತ್ರಿಕ ಸಂಗಮವಾಗಿದೆ. (೫) ಭಾರತದ ಅನೇಕ ಎಂಜಿನಿಯರಿಂಗ್ ಮತ್ತು ವಾಸ್ತುಶಿಲ್ಪ ಸಂಸ್ಥೆಗಳಲ್ಲಿ ಪಾರಂಪರಿಕ ರಚನೆಗಳ ರಚನಾತ್ಮಕ ಸುರಕ್ಷತೆಯಲ್ಲಿ ಶಿಕ್ಷಣ ಮತ್ತು ಸಂಶೋಧನಾ ಅವಕಾಶಗಳನ್ನು ಸೃಷ್ಟಿಸುವ ಕೆಲಸವಾಗಬೇಕಿದೆ. (೬) ಪಾರಂಪರಿಕ ರಚನೆಗಳ ರಚನಾತ್ಮಕ ಸುರಕ್ಷತೆಯ ಹಿನ್ನೆಲೆಯೊಂದಿಗೆ ಹೆಚ್ಚು ಅಗತ್ಯವಿರುವ ಉದ್ಯಮ ಭಾಗವಹಿಸುವವರನ್ನು ನಿರ್ಮಿಸಿ, ಆ ಮೂಲಕ ಹೊಸ ಉದ್ಯಮಕ್ಕೆ ಅವಕಾಶಗಳನ್ನು ಸೃಷ್ಟಿಸುತ್ತದೆ.

೩. **ಎನ್‌ಸಿಎಸ್‌ಎಚ್‌ಎಸ್ ಗುರಿ** : ಮುಂದಿನ ಎರಡು–ಮೂರು ದಶಕಗಳಲ್ಲಿ ಎನ್‌ಸಿಎಸ್‌ಎಚ್‌ಎಸ್ ಈ ಕೆಳಗಿನ ಉದ್ದೇಶಗಳನ್ನು ಸಾಧಿಸಲು ರಾಷ್ಟ್ರೀಯ ಮತ್ತು ರಾಜ್ಯ ಸಂಸ್ಥೆಗಳು ಸ್ವಾಯತ್ತ ಸಂಸ್ಥೆಗಳು. ಖಾಸಗಿ ವಲಯ ಮತ್ತು ಎಂಜಿನಿಯರಿಂಗ್, ವಾಸ್ತುಶಿಲ್ಪ ಸಂಸ್ಥೆಗಳನ್ನು ಅನುಷ್ಠಾನಗೊಳಿಸುವುದರೊಂದಿಗೆ ಪಾಲುದಾರರಾಗಲಿದೆ. (೧) ಸಮಂಜಸವಾದ ಗುಣಮಟ್ಟ ಮತ್ತು ಪ್ರಮಾಣವನ್ನು ನಿರ್ಮಿಸುವುದು ಔಪಚಾರಿಕ ಶಿಕ್ಷಣ ಮತ್ತು ತರಬೇತಿಯೊಂದಿಗೆ ಪಠ್ಯಕ್ರಮದ ಅಭಿವೃದ್ಧಿಯ ಮೂಲಕ ಪಾರಂಪರಿಕ ರಚನೆಗಳ ರಚನಾತ್ಮಕ ಸುರಕ್ಷತೆಯ ಹಿನ್ನೆಲೆ ಹೊಂದಿರುವ ಎಂಜಿನಿಯರಿಂಗ್ ಮಾನವಶಕ್ತಿಯನ್ನು ಸೃಷ್ಟಿಸುವುದು. (೨) ಪಾರಂಪರಿಕ ರಚನೆಗಳ ಸುರಕ್ಷತೆಯ ಬಗ್ಗೆ ಸ್ಪಷ್ಟವಾದ ಮೂಲಭೂತ ಸಂಶೋಧನೆಯನ್ನು ಪ್ರಾರಂಭಿಸುವುದು. (೩) ಅಕಾಡೆಮಿ ಮತ್ತು ಅನುಷ್ಠಾನ ಏಜೆನ್ಸಿಗಳ ನಡುವೆ ಸಹಕಾರ ವೃದ್ಧಿಸುವುದು. (೪) ಆದ್ಯತೆಯ ಪರಂಪರೆ ರಚನೆಗಳ ಸಂರಕ್ಷಣೆಗೆ ತಾಂತ್ರಿಕ ಪರಿಹಾರಗಳನ್ನು ಒದಗಿಸುವುದು (೫) ಅತ್ಯಾಧುನಿಕ ಜ್ಞಾನವನ್ನು ದಾಖಲಿಸುವುದು ಮತ್ತು ಪ್ರಸಾರ ಮಾಡುವುದು.[೩೧]

೪. **ಕಾರ್ಯತಂತ್ರ ಮತ್ತು ವಿತರಣೆಗಳು** : ಇದಕ್ಕೆ ಸಂಬಂಧಿಸಿದಂತೆ ಹೊಸ ಮಾದರಿಯ ಐದು ಕ್ಷೇತ್ರಗಳನ್ನು ಗುರುತಿಸಲಾಗಿದೆ. ಅವುಗಳೆಂದರೆ:

೧. ಸಂರಕ್ಷಣೆಯಲ್ಲಿ ತಂತ್ರಜ್ಞಾನವನ್ನು ಬಳಸುವುದು.

೨. ರಚನಾತ್ಮಕ ವಿಶ್ಲೇಷಣೆ ಮಾಡುವುದು.

೩. ಅಪಾಯ, ಭೂ ಭೌತಶಾಸ್ತ್ರ ಮತ್ತು ಜಿಯೋಟೆಕ್ನಿಕಲ್ ಎಂಜಿನಿಯರಿಂಗ್

೪. ಶಿಕ್ಷಣ, ಪ್ರಭಾವ, ನೀತಿ ಮತ್ತು ಸಮನ್ವಯ.

ಎನ್‌ಸಿಎಸ್‌ಎಚ್‌ಎಸ್ ಈ ಕೆಳಗಿನ ಸ್ಪಷ್ಟವಾದ ವಿತರಣಾ ಸಾಮಗ್ರಿಗಳನ್ನು ಒದಗಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಿದೆ.

೧. ಪಾರಂಪರಿಕ ರಚನೆಗಳ ರಚನಾತ್ಮಕ ಸುರಕ್ಷತೆಯ ವಿವಿಧ ಆಯಾಮಗಳ ಮೇಲೆ ಪ್ರಾಯೋಗಿಕ ಮತ್ತು ವಿಶ್ಲೇಷಣಾತ್ಮಕ ತನಿಖೆಗಾಗಿ ಅತ್ಯಾಧುನಿಕ ಸೌಲಭ್ಯಗಳ ಸ್ಥಾಪನೆ.

೨. ಏಜೆನ್ಸಿಗಳು, ಶೈಕ್ಷಣಿಕ ವಿಶ್ವವಿದ್ಯಾಲಯಗಳು ಮತ್ತು ವೃತ್ತಿಪರರನ್ನು ಅನುಷ್ಠಾನಗೊಳಿಸುವಲ್ಲಿ ಪಾರಂಪರಿಕ ಕಟ್ಟಡಗಳು ಎದುರಿಸುತ್ತಿರುವ ರಚನಾತ್ಮಕ ಸಮಸ್ಯೆಗಳಿಗೆ ತಾಂತ್ರಿಕ ಪರಿಹಾರಗಳನ್ನು ಕಂಡುಕೊಳ್ಳಲು ಅಗತ್ಯವಾದ ಜ್ಞಾನಶಾಲೆಗಳ ಪ್ರಾರಂಭ.

೩. ಮಧ್ಯಸ್ಥಗಾರರೊಂದಿಗೆ ಸಮಾಲೋಚಿಸಿ ಗುರುತಿಸಲಾದ ರಚನಾತ್ಮಕ ಸಮಸ್ಯೆಗಳಿಗೆ ತಾಂತ್ರಿಕ ಪರಿಹಾರಗಳು.

೪. ಸುರಕ್ಷತಾ ಮೌಲ್ಯಮಾಪನ ಮತ್ತು ಮರು ಸುಧಾರಣಾ ತಾಂತ್ರಿಕ ಕೈಪಿಡಿಗಳೊಂದಿಗೆ ಮತ್ತು ಮಾರ್ಗಸೂಚಿಗಳ ಅಭಿವೃದ್ಧಿ ಮಾಡುವುದು.

೫. ಏಜೆನ್ಸಿಗಳ ಅನುಷ್ಠಾನಗೊಳಿಸುವ ವೈಜ್ಞಾನಿಕ ಸಿಬ್ಬಂದಿ ಮತ್ತು ಅಕಾಡೆಮಿಯ ಅಧ್ಯಾಪಕ ಸದಸ್ಯರ ಜಂಟಿ ಸಂಶೋಧನ ಮೇಲ್ವಿಚಾರಣೆಯ ಮೂಲಕ ಶೈಕ್ಷಣೆಕ ಹಾಗೂ ತಾಂತ್ರಿಕ ಸಹಕಾರವನ್ನು ಸಮಾಜದ ಮುಖ್ಯವಾಹಿನಿಗೆ ತರಬಹುದು.

೬. ಪಾರಂಪರಿಕ ರಚನೆಗಳ ಸಂರಕ್ಷಣೆಯಲ್ಲಿ ತಾಂತ್ರಿಕ ವಿಷಯಗಳು ತಾಂತ್ರಿಕ ನೀತಿ ಅಭಿವೃದ್ಧಿಯ ಕುರಿತು ರಾಷ್ಟ್ರೀಯ ಮತ್ತು ರಾಜ್ಯ ಸರ್ಕಾರಗಳಿಗೆ ಬೌದ್ಧಿಕ ಒಳಹರಿವು.

**ಎನ್‌ಸಿಎಸ್‌ಎಚ್‌ಎಸ್‌ನ ಪ್ರಯತ್ನಗಳ ದ್ವಿತೀಯಾರ್ಧದ ಅಭಿವೃದ್ಧಿಗಳು ಹೀಗಿವೆ :**

೧. ಭಾರತದ ಪ್ರಮುಖ ಸ್ಮಾರಕಗಳ ರಚನಾತ್ಮಕ ನಡವಳಿಕೆಯನ್ನು ಅರ್ಥಮಾಡಿಕೊಳ್ಳಲು ಸಂಶೋಧನಾಧರಿತ ಅಂತರಶಿಸ್ತೀಯ ವಿಧಾನದ ಸಂಸ್ಕೃತಿಯನ್ನು ಪ್ರಾರಂಭಿಸುವುದು. ಆ ಮೂಲಕ ರಚನಾತ್ಮಕ ಸುರಕ್ಷತೆಯನ್ನು ತಿಳಿಸುವುದು.

೨. ವಿಭಿನ್ನ ಜ್ಞಾನ ವೇದಿಕೆಗಳಿಗಾಗಿ ವಿಶಾಲವಾದ ಭಾರತೀಯ ವಾಸ್ತುಶಿಲ್ಪ ಪರಂಪರೆಯಿಂದ ಅಗಾಧವಾದ ಕಲಿಕೆಯ ಅವಕಾಶವನ್ನು ಸೃಷ್ಟಿಸುವುದು, ಶ್ರೀಮಂತ ಭಾರತೀಯ ಪರಂಪರೆಯನ್ನು ರಕ್ಷಿಸಲು ಹಾಗೂ ಸಂರಕ್ಷಿಸಲು ಮತ್ತು ವ್ಯಾಖ್ಯಾನಿಸಲು ಒಂದು ಕೀಲಿಯಾಗಿದೆ.

೩. ಸಿವಿಲ್ ಎಂಜಿನಿಯರಿಂಗ್ ಸ್ಟ್ರಕ್ಚರಲ್ ಎಂಜಿನಿಯರಿಂಗ್, ಆರ್ಕಿಟೆಕ್ಚರ್, ಮೆಟೀರಿಯಲ್ ಸೈನ್ಸ್ ಮತ್ತು ಎಂಜಿನಿಯರಿಂಗ್ ತಂತ್ರಜ್ಞಾನ ಮತ್ತು ವಾಣಿಜ್ಯದ ಇತರ ಸಂಬಂಧಿತ ಕ್ಷೇತ್ರಗಳಲ್ಲಿ ಕಲಿಕೆ ಮತ್ತು ವ್ಯಾಪಾರದ ಹೊಸ ಅವಕಾಶಗಳ ಪ್ರಸರಣಕ್ಕೆ ಅನುವಾದಿಸುವ ದೀರ್ಘಕಾಲೀನ ಸಂಶೋಧನೆ ಮತ್ತು ಶಿಕ್ಷಣ ಪ್ರಯತ್ನಗಳು.

೪. ಶೈಕ್ಷಣಿಕ ವಿಶ್ವವಿದ್ಯಾಲಯಗಳು ಸಂಸ್ಥೆಗಳ ದೊಡ್ಡ ಗುಂಪಿನ ಪಠ್ಯಕ್ರಮದಲ್ಲಿ ಒಳಗೊಳಿಸುವುದು.

೫. ಭಾರತದ ಜನರು ಪಾರಂಪರಿಕ ರಚನೆಗಳ ಮೌಲ್ಯವನ್ನು ಅಂಗೀಕರಿಸುವುದು.

೬. ಹೆಚ್ಚು ಅಗತ್ಯವಿರುವ ರಾಷ್ಟ್ರೀಯ ಕಾರಣವಾದ ಸುಸ್ಥಿರ ರಾಷ್ಟ್ರೀಯ ಪರಂಪರೆಯನ್ನು ಖಾತ್ರಿಪಡಿಸಿಕೊಳ್ಳುವಲ್ಲಿ ಸಮಗ್ರ ಸಂರಕ್ಷಣಾ ಕಾರ್ಯತಂತ್ರವನ್ನು ನೀಡುವ ಮೂಲಕ ರಾಷ್ಟ್ರೀಯ ಸಾಮಾಜಿಕ ಪ್ರಸ್ತುತತೆ.

ಭಾರತದಲ್ಲಿ ಸಾಂಸ್ಕೃತಿಕ ಪರಂಪರೆಯ ಸಂರಕ್ಷಣೆಯ ಸವಾಲನ್ನು ದೇಶದಲ್ಲಿ ನಿರ್ಮಿಸಿದ ಪರಂಪರೆಯ ಸಮೃದ್ಧಿಯಂತಹ ಹಲವಾರು ಪ್ರಾಯೋಗಿಕ ಅಂಶಗಳಿಂದ ಮುತ್ತಿಗೆ ಹಾಕಲಾಗುತ್ತದೆ, ಆದರೆ ಅವುಗಳ ಸಂರಕ್ಷಣೆಗೆ ಔಪಚಾರಿಕ ವಿಧಾನದಲ್ಲಿ ಸಂಪನ್ಮೂಲ ಮತ್ತು ಕೌಶಲ್ಯ ಇದು ಮುಖ್ಯವಾಗಿ ಪಾರಂಪರಿಕ ಸಂರಕ್ಷಣೆ ಕ್ಷೇತ್ರದಲ್ಲಿ ವಿಮರ್ಶಾತ್ಮಕ ಸಾಮೂಹಿಕ ಕೆಲಸ ಕೊರತೆ ಮತ್ತು ಮುಖ್ಯವಾಹಿನಿಯ ಶಿಕ್ಷಣದ ಗಮನ ಕೊರತೆ, ಈ ವಿಷಯದ ಬಗ್ಗೆ ಮೂಲಭೂತ ಮತ್ತು ಅನ್ವಯಿಕ ಸಂಶೋಧನೆ ಆಗಬೇಕು.

ಮತ್ತೊಂದೆಡೆ, ಭಾರತದಲ್ಲಿ ಸಂರಕ್ಷಣೆಯ ವಿಧಾನವನ್ನು ವ್ಯಾಖ್ಯಾನಿಸುವ ಅವಶ್ಯಕತೆಯಿದೆ, ಇದು ನಿರ್ಮಿತ ರೂಪದ ಚೈತನ್ಯದ ಮೇಲೆ ಸಾಂಪ್ರದಾಯಿಕ ಗಮನವನ್ನು ಕೇಂದ್ರೀಕರಿಸುತ್ತದೆಯಾದರೂ ವಸ್ತುಗಳ ಶಾಶ್ವತತೆಯಿಲ್ಲ. ಇದು ಪಾಶ್ಚಿಮಾತ್ಯ ಸಂರಕ್ಷಣೆಯ ತತ್ವಗಳಿಗೆ ಬಲವಾದ ವ್ಯತಿರಿಕ್ತವಾಗಿದೆ. ನಿರ್ಮಿತ ರೂಪ, ಐತಿಹಾಸಿಕ ಸ್ಮರಣೆ ಎಂದು ವ್ಯಾಖ್ಯಾನಿಸಲಾಗಿದೆ. ಬಹುಶಃ, ಜೀವಂತ ಸ್ಮಾರಕಗಳಿಗಾಗಿ ಸಂರಕ್ಷಣಾ ಮಾರ್ಗಸೂಚಿಗಳ ಹೊಸ ಗುಂಪನ್ನು ಕರೆಯಲಾಗುತ್ತದೆ. ಭಾರತೀಯ ಪರಂಪರೆಯ ಸಮಗ್ರ ಸಂರಕ್ಷಣೆಗೆ ಕಲೆ, ವಿಜ್ಞಾನ ಮತ್ತು ತತ್ವಚಿಂತನೆಗಳಲ್ಲಿನ ಪ್ರಾಚೀನ ಭಾರತೀಯ ಬುದ್ಧಿವಂತಿಕೆಯನ್ನು ಮರುಶೋಧಿಸಲು ಉದ್ದೇಶಿಸಿರುವ ಶಾಲೆ ಮತ್ತು ಉನ್ನತ ಶಿಕ್ಷಣದಲ್ಲಿನ ಶಿಕ್ಷಣ ಬದಲಾವಣೆಗಳಿಗೆ ಸಹಾಯ ಬೇಕಾಗುತ್ತದೆ. ಸಾಂಪ್ರದಾಯಿಕ ಕಲೆ ಮತ್ತು ಕರಕುಶಲ ವಸ್ತುಗಳ ಪುನರುಜ್ಜೀವನದಿಂದಾಗಿ, ಪರಂಪರೆಯ ಆರ್ಥಿಕ ಕಾರ್ಯಸಾಧ್ಯತೆಯು ಪ್ರಕ್ರಿಯೆಯ ಉಪ-

ಉತ್ಪನ್ನವಾಗಿರುತ್ತದೆ ಇದನ್ನು ಅಮೂರ್ತ ಪರಂಪರೆ ಎಂದು ಜನಪ್ರಿಯವಾಗಿ ಕರೆಯಲಾಗುತ್ತದೆ ಮತ್ತು ಹೊಸ ವಿಭಾಗಗಳ ಪ್ರಾರಂಭ.[೩೨]

**ವಿಶ್ವಪರಂಪರೆಯ ತಾಣಗಳ ನಿರ್ವಹಣೆ**

೧೯೭೨ ರಲ್ಲಿ ಯುನೆಸ್ಕೋದ ಸಾಮಾನ್ಯ ಸಮ್ಮೇಳನವು ವಿಶ್ವ ಸಾಂಸ್ಕೃತಿಕ ಮತ್ತು ನೈಸರ್ಗಿಕ ಪರಂಪರೆಯ ಸಂರಕ್ಷಣೆಗೆ ಸಂಬಂಧಿಸಿದ ಸಮಾವೇಶದ ನಿರ್ಣಯಗಳನ್ನು ಅಂಗೀಕರಿಸಿತು. ಮಾನವೀಯತೆಗೆ ಮಹೋನ್ನತ ಮೌಲ್ಯವೆಂದು ಪರಿಗಣಿಸಲ್ಪಟ್ಟ ವಿಶ್ವದಾದ್ಯಂತ ಸಾಂಸ್ಕೃತಿಕ ಮತ್ತು ನೈಸರ್ಗಿಕ ಪರಂಪರೆಯ ಗುರುತಿಸುವಿಕೆ, ರಕ್ಷಣೆ ಮತ್ತು ಸಂರಕ್ಷಣೆಯನ್ನು ಪ್ರೋತ್ಸಾಹಿಸಲು ಸಮಾವೇಶವು ಪ್ರಯತ್ನಿಸಿತು. ಭಾರತವು ೧೯೭೭ರ ನವೆಂಬರ್‌ನಲ್ಲಿ ಈ ಸಮಾವೇಶದ ತೀರ್ಮಾನಗಳನ್ನು ಅಂಗೀಕರಿಸಿತು. ವಿಶ್ವಪರಂಪರೆಯ ತಾಣಗಳನ್ನು ಯುನೆಸ್ಕೋಗೆ ನಾಮನಿರ್ದೇಶನ ಮಾಡಲು ಎಎಸ್‌ಐ ನೋಡಲ್ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತದೆ.[೩೩]

**೧ ವಿಶ್ವ ಪರಂಪರೆಯ ತಾಣಗಳು (WHS) :**

೧೯೭೨ ರ ಯುನೆಸ್ಕೋ ಸಮಾವೇಶವನ್ನು ವಿಶ್ವಪರಂಪರೆಯ ತಾಣಗಳಿಗೆ ಪೂರಕವಾಗಿರುಂತೆ ಈ ಕೆಳಗಿನ ಉದ್ದೇಶಗಳೊಂದಿಗೆ ಅಭಿವೃದ್ಧಿಪಡಿಸಲಾಗಿದೆ.

- ಸಾಂಸ್ಕೃತಿಕ ಮತ್ತು ನೈಸರ್ಗಿಕ ಅಂಶಗಳಲ್ಲಿ ವಿಶ್ವಪರಂಪರೆಯನ್ನು ವ್ಯಾಖ್ಯಾನಿಸುವುದು.
- ದೇಶದಲ್ಲಿ ಅಸಾಧಾರಣ ಆಸಕ್ತಿ ಮತ್ತು ಸಾರ್ವತ್ರಿಕ ಮೌಲ್ಯವನ್ನು ಹೊಂದಿರುವ ಸದಸ್ಯ ರಾಷ್ಟ್ರಗಳಿಂದ ತಾಣಗಳು ಮತ್ತು ಸ್ಮಾರಕಗಳನ್ನು ಸೇರಿಸಲು ಎಲ್ಲ ಮಾನವಕುಲದ ಕಾಳಜಿ.
- ಜಾಗತಿಕ ಭವಿಷ್ಯದ ಪೀಳಿಗೆಗೆ ಈ ಸಾರ್ವತ್ರಿಕ ಸಂಪತ್ತಿನ ಸಂರಕ್ಷಣೆಗಾಗಿ ಎಲ್ಲ ರಾಷ್ಟ್ರಗಳು ಮತ್ತು ಜನರಲ್ಲಿ ಸಹಕಾರವನ್ನು ಉತ್ತೇಜಿಸುವುದು[೩೪]

**೨ ವಿಶ್ವ ಪಾರಂಪರಿಕವಾಗಿ ನೆಲೆಯನ್ನು ಶಾಸನ ಮಾಡುವ ವಿಧಾನ :**

- ನೆಲೆಯನ್ನು ಮೊದಲು ಯುನೆಸ್ಕೋದ ತಾತ್ಕಾಲಿಕ ಪಟ್ಟಿಗೆ ತೆಗೆದುಕೊಳ್ಳಲಾಗುತ್ತದೆ. ಇದನ್ನು ಭಾರತದಲ್ಲಿ ಎಎಸ್‌ಐ ನಿರ್ವಹಿಸುತ್ತಿದೆ. ಒಂದು ವರ್ಷ ಅಥವಾ ಹೆಚ್ಚಿನ ಅವಧಿಗೆ ತಾತ್ಕಾಲಿಕ ಪಟ್ಟಿಯಲ್ಲಿ ಉಳಿದಿರುವ ನೆಲೆಗಳನ್ನು ಅಂತಿಮ ನಾಮನಿರ್ದೇಶನಕ್ಕಾಗಿ ರವಾನಿಸಬಹುದು.

- ಅಂತಿಮ ನಾಮನಿರ್ದೇಶನಕ್ಕಾಗಿ, ನೆಲೆ ಮತ್ತು ಅದರ ಸಂರಕ್ಷಣಾ ಯೋಜನೆಯ ವಿವರಗಳನ್ನು ಒಳಗೊಂಡಿರುವ ನಾಮನಿರ್ದೇಶನ ದಸ್ತಾವೇಜುಗಳೊಂದಿಗೆ ಪ್ರಸ್ತಾವನೆಯನ್ನು ಕಳುಹಿಸಲಾಗುತ್ತದೆ. ೨೦೦೮ ರಿಂದ ನಾಮನಿರ್ದೇಶನ ದಸ್ತಾವೇಜಿಗೆ ನೆಲೆ ನಿರ್ವಹಣಾ ಯೋಜನೆ ಕಡ್ಡಾಯವಾಗಿತ್ತು.
- ಸಚಿವಾಲಯದ ಅನುಮೋದನೆಯ ನಂತರ ಹೆಚ್ಚಿನ ಮೌಲ್ಯಮಾಪನ ಮತ್ತು ಅನುಮೋದನೆಗಾಗಿ ಈ ದಾಖಲೆಯನ್ನು ವಿಶ್ವಪರಂಪರೆಯ ಕೇಂದ್ರ ಯುನೆಸ್ಕೋ ಪ್ಯಾರಿಸ್‌ಗೆ ಕಳುಹಿಸಲಾಗುತ್ತದೆ.
- ಇದರ ನಂತರ ಯುನೆಸ್ಕೋದ ಸಲಹಾ ಸಂಸ್ಥೆಗಳು ನೆಲೆಗೆ ಭೇಟಿ ನೀಡುತ್ತವೆ. ಮೌಲ್ಯಮಾಪನಕ್ಕಾಗಿ ಇಂಟರ್ನ್ಯಾಷನಲ್ ಕೌನ್ಸಿಲ್ ಆಫ್ ಸ್ಮಾರಕಗಳು (ಐಸಿಒಎಂಒಎಸ್) ಅಥವಾ ಇಂಟರ್‌ನ್ಯಾಷನಲ್ ಯೂನಿಯನ್ ಫಾರ್ ಕನ್ಸರ್ವೇಶನ್ ಆಫ್ ನೇಚರ್ (ಐಯುಸಿಎನ್)[೩೫]
- ಈ ನೆಲೆಯ ಆಧಾರದ ಮೇಲೆ "ನಿರಾಕರಣೆ", "ಮುಂದೂಡಲ್ಪಟ್ಟ", ಹಾಗೂ"ಉಲ್ಲೇಖಿತ" (ಹೆಚ್ಚುವರಿ ಮಾಹಿತಿಯ ಅವಶ್ಯಕತೆ) ಅಥವಾ ಶಾಸನಕ್ಕೆ ಶಿಫಾರಸಿಗೆ ಭೇಟಿ ನೀಡಿ ನಂತರ ಯುನೆಸ್ಕೋ ಅಂತಿಮ ತೀರ್ಪು ನೀಡುತ್ತದೆ. ನಾಮನಿರ್ದೇಶನ ದಸ್ತಾವೇಜಿನಲ್ಲಿ ನೀಡಲಾದ ಅತ್ಯುತ್ತಮ ಸಾರ್ವತ್ರಿಕ ಮೌಲ್ಯದ ಮಾನದಂಡಗಳು ಮತ್ತು ಸಮರ್ಥನೆಗಳ ಬಗ್ಗೆ ವಿಶ್ವಪರಂಪರೆಯ ಕೇಂದ್ರವು ತೃಪ್ತಿ ಹೊಂದಿದ್ದರೆ ಆಸ್ತಿಯನ್ನು ಪಟ್ಟಿಯಲ್ಲಿ ನೀಡಲಾಗುತ್ತದೆ.

**೩. ವಿಶ್ವ ಪರಂಪರೆಯ ತಾಣಗಳಿಗಾಗಿ ನೋಡಲ್ ಸಂಸ್ಥೆ :**

ವಿಶ್ವಪರಂಪರೆಗೆ ಸಂಬಂಧಿಸಿದ ಎಲ್ಲ ವಿಷಯಗಳಿಗೆ ಸಚಿವಾಲಯವು ನೋಡಲ್ ಸಚಿವಾಲಯ ಮತ್ತು ಭಾರತ ಸರ್ಕಾರದ ಪರವಾಗಿ ಎಎಸ್‌ಐ ನೋಡಲ್ ಸಂಸ್ಥೆ ಎಂದು ಎಎಸ್‌ಐ ನಮಗೆ ಮಾಹಿತಿ ನೀಡುತ್ತದೆ. ಎಎಸ್‌ಐ ಈ ಪರಿಣಾಮಕ್ಕೆ ಯಾವುದೇ ಲಿಖಿತ ಆದೇಶಗಳಿಲ್ಲ ಎಂದು ನಾವು ಕಂಡುಕೊಂಡಿದ್ದೇವೆ. ಈ ಮೂಲ ಆದೇಶಗಳ ಅನುಪಸ್ಥಿತಿಯಲ್ಲಿ, ಎಎಸ್‌ಐ ನಿಯೋಜಿಸಲಾದ ಪಾತ್ರ ಮತ್ತು ಕಾರ್ಯಕ್ಷಮತೆಯ ಬಗ್ಗೆ ನಮಗೆ ಸಂಪೂರ್ಣ ಭರವಸೆ ಪಡೆಯಲು ಸಾಧ್ಯವಾಗಲಿಲ್ಲ. ಎಎಸ್‌ಐ ಪಾತ್ರದ ಬಗ್ಗೆ ನಮ್ಮ ತಿಳುವಳಿಕೆ ದಾಖಲೆಗಳಲ್ಲಿ ಕಂಡುಬರುವ ಅಭ್ಯಾಸಗಳಿಗೆ ಅನುಗುಣವಾಗಿತ್ತು.

**೪ ತಾತ್ಕಾಲಿಕ ಪಟ್ಟಿಗಾಗಿ ನೆಲೆಗಳನ್ನು ಆಯ್ಕೆ ಮಾಡುವ ಮಾನದಂಡಗಳು :**

ತಾತ್ಕಾಲಿಕ ಪಟ್ಟಿ ಎನ್ನುವುದು ಪ್ರತಿ ರಾಜ್ಯ ಪಕ್ಷವು ನಾಮನಿರ್ದೇಶನಕ್ಕಾಗಿ ಪರಿಗಣಿಸಲು ಉದ್ದೇಶಿಸಿರುವ ಆ ಗುಣಲಕ್ಷಣಗಳ ದಾಸ್ತಾನು. ಅಂತಿಮವಾಗಿ ನಾಮನಿರ್ದೇಶನಕ್ಕಾಗಿ ನೆಲೆಯನ್ನು ಪರಿಗಣಿಸುವ ಮೊದಲು ಇದು ಕಡ್ಡಾಯ ಅವಶ್ಯಕತೆಯಾಗಿರುತ್ತದೆ. ೨೦೧೧-೧೨ ರಲ್ಲಿ ಭಾರತವು ಯುನೆಸ್ಕೋ ತಾತ್ಕಾಲಿಕ ಪಟ್ಟಿಯಲ್ಲಿ ೩೪ ತಾಣಗಳನ್ನು ಹೊಂದಿತ್ತು ಅದರಲ್ಲಿ ೧೪ ಸ್ಮಾರಕಗಳನ್ನು ಎಎಸ್ಐ ರಕ್ಷಿಸಿದೆ. ವಿಶ್ವಪರಂಪರೆಯ ವಿಷಯಗಳ ಸಲಹಾ ಸಮಿತಿಯ ಸಲಹೆಯಂತೆ ರಾಜ್ಯ ಸರ್ಕಾರವು ಎನ್‌ಜಿಒ ಮತ್ತು ಟ್ರಸ್ಟ್‌ಗಳು ಇತ್ಯಾದಿಗಳು ಕಳುಹಿಸಿದ ತಾತ್ಕಾಲಿಕ ಪಟ್ಟಿಯ ಪ್ರಸ್ತಾಪಗಳನ್ನು ಎಎಸ್ಐ ಪ್ರಕ್ರಿಯೆಗೊಳಿಸಿತು. ತಾತ್ಕಾಲಿಕ ಪಟ್ಟಿಗೆ ಅಗತ್ಯವಾದ ಸ್ವರೂಪವನ್ನು ಭರ್ತಿ ಮಾಡಿದ ನಂತರ ಅದನ್ನು ಸಚಿವಾಲಯಕ್ಕೆ ಅನುಮೋದನೆಗಾಗಿ ಕಳುಹಿಸಲಾಯಿತು ಮತ್ತು ನಂತರ ಯುನೆಸ್ಕೋದ ಶಾಶ್ವತ ಪ್ರತಿನಿಧಿಗೆ ಕಳುಹಿಸಲಾಯಿತು. ನಂತರ ಅದನ್ನು ಹೆಚ್ಚಿನ ಮೌಲ್ಯಮಾಪನ ಮತ್ತು ಅನುಮೋದನೆಗಾಗಿ ಡಬ್ಲ್ಯುಎಚ್‌ಸಿಗೆ ಸಲ್ಲಿಸಿದರು.

**೫ ತಾತ್ಕಾಲಿಕ ಪಟ್ಟಿಯ ಪರಿಷ್ಕರಣೆ :**

ಯುನೆಸ್ಕೋ ಮಾರ್ಗಸೂಚಿಗಳ ಪ್ರಕಾರ ತಾತ್ಕಾಲಿಕ ಪಟ್ಟಿಯನ್ನು ಪ್ರತಿ ೧೦ ವರ್ಷಗಳಿಗೊಮ್ಮೆ ಪರಿಶೀಲಿಸಬೇಕು ಮತ್ತು ನವೀಕರಿಸಬೇಕು ಎಂದು ತಿಳಿಸಲಾಗಿತ್ತು. ಎಎಸ್ಐ ದಾಖಲೆಗಳ ಪ್ರಕಾರ, ೨೦೦೨. ೨೦೦೪ ಮತ್ತು ೨೦೦೯-೧೦ ರಲ್ಲಿ ತಾತ್ಕಾಲಿಕ ಪಟ್ಟಿಯನ್ನು ಪರಿಷ್ಕರಿಸಲು ಪ್ರಯತ್ನಿಸಲಾಗಿದೆ. ಆದರೆ ವಿವಿಧ ಮಧ್ಯಸ್ಥಗಾರರಿಂದ ಒಳಹರಿವುಗಳನ್ನು ಸ್ವೀಕರಿಸಿದರೂ ಎಎಸ್ಐ ಪಟ್ಟಿಯನ್ನು ನವೀಕರಿಸಲು ವಿಫಲವಾಗಿದೆ. ಈಗಲೂ ಸಹ ತಾತ್ಕಾಲಿಕ ಪಟ್ಟಿಗಳ ಪರಿಷ್ಕರಣೆಗಾಗಿ ಕಾರ್ಯಾಗಾರಗಳನ್ನು ನಡೆಸಲಾಗುತ್ತಿತ್ತು. ಆದರೆ ಈ ಅಂಶವನ್ನು ಪೂರ್ಣಗೊಳಿಸಲು ಯಾವುದೇ ಸಮಯವನ್ನು ನಿಗದಿಪಡಿಸಲಾಗಿಲ್ಲ. ನಿಯಮಿತ ಪರಿಷ್ಕರಣೆಯ ಅನುಪಸ್ಥಿತಿಯಲ್ಲಿ ತಾತ್ಕಾಲಿಕ ಪಟ್ಟಿಯಲ್ಲಿ ಅಸಂಗತತೆ ಮತ್ತು ಅತಿಕ್ರಮಣಗಳನ್ನು ನಾವು ಗಮನಿಸಿದ್ದೇವೆ. ಉದಾಹರಣೆಗೆ 'ಹೈದರಾಬಾದ್‌ನ ಗೋಲ್ಕೊಂಡಾ ಕೋಟೆ' ತಾತ್ಕಾಲಿಕ ಪಟ್ಟಿಯಲ್ಲಿ ಎರಡು ಬಾರಿ ಕಾಣಿಸಿಕೊಂಡಿದೆ. ಅದೇ ರೀತಿ 'ಶ್ರೀ ಹರ್ಮಿಂದರ್ ಸಾಹಿಬ್ (ಸ್ವರ್ಣಮಂದಿರ). ಅಮೃತಸರ' ತಾಣಗಳಿಗಾಗಿ ನಾಮನಿರ್ದೇಶನ ದಸ್ತಾವೇಜನ್ನು ಹಿಂತೆಗೆದುಕೊಳ್ಳಲಾಯಿತು, ಆದಾಗ್ಯೂ, ಇದು ಇನ್ನೂ ತಾತ್ಕಾಲಿಕ ಪಟ್ಟಿಯಲ್ಲಿದೆ. ಭಾರತದ ತಾತ್ಕಾಲಿಕ ಪಟ್ಟಿಯ ಪರಿಷ್ಕರಣೆ ೨೦೧೨ ರಿಂದ ನಡೆಯುತ್ತಿದೆ ಎಂದು ಸಚಿವಾಲಯ ಹೇಳಿದೆ.

**೬ ಅಂತಿಮ ಶಾಸನಕ್ಕೆ ತಯಾರಿ :**

ತಾತ್ಕಾಲಿಕ ಪಟ್ಟಿಯಿಂದ ನಾಮನಿರ್ದೇಶನ ದಸ್ತಾವೇಜುಗಳನ್ನು ತಯಾರಿಸಲಾಯಿತು ವಿಶ್ವಪರಂಪರೆಯ ಪಟ್ಟಿಯಲ್ಲಿನ ಆಸ್ತಿಗಳ ಶಾಸನವನ್ನು ಸಮಿತಿ ಪರಿಗಣಿಸಿದ ಪ್ರಾಥಮಿಕ ಆಧಾರವೆಂದರೆ ನಾಮನಿರ್ದೇಶನ ತಾತ್ಕಾಲಿಕ ಪಟ್ಟಿಯಿಂದ ನಾಮನಿರ್ದೇಶನಗೊಳ್ಳಬೇಕಾದ ನೆಲೆಗಳ ಆಯ್ಕೆಗೆ ಎಎಸ್‌ಐ ಯಾವುದೇ ನಿರ್ದಿಷ್ಟ ಮಾನದಂಡಗಳನ್ನು ವ್ಯಾಖ್ಯಾನಿಸಿರಲಿಲ್ಲ. ೧೯೯೮ರಿಂದ ತಾತ್ಕಾಲಿಕ ಪಟ್ಟಿಯಲ್ಲಿ ಪ್ರಸ್ತಾಪಗಳಿದ್ದವು ಆದರೆ ಅಂತಿಮ ನಾಮನಿರ್ದೇಶನಕ್ಕಾಗಿ ದಸ್ತಾವೇಜುಗಳನ್ನು ತಯಾರಿಸಲು ನೆಲೆಗಳನ್ನು ಯಾದೃಚ್ಛಿಕವಾಗಿ ತೆಗೆದುಕೊಳ್ಳಲಾಗುತ್ತಿದೆ. ಕೆಲವು ನಾಮಪತ್ರಗಳನ್ನು ತಾತ್ಕಾಲಿಕ ಪಟ್ಟಿಗಳಿಂದ ಆರಿಸಲಾಗಿದ್ದರೆ, ಇಂತಹವುಗಳನ್ನು ತಾತ್ಕಾಲಿಕ ಪಟ್ಟಿಯಲ್ಲಿ ಸೇರಿಸದೆ ಅಂತಿಮ ನಾಮನಿರ್ದೇಶನಕ್ಕೆ ಆಯ್ಕೆ ಮಾಡಲಾಯಿತು. ನೆಲೆಯನ್ನು ಆಯ್ಕೆ ಮಾಡಿದ ನಂತರ ನಾಮನಿರ್ದೇಶನ ದಸ್ತಾವೇಜನ್ನು ತಯಾರಿಸಲಾಯಿತು. ತಾತ್ಕಾಲಿಕ ಪಟ್ಟಿಯಲ್ಲಿ ಆಯ್ಕೆ ಮಾಡಲಾದ ನೆಲೆಗಳ ಅಭಿವೃದ್ಧಿಗೆ ಯಾವುದೇ ಮಾರ್ಗಸೂಚಿಗಳಿಲ್ಲ. ಎಎಸ್‌ಐ ಅಂತಿಮ ಶಾಸನಕ್ಕೆ ಸಿದ್ಧಪಡಿಸುವ ಚಟುವಟಿಕೆಗಳಲ್ಲಿ ನಾಮನಿರ್ದೇಶನ ದಸ್ತಾವೇಜುಗಳು ಮತ್ತು ನೆಲೆ ನಿರ್ವಹಣಾ ಯೋಜನೆಗಳಿಗಾಗಿ ಸಲಹೆಗಾರರ ಆಯ್ಕೆ ಮಾತ್ರ ಸೇರಿದೆ. ನೆಲೆಯನ್ನು ಅಭಿವೃದ್ಧಿಪಡಿಸಲು ಯಾವುದೇ ಯೋಜನೆ ಅಥವಾ ಸಂಘಟಿತ ಪ್ರಯತ್ನಗಳಿಲ್ಲ. ಎಸಿಡಬ್ಲ್ಯುಎಚ್‌ಎಂ ತಾತ್ಕಾಲಿಕ ಪಟ್ಟಿಯನ್ನು ನವೀಕರಿಸುವ ಪ್ರಕ್ರಿಯೆಯಲ್ಲಿದೆ ಮತ್ತು ವಿಶ್ವಪಾರಂಪರಿಕ ತಾಣಗಳಿಗೆ ದಸ್ತಾವೇಜುಗಳನ್ನು ಕಳುಹಿಸುವ ಮೊದಲು ನಿರ್ವಹಣಾ ವ್ಯವಸ್ಥೆಗಳು ಜಾರಿಯಲ್ಲಿದೆ ಎಂದು ಖಾತರಿಪಡಿಸುತ್ತಿದೆ ಎಂದು ಸಚಿವಾಲಯ ಹೇಳಿದೆ. ಇದಲ್ಲದೆ, ಎಎಸ್‌ಐ ನಿರೀಕ್ಷಿತ ವಿಶ್ವಪರಂಪರೆಯ ತಾಣವನ್ನು ಉತ್ತಮ ಸಂರಕ್ಷಣೆಯಲ್ಲಿ ನಿರ್ವಹಿಸಲು ಪ್ರಯತ್ನಿಸುತ್ತಿತ್ತು.

**೭ ನಾಮನಿರ್ದೇಶನ ದಸ್ತಾವೇಜುಗಳ ಸಲಹೆಗಾರರ ಆಯ್ಕೆ :**

ವಿಶ್ವಪಾರಂಪರಿಕ ತಾಣದ ನಾಮನಿರ್ದೇಶನ ದಸ್ತಾವೇಜುಗಳನ್ನು ತಯಾರಿಸಲು ಮತ್ತು ನೆಲೆ ನಿರ್ವಹಣಾ ಯೋಜನೆಗಳಿಗಾಗಿ ಬಾಹ್ಯ ಸಲಹೆಗಾರರನ್ನು ಎಎಸ್‌ಐ ನೇಮಕ ಮಾಡಿರುವುದನ್ನು ನಾವು ಗಮನಿಸಿದ್ದೇವೆ. ಆಯ್ಕೆ ಪ್ರಕ್ರಿಯೆಯು ಪ್ರಕರಣದಿಂದ ಪ್ರಕರಣಕ್ಕೆ ಭಿನ್ನವಾಗಿರುತ್ತದೆ. ಕೆಲವು ಸಂದರ್ಭಗಳಲ್ಲಿ, ಎಎಸ್‌ಐ ಸಲಹೆಗಾರರನ್ನು ನೇಮಿಸಿತು ಮತ್ತು ಇತರರಲ್ಲಿ, ರಾಜ್ಯಗಳು ಹಾಗೆ ಮಾಡಿದವು. ನಮ್ಮ ಪರಿಶೀಲನೆಯು ಪಾರದರ್ಶಕತೆಯ ಕೊರತೆ

ಟೆಂಡರ್ ಅಕ್ರಮಗಳು ಮತ್ತು ಸಲಹೆಗಾರರಿಗೆ ಅನಗತ್ಯ ಅನುಕೂಲಗಳನ್ನು ಬಹಿರಂಗಪಡಿಸಿತು.

**೮ ನೆಲೆ ನಿರ್ವಹಣಾ ಯೋಜನೆಗಳ ತಯಾರಿಕೆ ಮತ್ತು ಅನುಷ್ಠಾನ :**

ನೆಲೆ ನಿರ್ವಹಣಾ ಯೋಜನೆ ಎಂಬುದು ನೆಲೆಯ ಸಂರಕ್ಷಣೆ ಮತ್ತು ನಿರ್ವಹಣೆಯ ಬಗ್ಗೆ ಸಮಗ್ರ ದೃಷ್ಟಿಕೋನವನ್ನು ನೀಡುವ ಒಂದು ದಾಖಲೆಯಾಗಿದೆ. ೨೦೦೮ರ ಯುನೆಸ್ಕೋದ ಕಾರ್ಯಾಚರಣೆಯ ಮಾರ್ಗಸೂಚಿಗಳ ಪ್ರಕಾರ ನೆಲೆ ನಿರ್ವಹಣಾ ಯೋಜನೆ ೨೦ರ ಸಲ್ಲಿಕೆ ಕಡ್ಡಾಯವಾಗಿತ್ತು. ಎಎಸ್ಐನ ೧೯ ನೆಲೆಗಳಲ್ಲಿ ೧೫ ನೆಲೆಗಳ ಸಂದರ್ಭದಲ್ಲಿ ಈ ಯೋಜನೆಗೆ ಸಿದ್ಧವಾಗಿಲ್ಲ ಎಂಬ ಅಂಶಗಳನ್ನ ಕಂಡುಕೊಳ್ಳಲಾಗಿದೆ. ಯೋಜನೆಗಳನ್ನು ಸಿದ್ಧಪಡಿಸಿದ ಸ್ಥಳದಲ್ಲಿಯೂ ಸಹ, ಇವುಗಳನ್ನು ನೆಲೆಗಳಲ್ಲಿ ಜಾರಿಗೆ ತರಲಾಗಿಲ್ಲ. ನಾಲ್ಕು ನೆಲೆಗಳಿಗೆ ಸಮಗ್ರ ನಿರ್ವಹಣಾ ಯೋಜನೆ (ಐಎಂಪಿ) (Integrated Management Plan) / ಸಮಗ್ರ ಸಂರಕ್ಷಣಾ ನಿರ್ವಹಣಾ ಯೋಜನೆ (ಸಿಸಿಎಂಪಿ) (Comprehensive Conservation Management Plan) / ನೆಲೆ ನಿರ್ವಹಣಾ ಯೋಜನೆ (ಎಸ್ಎಂಪಿ) (Site Management Plan) ತಯಾರಿಸಲು ಎಎಸ್ಐ ನಾಲ್ಕು ಸಲಹೆಗಾರರನ್ನು ನೇಮಕಮಾಡಿ, ೨.೫೯ ಕೋಟಿಯನ್ನು ಸಲಹೆಗಾರರಿಗೆ ನೀಡಲಾಗಿತ್ತು. ಆದರೂ ಸಿಸಿಎಂಪಿ / ಐಎಂಪಿ / ಎಸ್ಎಂಪಿಯನ್ನು ಎಎಸ್ಐ ಅಂತಿಮಗೊಳಿಸದ ಕಾರಣ ಕೆಲಸ ಇನ್ನೂ ಅಪೂರ್ಣವಾಗಿದೆ.

ಭಾರತೀಯ ಪುರಾತತ್ವ ಸರ್ವೇಕ್ಷಣಾ ತಂಡದಲ್ಲಿ ಚಂಪಾನರ್-ಪಾವನೇರ್ ಸಮಗ್ರ ನಿರ್ವಹಣಾ ಯೋಜನೆ ತಯಾರಿಸಲಾಗಿದೆ. ತಾಜ್‌ಮಹಲ್, ಆಗ್ರಾಕೋಟೆ ಮತ್ತು ಫತೇಪುರ್ ಸಿಕ್ರಿಗಾಗಿ ಸಮಗ್ರ ನಿರ್ವಹಣಾ ಯೋಜನೆ ಸಿದ್ಧಪಡಿಸುವ ಪ್ರಕ್ರಿಯೆಯನ್ನು ಪ್ರಾರಂಭಿಸಲಾಯಿತು. ನೆಲೆ ನಿರ್ವಹಣಾ ಯೋಜನೆಗಳು ಸರಿಯಾಗಿ ತಯಾರಾಗಿಲ್ಲ ಈ ಕಾರಣದಿಂದಾಗಿ ಮತ್ತು ಆದ್ದರಿಂದ ಕಾರ್ಯಗತಗೊಳಿಸಲು ಸಾಧ್ಯವಿಲ್ಲ ಎಂದು ನೆಲೆ ನೈಜ ನಿರ್ವಹಣೆಯ ಬಗ್ಗೆ ಸಂರಕ್ಷಣಾ ಸಹಾಯಕರು ಮತ್ತು ಇತರ ಕ್ಷೇತ್ರ ಸಿಬ್ಬಂದಿಗೆ ಈ ಯೋಜನೆ ಯಾವುದೇ ಮಾರ್ಗದರ್ಶನ ನೀಡಿಲ್ಲ. ಇದು ಹೆಚ್ಚಾಗಿ ನೆಲೆಯ ನಿರ್ವಹಣೆಗೆ ಸಂಬಂಧಿಸಿದ ಪರಿಕಲ್ಪನೆಗಳು ಮತ್ತು ಸೈದ್ಧಾಂತಿಕ ವಿಧಾನಗಳನ್ನು ಚರ್ಚಿಸುವ ಶೈಕ್ಷಣಿಕ ದಾಖಲೆಯಾಗಿದೆ. ಆದ್ದರಿಂದ 'ಎಸ್ಎಮ್‌ಪಿ'ಗಳನ್ನು ಸಲ್ಲಿಸಲು ಯುನೆಸ್ಕೋದ ಕಡ್ಡಾಯ ಅವಶ್ಯಕತೆಗಳನ್ನು ಅನುಸರಿಸಲು ಎಎಸ್ಐಗೆ ಸಾಧ್ಯವಾಗಲಿಲ್ಲ. ಐಎಂಪಿಗಳು ಅಥವಾ

ಎಸ್‌ಎಂಪಿಗಳು ಕ್ರಿಯಾತ್ಮಕ ದಾಖಲೆಗಳಾಗಿವೆ ಎಂದು ಸಚಿವಾಲಯ ಹೇಳಿದೆ ಕೆಲಸವಾಗಿರುತ್ತದೆ. ಇದು ಹಲವಾರು ವರ್ಷಗಳಿಂದ ಹಂತ ಹಂತವಾಗಿ ಅನುಷ್ಠಾನದ ಕೆಲಸವಾಗಿರುತ್ತದೆ.

**೯ ವಿಶ್ವ ಪರಂಪರೆಯ ತಾಣಗಳಲ್ಲಿ ನೆಲೆ ಪರಿಶೀಲನೆ :**

ಈ ವಿಶ್ವಪರಂಪರೆ ಪಾದಚಾರಿಗಳಿಂದ ಬರುವ ಆದಾಯವನ್ನು ಪರಿಗಣಿಸಿ, ಎಎಸ್‌ಐ ಸಂದರ್ಶಕರಿಗೆ ಉತ್ತಮ ಸೌಲಭ್ಯಗಳ ಲಭ್ಯತೆಯನ್ನು ಖಾತ್ರಿಪಡಿಸುವ ಪ್ರಯತ್ನಗಳನ್ನು ಮಾಡಬೇಕಾಗಿತ್ತು ಮತ್ತು ಈ ಸ್ಮಾರಕಗಳ ಉತ್ತಮ ಸಂರಕ್ಷಣೆ ಸುರಕ್ಷತೆಯನ್ನು ಖಾತ್ರಿಪಡಿಸಿಕೊಳ್ಳಬೇಕು. ಸಂದರ್ಶಕರಿಗೆ ಸಂಬಂಧಿಸಿದ ಮಾಹಿತಿ, ಆದಾಯದ ವಿವರಗಳು ಮತ್ತು ಸಂರಕ್ಷಣೆಗಾಗಿ ಮಾಡಿದ ವೆಚ್ಚಗಳು, ಜಂಟಿ ಭೌತಿಕ ತಪಾಸಣೆಯ ಸಮಯದಲ್ಲಿ, ವಿವಿಧ ನೆಲೆಗಳ ಭದ್ರತೆ, ಸಾರ್ವಜನಿಕ ಸೌಲಭ್ಯಗಳು, ಅತಿಕ್ರಮಣ ಮತ್ತು ಅನಧಿಕೃತ ನಿರ್ಮಾಣ, ಆಡಿಯೊ ಮಾರ್ಗದರ್ಶಿ ಸೇವೆಗಳು ಇತ್ಯಾದಿಗಳಿಗೆ ಸಂಬಂಧಿಸಿದ ವಿವಿಧ ಸಮಸ್ಯೆಗಳನ್ನು ಹೊಂದಿದೆ.

**೧೦ ವಿಶ್ವ ಪರಂಪರೆಯ ತಾಣಗಳಲ್ಲಿನ ಸೌಕರ್ಯಗಳ ಸ್ಥಿತಿ :**

ಭೌತಿಕ ತಪಾಸಣೆಯ ಸಮಯದಲ್ಲಿ ಗಮನಿಸಿದಂತೆ ಸಾರ್ವಜನಿಕ ಸೌಲಭ್ಯಗಳ ಸ್ಥಿತಿಯ ಕೆಲವು ಮುಖ್ಯಾಂಶಗಳು ಈ ಮುಂದಿನಂತಿವೆ. ಜಾಗೃತಿ, ವ್ಯಾಖ್ಯಾನ ಮತ್ತು ಸೌಲಭ್ಯಗಳು ಪರಂಪರೆಯನ್ನು ನಿರ್ವಹಿಸುವ ಪ್ರಾಥಮಿಕ ಉದ್ದೇಶವೆಂದರೆ ಅದರ ಮಹತ್ವ ಮತ್ತು ಅದರ ಸಂರಕ್ಷಣೆಯ ಅಗತ್ಯವನ್ನು ಆತಿಥೇಯ ಸಮುದಾಯವನ್ನೊಳಗೊಂಡತೆ ಸಂದರ್ಶಕರಿಗೆ ತಿಳಿಸುವುದು. ಪರಂಪರೆ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗೆ ಸಮಂಜಸವಾಗಿರುವಂತೆ ಉತ್ತಮವಾಗಿ ನಿರ್ವಹಿಸಲಾದ ದೈಹಿಕ, ಬೌದ್ಧಿಕ ಮತ್ತು ಭಾವನಾತ್ಮಕ ಪ್ರವೇಶವು ಒಂದು ಹಕ್ಕು ಮತ್ತು ಸವಲತ್ತು. ಇದು ಇಂದಿನ ಆತಿಥೇಯ ಸಮುದಾಯದ ಪರಂಪರೆ ಮೌಲ್ಯಗಳು, ಆಸಕ್ತಿಗಳು ಮತ್ತು ಸಮಾನತೆಯನ್ನು ಗೌರವಿಸುವ ಕರ್ತವ್ಯವನ್ನು ತರುತ್ತದೆ. ಸ್ಥಳೀಯ ಪಾಲಕರು ಅಥವಾ ಐತಿಹಾಸಿಕ ಆಸ್ತಿಯ ಮಾಲೀಕರು ಮತ್ತು ಆ ಪರಂಪರೆ ವಿಕಸನಗೊಂಡ ಭೂದೃಶ್ಯಗಳು ಮತ್ತು ಸಾಂಸ್ಕೃತಿಕ ಮತ್ತು ಐತಿಹಾಸಿಕ ಮಹತ್ವವನ್ನು ವ್ಯಾಖ್ಯಾನಿಸಲು ಮತ್ತು ವಿವರಿಸಲು ಸಾಕಷ್ಟು ಸಂಪನ್ಮೂಲಗಳು ಇಲ್ಲದಿದ್ದರೆ ಸಂರಕ್ಷಿತ ಸ್ಮಾರಕ ಅಥವಾ ತಾಣವು ಸಾಮಾನ್ಯ ಜನರಿಗೆ ಕಡಿಮೆ ಅರ್ಥವನ್ನು ನೀಡುತ್ತದೆ. ಆದ್ದರಿಂದ, ಕೇಂದ್ರೀಕೃತ ಸಂರಕ್ಷಿತ ಸ್ಮಾರಕಗಳು ಮತ್ತು ತಾಣಗಳ ಪಾಲಕರಾಗಿ, ಎಎಸ್‌ಐಗೆ

ಸಂದರ್ಶಕರಿಗೆ ಸಮರ್ಪಕ ವ್ಯಾಖ್ಯಾನ, ಸಾರ್ವಜನಿಕ ಸೌಲಭ್ಯಗಳು ಮತ್ತು ಜಾಗೃತಿ ನೀಡುವುದು ಸಹ ಮುಖ್ಯವಾಗಿರುತ್ತದೆ.

**೧೧ ಜಾಗೃತಿ, ವ್ಯಾಖ್ಯಾನ ಮತ್ತು ಸೌಲಭ್ಯಗಳಿಗಾಗಿ ನಿಧಿಗಳ ವ್ಯವಸ್ಥೆ :**

ಎಎಸ್‌ಐನಲ್ಲಿ ಜಾಗೃತಿ, ವ್ಯಾಖ್ಯಾನ ಮತ್ತು ಸಾರ್ವಜನಿಕ ಸೌಕರ್ಯಗಳನ್ನು ಸೃಷ್ಟಿಸುವ ಚಟುವಟಿಕೆಗಳಿಗೆ ನಿರ್ದಿಷ್ಟ ಬಜೆಟ್ ಅವಕಾಶವಿರಲಿಲ್ಲ. ಇದರ ಪರಿಣಾಮವಾಗಿ. ಸಂರಕ್ಷಣಾ ಚಟುವಟಿಕೆಗಳಿಗಾಗಿ ನಿಗದಿಪಡಿಸಿದ ನಿಧಿಯಿಂದ ಈ ಖಾತೆಗೆ ಖರ್ಚು ಮಾಡಲಾಗಿದೆ. ಸ್ಮಾರಕಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಎಎಸ್‌ಐ ಸಮಗ್ರ ಯೋಜನೆಗಳನ್ನು ಸಿದ್ಧಪಡಿಸಿಲ್ಲ. ಇದರ ಪರಿಣಾಮವಾಗಿ, ಎಲ್ಲಾ ಸಂರಕ್ಷಿತ ಸ್ಮಾರಕಗಳಿಗೆ ಏಕರೂಪವಾಗಿ ಅನ್ವಯವಾಗುವ ಸೌಲಭ್ಯಗಳು ಮತ್ತು ವ್ಯಾಖ್ಯಾನ ಸೇವೆಗಳಿಗೆ ಮಾನದಂಡಗಳನ್ನು ಹಾಕಬೇಕು.

**೧೨ ನೆಲೆಗಳ ವ್ಯಾಖ್ಯಾನ :**

ಪರಂಪರೆ ಸಂರಕ್ಷಣೆಗೆ ವ್ಯಾಖ್ಯಾನ ಮತ್ತು ಪ್ರವಾಸೋದ್ಯಮ ಅಭಿವೃದ್ಧಿ ಕಾರ್ಯಕ್ರಮಗಳು ನಿರ್ದಿಷ್ಟ ಸ್ಥಳದ ಪರಂಪರೆಯ ಮಹತ್ವದ ನಿರ್ದಿಷ್ಟವಾದ ಆದರೆ ಸಾಮಾನ್ಯವಾಗಿ ಸಂಕೀರ್ಣವಾದ ಅಥವಾ ಸಂಘರ್ಷದ ಅಂಶಗಳ ಸಮಗ್ರ ತಿಳುವಳಿಕೆಯನ್ನು ಆಧರಿಸಿವೆ. ನೆಲೆಯನ್ನು ವ್ಯಾಖ್ಯಾನಿಸಲು, ಎಎಸ್‌ಐನ ಪ್ರಯತ್ನಗಳು ಹೆಚ್ಚಾಗಿ ಸಂಕೇತಗಳು ಹಾಗೂ ಸೂಚನೆ ಫಲಕಗಳನ್ನು ಒದಗಿಸುವುದಕ್ಕೆ ಸೀಮಿತವಾಗಿತ್ತು.

೧. ರಕ್ಷಣೆ ಸೂಚನಾ ಫಲಕ : ನೆಲೆಯನ್ನು "ಸಂರಕ್ಷಿತ ಸ್ಮಾರಕ" ಎಂದು ಘೋಷಿಸುವುದನ್ನೊಳಗೊಂಡಂತೆ ಮತ್ತು ನಿಷೇಧಿತ ಮತ್ತು ನಿಯಂತ್ರಿತ ಪ್ರದೇಶಕ್ಕೆ ಸಂಬಂಧಿಸಿದ ನಿಯಮಗಳನ್ನು ಸ್ಮಾರಕಗಳ ಸುತ್ತಮುತ್ತ ನಡೆಸುವ ಅನಧಿಕೃತ ಚಟುವಟಿಕೆಗಳಿಗೆ ವಿಧಿಸುವ ದಂಡ.

೨. ಸಾಂಸ್ಕೃತಿಕ ಸೂಚನಾ ಮಂಡಳಿ : ಸ್ಮಾರಕದ ಇತಿಹಾಸವನ್ನು ಹಿಂದಿ ಮತ್ತು ಇಂಗ್ಲಿಷ್‌ನಲ್ಲಿ ವಿವರಿಸುವುದು. ಕೆಲವು ಸ್ಥಳಗಳಲ್ಲಿ ಈ ಸಾಂಸ್ಕೃತಿಕ ಸೂಚನೆ ಮಂಡಳಿಗಳು ಜಾನಪದ ಮತ್ತು ತಾಣಗಳಿಗೆ ಸಂಬಂಧಿಸಿದ ಸಂಪ್ರದಾಯಗಳನ್ನು ಸಹ ಉಲ್ಲೇಖಿಸಿವೆ.

ಕೇವಲ ಮೂರು ವಿಧದ ಸಂಕೇತಗಳು ನೆಲೆಯ ವ್ಯಾಖ್ಯಾನವನ್ನು ಒದಗಿಸಿದ್ದರೂ. ಸಂದರ್ಶಕರಿಗೆ ನೆಲೆಗೆ ಪರಿಚಿತರಾಗಲು ಮೊದಲ ಎರಡು ವಿಭಾಗಗಳು ಅಷ್ಟೇ

ಮುಖ್ಯವಾಗಿವೆ. ಈ ಎಲ್ಲ ಮೂರು ರೀತಿಯ ಸಂಕೇತಗಳಲ್ಲಿ ಹೊಳೆಯುವ ನ್ಯೂನತೆಗಳನ್ನು ಗಮನಿಸಲಾಗಿದೆ.

ಅನೇಕ ಸ್ಮಾರಕಗಳಲ್ಲಿ ಸ್ಮಾರಕದ ಹೆಸರನ್ನು ಉಲ್ಲೇಖಿಸಲಾಗಿಲ್ಲ. ಉದಾಹರಣೆಗೆ ನಿಕೋಲ್ಸನ್ ಸ್ಮಶಾನ, ಡಿಮೆರೋ ಸ್ಮಶಾನ, ನಾಯ್-ಕಾ-ಕೋಟ್, ಜವಾಹರ್‌ಲಾಲ್ ನೆಹರು ಕ್ರೀಡಾಂಗಣದಲ್ಲಿ ಅಜ್ಞಾತ ಸಮಾಧಿ, ಪಾಲಂನ ಪ್ರಾಚೀನ ಮಸೀದಿ ಸೇರಿವೆ ಸ್ಮಾರಕದ ಹೆಸರಿನ ಅನುಪಸ್ಥಿತಿಯಲ್ಲಿ, ಹೆಚ್ಚಿನ ಸಂದರ್ಶಕರು ಅದನ್ನು ಗುರುತಿಸಲು ಕಷ್ಟಪಡುತ್ತಾರೆ. ಅದೇ ರೀತಿ ರಕ್ಷಣಾ ಚಿಹ್ನೆ ಫಲಕಗಳನ್ನು ಅನೇಕ ಸ್ಥಳಗಳಲ್ಲಿ ಸರಿಯಾಗಿ ರಚಿಸಲಾಗಿಲ್ಲ ಎಂದು ಗಮನಿಸಲಾಯಿತು. ಕೆಲವು ಸ್ಥಳಗಳಲ್ಲಿ ಇವು ಸಹ ಲಭ್ಯವಿರಲಿಲ್ಲ. ಆದ್ದರಿಂದ ಸೈನ್‌ಬೋರ್ಡ್‌ನ ಅನುಪಸ್ಥಿತಿಯು ಅತಿಕ್ರಮಣ ಮತ್ತು ಹಾನಿಯ ಅಪಾಯವನ್ನು ಹೆಚ್ಚಿಸಿತು, ಏಕೆಂದರೆ ಈ ಹೆಚ್ಚಿನ ಸಂರಕ್ಷಿತ ತಾಣಗಳನ್ನು ರಕ್ಷಿಸಲಾಗಿಲ್ಲ.

**೧೩ ಸಾಂಸ್ಕೃತಿಕ ಸೂಚನೆ ಮಂಡಳಿಗಳ ಮೂಲಕ ಸ್ಮಾರಕದ ವ್ಯಾಖ್ಯಾನ :**

ಸಾಂಸ್ಕೃತಿಕ ಸೂಚನೆ ಫಲಕಗಳ ಮೂಲಕ ಸ್ಮಾರಕಗಳ ವ್ಯಾಖ್ಯಾನವು ಹೆಚ್ಚಿನ ತಾಣಗಳಲ್ಲಿರುವಂತೆ ಸಂದರ್ಶಕರಿಗೆ ಬಹಳ ಮುಖ್ಯವಾಗಿತ್ತು ನೆಲೆಯ ಬಗ್ಗೆ ಯಾವುದೇ ಮಾಹಿತಿಯ ಮೂಲಗಳು ಲಭ್ಯವಿಲ್ಲ. ಸ್ಮಾರಕಗಳ ಜಂಟಿ ಭೌತಿಕ ತಪಾಸಣೆಯಲ್ಲಿ ಪರಿಶೀಲಿಸಿದ ಸಂರಕ್ಷಿತ ಸ್ಮಾರಕಗಳಲ್ಲಿ ಸಾಂಸ್ಕೃತಿಕ ಸೂಚನಾ ಫಲಕಗಳನ್ನು ಎಎಸ್‌ಐ ಸ್ಥಾಪಿಸಿದೆ ಎಂದು ತಿಳಿದುಬಂದಿದೆ. ದೆಹಲಿ ವೃತ್ತದ ಸಫ್ದರ್ಜಂಗ್ ಸಮಾಧಿಯಲ್ಲಿನ ಸಾಂಸ್ಕೃತಿಕ ಸೂಚನೆ ಮಂಡಳಿಗಳಲ್ಲಿ ಕಾಗುಣಿತ ಮತ್ತು ಇತರ ವಾಸ್ತವಿಕ ತಪ್ಪುಗಳನ್ನು ಗಮನಿಸಲಾಗಿದೆ. ಜೂನ್ ೨೦೧೨ ರಲ್ಲಿ ಅದನ್ನು ಬದಲಾಯಿಸಿ ವಲಯವು ತೆಗೆದುಹಾಕಿದೆ. ದೆಹಲಿ ವೃತ್ತದ ಕೆಂಪು ಕೋಟೆಯ ಸಮೀಪ ಸುನೇಹ್ರಿ ಮಸೀದಿಯ ವಿಷಯದಲ್ಲೂ ಇದೇ ರೀತಿಯ ವ್ಯತ್ಯಾಸ ಕಂಡುಬಂದಿರುವುದನ್ನು ಗುರುತಿಸಬಹುದು, ಅಲ್ಲಿ ಮಸೀದಿ ನಿರ್ಮಿಸಿದವರ ಬಗ್ಗೆ ಹಿಂದಿ ಮತ್ತು ಇಂಗ್ಲಿಷ್ ಸೈನ್‌ಬೋರ್ಡ್‌ಗಳು ಸಂಘರ್ಷದ ಮಾಹಿತಿಯನ್ನು ನೀಡುತ್ತವೆ.

**೧೪ ಸ್ಮಾರಕಗಳಲ್ಲಿ ನೆಲೆಯ ನಿರೂಪಣಕಾರರ ಸೌಲಭ್ಯಗಳು :**

ಸ್ಮಾರಕಗಳಲ್ಲಿನ ಚಿಹ್ನೆ ಫಲಕಗಳು ಸ್ಮಾರಕದ ಸಂಕ್ಷಿಪ್ತ ವಿವರಣೆಯನ್ನು ಒದಗಿಸುತ್ತವೆ. ಆದಾಗ್ಯೂ, ನೆಲೆಯ ಗಮನಾರ್ಹ ಲಕ್ಷಣಗಳು ಮತ್ತು ಪ್ರಾಮುಖ್ಯತೆಯನ್ನು ಅರ್ಥಮಾಡಿಕೊಳ್ಳಲು ನೆಲೆಯ ನಿರೂಪಣಕಾರರ ಸೇವೆಗಳು ಅಗತ್ಯವಾಗಿವೆ. ಸಂಕೀರ್ಣ ತಾಣಗಳಲ್ಲಿ ಸಾಕಷ್ಟು ಮಾರ್ಗದರ್ಶಿ ಸೌಲಭ್ಯಗಳನ್ನು ಹೊಂದಿರುವುದು ಇನ್ನೂ

ಮುಖ್ಯವಾಗಿತ್ತು. ತಾಜ್‌ಮಹಲ್, ಕೆಂಪುಕೋಟೆ, ಹಂಪಿ, ಅಜಂತ ಎಲ್ಲೋರಾ ಗುಹೆಗಳು, ಪಟ್ಟದಕಲ್ಲು ಈ ನೆಲೆಗಳಲ್ಲಿ ಮಾರ್ಗದರ್ಶಿ ಸೌಲಭ್ಯಗಳನ್ನು ಒದಗಿಸುವಲ್ಲಿ ಅಥವಾ ಮೇಲ್ವಿಚಾರಣೆ ಮಾಡುವಲ್ಲಿ ಎಎಸ್‌ಐ ಪಾತ್ರ ಮುಖ್ಯವಾಗಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಪ್ರವಾಸೋದ್ಯಮ ಇಲಾಖೆಗಳು ವ್ಯಕ್ತಿಗಳಿಗೆ ಇತಿಹಾಸ ಮತ್ತು ಸ್ಮಾರಕಗಳ ಜ್ಞಾನವನ್ನು ವಿಶ್ಲೇಷಿಸಿದ ನಂತರ ಮಾರ್ಗದರ್ಶಿ ಪರವಾನಗಿಗಳನ್ನು ನೀಡುತ್ತಿದ್ದವು. ೧೯೫೯ರಲ್ಲಿ ಎಎಸ್‌ಐ ಮಾರ್ಗದರ್ಶಕರಿಗೆ ಪರವಾನಗಿ ನೀಡುವ ಅವಕಾಶವನ್ನು ಹೊಂದಿತು. ವಿಶ್ವಪರಂಪರೆಯ ತಾಣಗಳಲ್ಲಿ ವಿವಿಧ ಭಾಷೆಗಳಲ್ಲಿ ಆಡಿಯೊ ಗೈಡ್ ಸೌಲಭ್ಯವನ್ನು ಒದಗಿಸಲು ಎಎಸ್‌ಐ ನಿರ್ಧರಿಸಿದೆ (೨೦೦೬). ಹಿಂದಿ, ಇಂಗ್ಲಿಷ್, ಫ್ರೆಂಚ್, ಸ್ಪ್ಯಾನಿಷ್, ಜರ್ಮನ್, ಇತ್ಯಾದಿ. ಆದಾಗ್ಯೂ, ಕಳೆದ ಆರು ವರ್ಷಗಳಲ್ಲಿ ಎಎಸ್‌ಐ ಆಡಿಯೊ ಗೈಡ್ ಸೌಲಭ್ಯವನ್ನು ಐದು ವಿಶ್ವಪರಂಪರೆಯ ತಾಣಗಳಲ್ಲಿ ಮಾತ್ರ ಒದಗಿಸಿದೆ.[೩೬] ಆಗ್ರಾಕೋಟೆ, ಖಜುರಾಹೊ, ಸಾಂಚಿ, ಕುತುಬ್ ಮಿನಾರ್, ಹಂಪಿ, ಪಟ್ಟದಕಲ್ಲು ಮತ್ತು ಕೆಂಪುಕೋಟೆ ಅದನ್ನೂ ಸೀಮಿತ ಭಾಷೆಗಳಲ್ಲಿ ಉಳಿದ ತಾಣಗಳಲ್ಲಿ ತುರ್ತಾಗಿ ಅಳವಡಿಸುವ ಅವಶ್ಯವಿದೆ.[೩೭]

**೧೫ ನೆಲೆಗಳಲ್ಲಿ ಪ್ರಕಟಣೆಗಳ ಲಭ್ಯತೆ :**

ಅಧಿಕೃತ ನಕ್ಷೆಗಳು, ಮಾರ್ಗದರ್ಶಿ ಪುಸ್ತಕಗಳು ಮತ್ತು ಇತರ ಪ್ರಕಟಣೆಗಳು ಸ್ಮಾರಕಗಳ ತಿಳುವಳಿಕೆ ಮತ್ತು ವ್ಯಾಖ್ಯಾನವನ್ನು ಹೆಚ್ಚಿಸಲು ಉಪಯುಕ್ತ ಸಂಪನ್ಮೂಲವನ್ನು ಒದಗಿಸುತ್ತವೆ. ಸಂದರ್ಶಕರಿಗೆ ಉಪಯುಕ್ತವಾಗುವ ದೃಷ್ಟಿಯಿಂದ ಇವು ನೆಲೆ ಬಳಿ ಲಭ್ಯವಿರಬೇಕು. ಎಎಸ್‌ಐನ ಪ್ರಕಟಣೆ ವಿಭಾಗವು ವಿವಿಧ ರೀತಿಯ ಕರಪತ್ರಗಳು, ವಿವಿಧ ಸ್ಮಾರಕಗಳ ಮಾರ್ಗದರ್ಶಿ ಪುಸ್ತಕಗಳನ್ನು ಪ್ರಕಟಿಸುತ್ತಿದೆ ಮತ್ತು ಇವುಗಳನ್ನು ಸ್ಮಾರಕಗಳಲ್ಲಿ ಲಭ್ಯವಿರುವ ಪ್ರಕಟಣೆ ಕೌಂಟರ್‌ಗಳಲ್ಲಿ ಸರ್ಕಲ್ ಕಚೇರಿಗಳಿಗೆ ಮಾರಾಟ ಮಾಡಲು ಅನುವು ಮಾಡಬೇಕು.[೩೮]

**೧೬ ನೆಲೆಗಳ ನಕ್ಷೆಗಳ ಲಭ್ಯತೆ :**

ಎಎಸ್‌ಐ ಅನೇಕ ಎಕರೆಗಳಲ್ಲಿ ಹರಡಿರುವ ನೆಲೆಗಳನ್ನು ಹೊಂದಿದೆ. ಇವುಗಳಲ್ಲಿ ಸ್ಮಾರಕಗಳು, ಕೋಟೆಗಳು ಮತ್ತು ಗುಹೆಗಳ ಗುಂಪುಗಳು ಸೇರಿವೆ. ಕೆಲವು ವಿಶ್ವಪರಂಪರೆಯ ತಾಣಗಳು ಸೇರಿದಂತೆ ಅಂತಹ ಹೆಚ್ಚಿನ ನೆಲೆಗಳಲ್ಲಿ, ಎಎಸ್‌ಐ ಸಂದರ್ಶಕರಿಗೆ ಯಾವುದೇ ನೆಲೆಯ ನಕ್ಷೆಗಳನ್ನು ಒದಗಿಸಿಲ್ಲ.

೧೭ ಸ್ಥಳೀಯ ಸಮುದಾಯದ ಒಳಗೊಳ್ಳುವಿಕೆ :

ಸ್ಥಳೀಯ ಸಮುದಾಯದ ಜನರಲ್ಲಿ ಪರಂಪರೆ ವ್ಯಾಖ್ಯಾನ ಮತ್ತು ಶಿಕ್ಷಣ ಕಾರ್ಯಕ್ರಮಗಳು ಸ್ಥಳೀಯ ನೆಲೆಯ ವ್ಯಾಖ್ಯಾನಕಾರರ ಪಾಲ್ಗೊಳ್ಳುವಿಕೆಯನ್ನು ಪ್ರೋತ್ಸಾಹಿಸಬೇಕಾಗುತ್ತದೆ. ಕಾರ್ಯಕ್ರಮಗಳು ತಮ್ಮ ಪರಂಪರೆಯ ಬಗ್ಗೆ ಜ್ಞಾನ ಮತ್ತು ಗೌರವವನ್ನು ಉತ್ತೇಜಿಸಬೇಕು, ಸ್ಥಳೀಯ ಜನರು ಅದರ ಸಂರಕ್ಷಣೆಯಲ್ಲಿ ನೇರ ಆಸಕ್ತಿ ವಹಿಸುವಂತೆ ಪ್ರೋತ್ಸಾಹಿಸಬೇಕು. ಪ್ರವಾಸೋದ್ಯಮ ಮತ್ತು ಸಂರಕ್ಷಣಾ ಚಟುವಟಿಕೆಗಳು ಸ್ಥಳೀಯ ಸಮುದಾಯಕ್ಕೆ ಪ್ರಯೋಜನವನ್ನು ನೀಡಬೇಕು ಸಾರ್ವಜನಿಕ ಜಾಗೃತಿ ಹಾಗೂ ಬೆಂಬಲವನ್ನು ರಚಿಸಲು ಯಾವುದೇ ವಿಶೇಷ ಕಾರ್ಯಕ್ರಮಗಳನ್ನು ರೂಪಿಸಲು ಸಚಿವಾಲಯ ಮತ್ತು ಎಎಸ್‌ಐನಿಂದ ಪ್ರಯತ್ನಗಳು ನಡೆದಿವೆ. ಈ ತಾಣಗಳ ರಕ್ಷಣೆ ಮತ್ತು ಸಂರಕ್ಷಣೆಯಲ್ಲಿ ಸ್ಥಳೀಯ ಸಮುದಾಯವನ್ನು ತೊಡಗಿಸಿಕೊಳ್ಳಲು ಎಎಸ್‌ಐ ವಿಫಲವಾದ ಕಾರಣದಿಂದಾಗಿ ಅನೇಕ ಸ್ಥಳಗಳಲ್ಲಿ, ಸ್ಥಳೀಯ ಸಮುದಾಯಗಳು ಈ ನೆಲೆಗಳನ್ನು ನಿರ್ವಹಿಸಲು ಎಎಸ್‌ಐ ಮಾಡಿದ ಪ್ರಯತ್ನಗಳನ್ನು ವಿರೋಧಿಸಿವೆ. ಸ್ಥಳೀಯ ಸಮುದಾಯ ಮತ್ತು ಕಚೇರಿಗಳೊಂದಿಗೆ ಯಾವುದೇ ಔಪಚಾರಿಕ ಸಂವಹನ ವೇದಿಕೆ ಇರಲಿಲ್ಲ.[೩೯]

೧೮ ಸ್ಮಾರಕಗಳಲ್ಲಿ ಸಂದರ್ಶಕರ ಸೌಲಭ್ಯಗಳು :

ಪಾರಂಪರಿಕ ಸ್ಥಳಗಳ ಸಂರಕ್ಷಣೆ ಮತ್ತು ಪ್ರವಾಸೋದ್ಯಮ ಯೋಜನೆಯು ಸಂದರ್ಶಕರ ಅನುಭವವು ಸಾರ್ಥಕ, ತೃಪ್ತಿಕರ ಮತ್ತು ಆನಂದದಾಯಕವಾಗಿದೆಯೇ ಎಂದು ಖಚಿತಪಡಿಸಿಕೊಳ್ಳಬೇಕು (ICOMOS) ಚಾರ್ಟರ್ ಒದಗಿಸಿದೆ. ಸ್ಮಾರಕಗಳನ್ನು ಸಂದರ್ಶಕರ ಸ್ನೇಹಿಯನ್ನಾಗಿ ಮಾಡಲು, ಎಎಸ್‌ಐ ಮೂಲಭೂತ ಸೌಕರ್ಯಗಳನ್ನು ಒದಗಿಸುತ್ತದೆ ಎಂದು ನಿರೀಕ್ಷಿಸಲಾಗಿತ್ತು. ಸ್ಮಾರಕಗಳಲ್ಲಿ ಕುಡಿಯುವ ನೀರು, ಶೌಚಾಲಯಗಳು, ದೈಹಿಕವಾಗಿ ವಿಕಲಚೇತನರಿಗೆ ಇಳಿಜಾರುಗಳು ಬ್ರೈಲ್ ಭಾಷೆಯಲ್ಲಿ ನೋಟಿಸ್ ಬೋರ್ಡ್ ಇತ್ಯಾದಿ. ಇದಲ್ಲದೆ, ವಿಕಲಚೇತನರು (ಸಮಾನ ಅವಕಾಶಗಳು, ಹಕ್ಕುಗಳ ರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಕಾಯ್ದೆ, ೧೯೯೫ ಸಾರ್ವಜನಿಕ ಕಟ್ಟಡಗಳಲ್ಲಿ ಇಳಿಜಾರುಗಳನ್ನು ಒದಗಿಸಲು ಮತ್ತು ಚಕ್ರ, ಕುರ್ಚಿ ಬಳಕೆದಾರರಿಗೆ ಶೌಚಾಲಯಗಳನ್ನು ಅಳವಡಿಸಿಕೊಳ್ಳಲು ಒದಗಿಸಲಾಗಿದೆ.

೧೯ ಸಾರ್ವಜನಿಕ ಸೌಲಭ್ಯಗಳಿಗಾಗಿ ಎಎಸ್‌ಐ ಪ್ರಯತ್ನಗಳು :

ಎಎಸ್‌ಐ (ಜನವರಿ ೨೦೦೯) ಲಾಭೋದ್ದೇಶವಿಲ್ಲದ ಸಂಸ್ಥೆ 'ಸ್ವಯಮ್' ನೊಂದಿಗೆ 'ತಿಳುವಳಿಕೆ ಪತ್ರಕ್ಕೆ' (ಎಂಒಯು) (Memorandum of understanding ) ಪ್ರವೇಶಿಸಿತು ಮತ್ತು ಆರಂಭದಲ್ಲಿ ಅವರನ್ನು ಮೂರು ವರ್ಷಗಳ ಕಾಲ ತಮ್ಮ ಪ್ರವೇಶ ಸಲಹೆಗಾರರಾಗಿ

ನೇಮಿಸಿತು. ಕಾನೂನು ಮತ್ತು ಅಂತರರಾಷ್ಟ್ರೀಯ ಮಾನದಂಡಗಳು ಮತ್ತು ಮಾರ್ಗಸೂಚಿಗಳು ನಿರ್ದಿಷ್ಟ ಸ್ಥಳೀಯ ಅಂಶಗಳಿಗೆ ಅನುಸಾರವಾಗಿ ಕಡಿಮೆ ಚಲನಶೀಲತೆ ಹೊಂದಿರುವ ಜನರಿಗೆ ಎಲ್ಲ ಸ್ಮಾರಕಗಳು/ತಾಣಗಳನ್ನು ಪ್ರವೇಶಿಸಲು ಎಎಸ್ಐಗೆ (ಉಚಿತವಾಗಿ) ಎನ್‌ಜಿಒ ಸಲಹೆ ನೀಡಬೇಕಾಗಿತ್ತು. ಮೊದಲ ಹಂತದಲ್ಲಿ ಎನ್‌ಜಿಒ ನವದೆಹಲಿ, ಆಗ್ರಾ (ಉತ್ತರ ಪ್ರದೇಶ) ಮತ್ತು ಗೋವಾದ ಪಾರಂಪರಿಕ ತಾಣಗಳಲ್ಲಿ ಪ್ರವೇಶ ಲೆಕ್ಕಪರಿಶೋಧನೆ ನಡೆಸುವುದು ಸಂಬಂಧಿಸಿದಂತೆ ಪ್ರವೇಶಕ್ಕೆ ಇರುವ ಅಡೆತಡೆಗಳನ್ನು ಗುರುತಿಸುವುದು ಹಾಗೂ ಸೂಕ್ತ ಸಲಹೆಗಳು, ಕಾರ್ಯತಂತ್ರಗಳನ್ನು ಶಿಫಾರಸು ಮಾಡುವುದು. ತರುವಾಯ ಎಎಸ್ಐ, ಎನ್‌ಜಿಓ ಶಿಫಾರಸುಗಳನ್ನು ಕಾರ್ಯಗತಗೊಳಿಸಲು ಪ್ರತಿ ನೆಲೆಗೆ ಜಂಟಿ ಕ್ರಿಯಾ ಯೋಜನೆಯನ್ನು ರೂಪಿಸುವುದು. ಎನ್‌ಜಿಒ ಜುಲೈ ಅಥವಾ ಆಗಸ್ಟ್ ೨೦೧೦ ರಲ್ಲಿ ಐದು ಸ್ಮಾರಕಗಳ ಪ್ರವೇಶ ಲೆಕ್ಕಪರಿಶೋಧನಾ ವರದಿಗಳನ್ನು ವಿವಿಧ ಸಲಹೆಗಳೊಂದಿಗೆ ಎಎಸ್ಐಗೆ ಸಲ್ಲಿಸಿತು. ಡಿಸೆಂಬರ್ ೨೦೧೨ರವರೆಗೆ ಎಎಸ್ಐ ಎನ್‌ಜಿಓ ಶಿಫಾರಸುಗಳ ಮೇಲೆ ಯಾವುದೇ ಕ್ರಮ ಕೈಗೊಂಡಿಲ್ಲ ಎಂದು ತಿಳಿಯಬಹುದು.[೪೦]

**೨೦ ಸ್ಮಾರಕಗಳಿಗೆ ಸಮೀಪದ ರಸ್ತೆಯ ಕೊರತೆ :**

ಭೌತಿಕ ತಪಾಸಣೆಯಲ್ಲಿ ಸಮೀಪದ ರಸ್ತೆಯ ಕೊರತೆಯಿಂದಾಗಿ ಸುಲಭವಾಗಿ ಪ್ರವೇಶಿಸಲಾಗದ ಅನೇಕ ಸಂರಕ್ಷಿತ ಸ್ಮಾರಕಗಳಿವೆ ಎಂದು ತಿಳಿದುಬಂದಿದೆ. ಈ ಪ್ರಮುಖ ಸಮಸ್ಯೆಯನ್ನು ಪರಿಹರಿಸಲು ಸಂಬಂಧಪಟ್ಟ ಪುರಸಭೆ ಅಧಿಕಾರಿಗಳೊಂದಿಗೆ ಸಮನ್ವಯದಲ್ಲಿ ಎಎಸ್ಐ ಯಾವುದೇ ಪರಿಹಾರ ಕ್ರಮಗಳನ್ನು ಪ್ರಾರಂಭಿಸಲಿಲ್ಲ. ಕೆಲವು ಸ್ಮಾರಕಗಳಲ್ಲಿ ಎಎಸ್ಐ ಮಾಹಿತಿಯ ಅಧಿಕಾರಿಗಳು ಸ್ಮಾರಕದ ನಿಯಮಿತ ಭೌತಿಕ ತಪಾಸಣೆಯ ಅನುಪಸ್ಥಿತಿಯಿಂದಾಗಿ ವೃತ್ತ/ಉಪ ವೃತ್ತ ಮಟ್ಟದಲ್ಲಿ ಲಭ್ಯವಿಲ್ಲ.

**೨೧ ಆನ್‌ಲೈನ್ ಮೂಲಕ ಮುಂಗಡ ಟಿಕೆಟ್‌ಗಳ ಸೌಲಭ್ಯ :**

ವಿಶ್ವದಾದ್ಯಂತ ಅಂತರರಾಷ್ಟ್ರೀಯ ಪ್ರವಾಸಿಗರು ಆಗಾಗ್ಗೆ ಭೇಟಿ ನೀಡುವ ನೆಲೆಗಳಿಗೆ ಮುಂಚಿತವಾಗಿ ಆನ್‌ಲೈನ್‌ನಲ್ಲಿ ಟಿಕೆಟ್ ಕಾಯ್ದಿರಿಸುವ ಸೌಲಭ್ಯವನ್ನು ಉತ್ತಮ ಅಭ್ಯಾಸವಾಗಿ ಅಳವಡಿಸಿಕೊಳ್ಳಲಾಗಿದೆ. ಪ್ರವಾಸಿಗರಿಗೆ ಅನುಕೂಲವಾಗುವಂತೆ ಅನೇಕ ದೇಶಗಳು ನಗರ ಅಥವಾ ಒಂದು ಪ್ರದೇಶದಾದ್ಯಂತದ ನೆಲೆಗಳ ಗುಂಪಿಗೆ ಕಡಿಮೆ ಬೆಲೆಗೆ ಟಿಕೆಟ್‌ಗಳನ್ನು ಪರಿಚಯಿಸಿವೆ. ಟಿಕೆಟ್ ಮಾರಾಟದಿಂದ ಕಳೆದ ಐದು ವರ್ಷಗಳಲ್ಲಿ ಎಎಸ್ಐ ಸುಮಾರು ೪೦೦ ಕೋಟಿ ರೂ. ೨೦೦೭-೦೮ ರಿಂದ ೨೦೧೧-೧೨ರ ಅವಧಿಯಲ್ಲಿ ಒಟ್ಟು ೧.೬೫ ಕೋಟಿ ವಿದೇಶಿ ಪ್ರವಾಸಿಗರು ಸ್ಮಾರಕಗಳಿಗೆ ಭೇಟಿ ನೀಡಿದರು.[೪೧]

## ಕೊನೆ ಟಿಪ್ಪಣಿಗಳು


೧. ಚಿದಾನಂದಮೂರ್ತಿ ಎಂ., ೨೦೦೫, ಹಂಪಿ ಉಳಿಸಿ : ಭಾರತ ಉಳಿಸಿ, ಪು, ೮

೨. ಶಿವರುದ್ರಸ್ವಾಮಿ ಎಸ್.ಎನ್., ೨೦೦೫, ಭಾರತೀಯ ಪ್ರವಾಸೋದ್ಯಮ, ಪು, ೯೮

೩. ಅದೇ, ಪು, ೯೯

೪. www.unesco.org

೫. ಕೃಷ್ಣರಾವ್ ಸಿ.ಆರ್., ೨೦೦೦, ವಿಶ್ವವಿಖ್ಯಾತ ನಗರಗಳು, ಪು, ೧೪

೬. ರಮೇಶ ಬಿ.ಗೋ., ೨೦೦೧, ಭಾರತದ ವಸ್ತುಸಂಗ್ರಹಾಲಯಗಳು (ಮ್ಯೂಸಿಯಂಗಳು), ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು

೭. International Council for Monuments and Sites (ICOMOS), 2003, ICOMOS Charter - Principles for the analysis, conservation and structural restoration of architectural heritage, Paris, pp. 33

೮. International Council for Monuments and Sites (ICOMOS), 2003, ICOMOS Charter - Principles for the analysis, conservation and structural restoration of architectural heritage, Paris, pp. 34

೯. School of Archaeology University of Oxford, England, United Kingdom

೧೦. J. Marshall, 1923, Conservation Manual, Superitendent, Government Printing, Calcutta, pp. 82

೧೧. L. Binda, S. Lagomarsino, L. Gambarotta, C. Modena, 1999, A multi-level approach to damage assessment and seismic improvement of masonry buildings in Italy, Seismic Damage to Masonry Buildings, A. Bernardini (Ed.), Balkema, Rotterdam, pp. 179-194

೧೨. Indian National Trust for Art and Cultural Heritage: 2004, INTACH, Charter for the Conservation of Unprotected Architectural Heritage and Sites in India, New Delhi, pp. 14

೧೩. Archaeological Survey of India: 2014, ASI, National Policy for Conservation of the Ancient Monuments, Archaeological Sites and Remains, ASI, New Delhi, pp.14.

೧೪. Bureau of Indian Standards, 2002, Criteria for earthquake resistant design of structures – Part 1: General provisions and buildings. Bureau of Indian Standards: New Delhi, pp. 16

೧೫. Bureau of Indian Standards, 2002, Criteria for earthquake resistant design of structures – Part 1: General provisions and buildings. Bureau of Indian Standards: New Delhi, pp. 17

೧೬. D. Gupta, E. Miranda, C.V.R. Murty, 2003, Heritage Structures, Chapter in Bhuj India Earthquake of January 26, 2001 Reconnaissance Report, Supplement A to Earthquake Spectra, 18, Earthquake Engineering Research Institute (USA), 225-255

೧೭. M.S. Mathews, A. Menon, 2008, Retrofit of Historical and Heritage Structures, Chapter in Handbook on Seismic Retrofit of Buildings, Chakrabarti, A., Menon, D., and Sengupta, A.K., (Eds.), Alpha Science International Limited, Oxford, UK, pp. 26

೧೮. ಶ್ರೀಅರಬಿಂದೋ, ೧೯೨೦, ದ ರಿನೈಸೆನ್ಸ್ ಇನ್ ಇಂಡಿಯಾ, ಶ್ರೀಅರಬಿಂದೋ ಆಶ್ರಮ ಪ್ರೆಸ್, ಪಾಂಡಿಚೇರಿ, ಇಂಡಿಯಾ, ಪು, ೪

೧೯. ಶಿವರುದ್ರಸ್ವಾಮಿ ಎಸ್.ಎನ್., ೨೦೦೫, ಭಾರತೀಯ ಪ್ರವಾಸೋದ್ಯಮ, ಪು, ೧೦೪

೨೦. ಪುರಾತತ್ವ ಮತ್ತು ವಸ್ತುಸಂಗ್ರಹಾಲಯ ಕೈಪಿಡಿ, ೧೯೯೩, ಪು, ೭೭

೨೧. ಅದೇ, ಪು, ೭೮

೨೨. ಅದೇ, ಪು, ೭೮

೨೩. ಅದೇ, ಪು, ೭೯

೨೪. ಅದೇ, ಪು, ೮೦

೨೫. ಅಗರವಾಲ್ ಓ. ಪಿ., (ಮೂ), ನರಹರಿ ಇ.ಡಿ. (ಅನು), ೨೦೦೮, ಕಲಾವಸ್ತುಗಳು ಮತ್ತು ಗ್ರಂಥಾಲಯ ಸಾಮಗ್ರಿಗಳ ಸಂರಕ್ಷಣೆ, ಪು, ೫೩

೨೬. ಅದೇ, ಪು, ೫೪

೨೭. ಶಿವರುದ್ರಸ್ವಾಮಿ ಎಸ್.ಎನ್., ೨೦೦೫, ಭಾರತೀಯ ಪ್ರವಾಸೋದ್ಯಮ, ಪು, ೧೯೮

೨೮. J. Marshall, 1923, Conservation Manual, Superintendent, Government Printing, Calcutta, pp. 43

೨೯. ಶಿವರುದ್ರಸ್ವಾಮಿ ಎಸ್.ಎನ್., ೨೦೦೫, ಭಾರತೀಯ ಪ್ರವಾಸೋದ್ಯಮ, ಪು, ೧೦೨

೩೦. Arun Menon, 2014, SAHC2014 – 9th International Conference on Structural Analysis of Historical Constructions, HERITAGE CONSERVATION IN INDIA: CHALLGENGES AND NEW PARADIGMS, pp. 16

೩೧. Ibd, pp, 17

೩೨. ಅಗರವಾಲ್ ಓ. ಪಿ., (ಮೂ), ನರಹರಿ ಇ.ಡಿ. (ಅನು), ೨೦೦೮, ಕಲಾವಸ್ತುಗಳು ಮತ್ತು ಗ್ರಂಥಾಲಯ ಸಾಮಗ್ರಿಗಳ ಸಂರಕ್ಷಣೆ, ಪು, ೫೩

೩೩. ಅದೇ, ಪು, ೫೫

೩೪. ಅದೇ, ಪು, ೫೬

೩೫. Report of the Comptroller and Auditor General of india on PERFORMANCE AUDIT OF PRESERVATION AND CONSERVATION OF MONUMENTS AND ANTIQUITIES, pp. 36

೩೬. Ibd, pp. 36

೩೭. ಸಂಶೋಧಕರ ಹೇಳಿಕೆಯಾಗಿರುತ್ತದೆ.

೩೮. Report of the Comptroller and Auditor General of india on PERFORMANCE AUDIT OF PRESERVATION AND CONSERVATION OF MONUMENTS AND ANTIQUITIES, Union Government of culture, Report no-18-2013, pp. 200

೩೯. Ibd, pp. 201

೪೦. Ibd, pp. 202

೪೧. Ibd. pp. 204

## ಅಧ್ಯಾಯ – ಏಳು

# ಸಮಾರೋಪ

ಚರಿತ್ರೆ ಮತ್ತು ಸ್ಮಾರಕಗಳಿಗೆ ಸಾಕಷ್ಟು ಅವಿನಾಭಾವ ಸಂಬಂಧವಿದೆ. ಸ್ಮಾರಕಗಳಿಲ್ಲದೆ ಇತಿಹಾಸ ರಚಿಸುವುದು ಜೀವಕೋಶಗಳಿಲ್ಲದ ಮನುಷ್ಯನಂತೆ ಆಗುತ್ತದೆ. ಆದ್ದರಿಂದ ಸ್ಮಾರಕಗಳು ಇತಿಹಾಸ ರಚನೆಗೆ ಬಹುಮುಖ್ಯ ಆಕರಗಳಾಗಿವೆ. ವಿಶ್ವಪರಂಪರೆ ಪಟ್ಟಿಯಲ್ಲಿ ಸೇರಲ್ಪಟ್ಟ ಅನೇಕ ಸ್ಮಾರಕಗಳು ವಿಶ್ವದಾದ್ಯಂತ ಇವೆ. ಆದರೆ ಪ್ರಸ್ತುತ ಮಹಾಪ್ರಬಂಧವು ಕರ್ನಾಟಕದಲ್ಲಿರುವ ವಿಶ್ವ ಪಾರಂಪರಿಕ ಸ್ಮಾರಕಗಳಿಗೆ ಸೀಮಿತವಾಗಿರುವ ಹಿನ್ನೆಲೆಯಲ್ಲಿ ವಿಶ್ವ ಪಾರಂಪರಿಕ ತಾಣಗಳ ನಿರ್ವಹಣೆ ಸಮಸ್ಯೆ, ಪರಿಹಾರೋಪಾಯಗಳು ಇವುಗಳಿಗೆ ಪೂರಕವಾಗಿ ಯುನೆಸ್ಕೋ ಸಂಸ್ಥೆಯ ಆಡಳಿತ, ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ಕರ್ನಾಟಕ ಪ್ರವಾಸೋದ್ಯಮ ಇಲಾಖೆ, ಹಂಪಿ ಪ್ರಾಧಿಕಾರ ಹಾಗೂ ಸ್ಥಳೀಯ ಸಂಸ್ಥೆಗಳು ಯಾವ ರೀತಿಯಾಗಿ ಕ್ರಮಕೈಗೊಂಡು ಪ್ರಾಚೀನ ಸಾಂಸ್ಕೃತಿಕ ಪರಂಪರೆಯ ಹೆಗ್ಗುರುತುಗಳಾದ ಸ್ಮಾರಕ ತಾಣಗಳನ್ನು ಉಳಿಸಿಕೊಂಡಿವೆ ಎಂಬುದರ ಕುರಿತು ಪ್ರಸ್ತುತ ಮಹಾಪ್ರಬಂಧದಲ್ಲಿ ಚರ್ಚಿಸಲಾಗಿದೆ. ವಿಶ್ವಪಾರಂಪರಿಕ ತಾಣಗಳಲ್ಲಿ ಮೂರು ಬಗೆ. ಸಾಂಸ್ಕೃತಿಕ, ನೈಸರ್ಗಿಕ ಜೊತೆಗೆ ಸಮ್ಮಿಶ್ರ ತಾಣಗಳು ಕರ್ನಾಟಕದಲ್ಲಿ ಅಧ್ಯಯನಕ್ಕೆ ಆಯ್ಕೆಯಾಗಿರುವ ತಾಣಗಳು ಸಾಂಸ್ಕೃತಿಕ ತಾಣಗಳಾಗಿವೆ. ಇವುಗಳನ್ನು ಆಯ್ಕೆಮಾಡುವುದು ನಿರ್ಧರಿಸುವುದು ಯುನೆಸ್ಕೋ ಸಂಸ್ಥೆಯ ಸ್ವತಂತ್ರ ನಿರ್ಧಾರವಲ್ಲ, ಹೆರಿಟೇಜ್ ಕಮೀಟಿ (ವಿಶ್ವಪಾರಂಪರಿಕ ಸಮಿತಿ) ಶಿಫಾರಸ್ಸು ಮಾಡಿದ ಮೇಲೆ ಚರ್ಚಿಸಿ ಪರಿಶೀಲಿಸಿ ನಂತರ ಒಪ್ಪಿಕೊಳ್ಳುತ್ತದೆ.

ವಿಶ್ವಪಾರಂಪರಿಕ ತಾಣಗಳ ಪಟ್ಟಿಯಲ್ಲಿ ಸೇರುವುದು ಯಾವುದು ಸುಲಭದ ಕೆಲಸವಲ್ಲ. ಇಲ್ಲಿ ಒಂದು ಸಂಗತಿ ಉಲ್ಲೇಖನಾರ್ಹ ಪಶ್ಚಿಮಘಟ್ಟಗಳಲ್ಲಿ ಅಗಸ್ತ್ಯಮಲೈ, ಪೆರಿಯಾರ್, ನೀಲಗಿರಿ ತಾಣಗಳನ್ನು ವಿಶ್ವಪಾರಂಪರಿಕ ತಾಣಗಳ ಪಟ್ಟಿಗೆ ಸೇರಿಸಿಕೊಳ್ಳಬೇಕೆಂದು ತಮಿಳುನಾಡು ಮತ್ತು ಕೇರಳ ರಾಜ್ಯಗಳು ಹಟ ತೊಟ್ಟು ನಿಂತವು ಆದರೆ ಅದು ಸುಲಭವಾಗಿ ಯಾವುದು ಆಗಲಿಲ್ಲ. ಭಾರತದ ನಿಲುವನ್ನು ಅಲ್ಜೀರಿಯಾ ಸೇರಿದಂತೆ ಹನ್ನೆರಡು ದೇಶಗಳು ಬೆಂಬಲಿಸಿದ್ದರಿಂದ ಪಶ್ಚಿಮಘಟ್ಟದ ತಾಣ ವಿಶ್ವ ಪಾರಂಪರಿಕ ಪಟ್ಟಿಯಲ್ಲಿ ಸೇರಿದವು. ಸಾಮಾನ್ಯವಾಗಿ ಯುನೆಸ್ಕೋ ಸಂಸ್ಥೆಯು ತಾಣಗಳನ್ನು ಪಟ್ಟಿಗೆ ಸೇರಿಸುವಾಗ ಅವು ಸಾಂಸ್ಕೃತಿಕ ನೆಲೆಗಳು ಆಗಿದ್ದರೆ ಪರಂಪರೆಯನ್ನೇ ಬಿಂಬಿಸುವಂತಿರಬೇಕು.

ಮಾನವ ನಿರ್ಮಿತ ರಚನೆಗಳು ಬೌದ್ಧಿಕ ಪಾರಮ್ಯವನ್ನು ಮೆರೆಯಬೇಕು. ಹಾಗೆಯೇ ನೈಸರ್ಗಿಕ ತಾಣಗಳಾಗಿದ್ದರೆ ಅನನ್ಯ ರಚನೆಗಳಾಗಿರಬೇಕು. ಜೀವ ವೈವಿಧ್ಯದ ಅಪರೂಪದ ತಾಣಗಳಾಗಿರಬೇಕು. ಅಳಿವಿನಂಚಿಗೆ ಬಂದಿದ್ದರೆ ಅವುಗಳ ಸಂರಕ್ಷಣೆಗೆ ಮೊದಲ ಆದ್ಯತೆ. ಹೀಗೆ ಹತ್ತಾರು ಅಂಶಗಳನ್ನು ಪರಿಗಣಿಸುತ್ತದೆ. ಆದರೂ ಯುನೆಸ್ಕೋಗೆ ಸೇರಿರುವ ಪಾರಂಪರಿಕ ತಾಣದ ಒಡೆತನವನ್ನು ವಹಿಸಿದ್ದರೂ ಅದು ಸಂಪೂರ್ಣವಾಗಿ ಜನರಿಂದ ಸಂರಕ್ಷಣೆ ಪಡೆಯಬೇಕು ಅಂದಾಗ ಮಾತ್ರ ಅಂತಹ ತಾಣವು ಸಂರಕ್ಷಿಸಲ್ಪಡುತ್ತದೆ ಎಂದು ಹೇಳಬಹುದು.

ವಿಶ್ವಪರಂಪರೆ ಪಟ್ಟಿಯಲ್ಲಿ ಸೇರಲ್ಪಟ್ಟ ಕರ್ನಾಟಕದ ಹಂಪಿ ಮತ್ತು ಪಟ್ಟದಕಲ್ಲು ತಾಣಗಳು ಈಗಾಗಲೇ ಸಂಭಾವ್ಯ ತಾಣಗಳ ಪಟ್ಟಿಯಲ್ಲಿ ಇರುವಂತಹ ಉತ್ತರ ಕರ್ನಾಟಕ ಪ್ರದೇಶದಲ್ಲಿರುವ ಪ್ರಮುಖ ತಾಣಗಳಾದ ಐಹೊಳೆ, ಬಾದಾಮಿ ಮತ್ತು ವಿಜಯಪುರ ಅದೇ ರೀತಿ ದಕ್ಷಿಣ ಕರ್ನಾಟಕ ಪ್ರದೇಶದಲ್ಲಿರುವ ಪ್ರಮುಖ ತಾಣಗಳಾದ ಬೇಲೂರು–ಹಳೇಬೀಡು ಸೋಮನಾಥಪುರ ಮತ್ತು ಶ್ರವಣಬೆಳಗೊಳ ಐತಿಹಾಸಿಕ ತಾಣಗಳನ್ನು ಅಲ್ಲಿನ ಶೈವ, ವೈಷ್ಣವ, ಜೈನ, ಇಂಡೋ–ಇಸ್ಲಾಮಿಕ್ ಕಲಾ ಸಂಪತ್ತಿನ ಉಳಿವಿಗಾಗಿ ಮತ್ತು ಬೆಳವಣಿಗೆಗಾಗಿ ವಿಶ್ವ ಪಾರಂಪರಿಕ ಪಟ್ಟಿಗೆ ಸೇರಿಸಲು ನಿರ್ಧರಿಸಿ ನಾಮ ನಿರ್ದೇಶನಗೊಳಿಸಲಾಗಿದೆ. ಸಂಭಾವ್ಯ ಪಟ್ಟಿಯಲ್ಲಿರುವ ನಾಮನಿರ್ದೇಶನಗೊಂಡಿರುವ ತಾಣಗಳ ಬಗ್ಗೆ ಮಹಾಪ್ರಬಂಧವು ಸಮಗ್ರವಾಗಿ ತಿಳಿಸಿಕೊಡುತ್ತದೆ. ವಿಶ್ವಪಾರಂಪರಿಕ ತಾಣಗಳು ಐತಿಹಾಸಿಕ ಹಿನ್ನೆಲೆಯಿಂದ ಅವುಗಳ ಮಹತ್ವ ಹಾಗೂ ಪ್ರಗತಿ ಕುರಿತು ಸ್ಥೂಲವಾಗಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ಕರ್ನಾಟಕದಲ್ಲಿರುವ ತಾಣಗಳ ಮಹತ್ವದ ವಿಷಯಗಳನ್ನು ಚರ್ಚಿಸುತ್ತ ಮುಖ್ಯವಾಗಿ ಕನ್ನಡನಾಡಿನ ವಿಶ್ವ ಮನ್ನಣೆ ಪಡೆದ ಸಾಂಸ್ಕೃತಿಕ ತಾಣಗಳಾದ ಹಂಪಿ ಮತ್ತು ಪಟ್ಟದಕಲ್ಲು ಹಾಗೂ ನಾಮನಿರ್ದೇಶನಗೊಂಡಂತ ಕರ್ನಾಟಕದ ಸಂಭಾವ್ಯ ತಾಣಗಳು ಸಾಂಸ್ಕೃತಿಕ ಮಹತ್ವ, ಸ್ಥಳನಾಮ ಕುರಿತಂತೆ ಅಲ್ಲಿನ ಸ್ಮಾರಕಗಳ ಪಾರಂಪರಿಕ ವೈಶಿಷ್ಟ್ಯ ಜೊತೆಗೆ ಆ ತಾಣಗಳ ಶಿಫಾರಸು ಮಾಹಿತಿಗಳನ್ನು ಸಹ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಕರ್ನಾಟಕ ಅಥವಾ ಇತರೆ ರಾಜ್ಯಗಳ ಯಾವ ಪ್ರದೇಶದ ತಾಣಗಳನ್ನು ತೆಗೆದುಕೊಂಡರು ಆ ತಾಣದ ನಿರ್ವಹಣೆಯಲ್ಲಿ ಅನೇಕ ರೀತಿಯ ನೀತಿ–ನಿಯಮಗಳು ತಲೆದೋರುವುದು ಹಾಗೂ ಅದನ್ನು ಸಾಮಾನ್ಯ ಅರ್ಥದಲ್ಲಿ ಹೇಳುವುದಾದರೆ ಸಮಸ್ಯೆಗಳು ತಲೆದೋರುವುದನ್ನು ನಾವು ಗಮನಿಸುತ್ತೇವೆ. ಅಂತಹ ಸಮಸ್ಯೆಗಳಿಗೆ ಯುನೆಸ್ಕೋ

ಕೈಗೊಂಡಿರುವ ನಿರ್ಧಾರಗಳು ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ ಕೈಗೊಂಡ ಅಭಿವೃದ್ಧಿಯ ಅಂಶಗಳು ಕರ್ನಾಟಕ ಪ್ರವಾಸೋದ್ಯಮ ಇಲಾಖೆಯ ಯೋಜನೆಗಳು ಸ್ಥಳೀಯರ ಸಹಕಾರ ಸಂಶೋಧಕರ, ಬರಹಗಾರರ ಹೊಸ ಅಂಶಗಳು ಹೇಗೆ ಸ್ಮಾರಕಗಳ ಸಂರಕ್ಷಣೆಯನ್ನು ನಿರ್ವಹಿಸಲು ಅನುವಾಗಿವೆ ಎಂಬುದನ್ನು ತಿಳಿಯಬಹುದು. ಸ್ಮಾರಕಗಳ ಸಂರಕ್ಷಣೆಗೆ ಒಂದು ಸಂಸ್ಥೆಯಾಗಲಿ, ಸಂಘಗಳಾಗಲಿ ಪೂರಕವಾಗಿರದೆ ಆಡಳಿತಾತ್ಮಕ ಪ್ರಯೋಜನಕ್ಕೆ ಸಂಶೋಧಕರ ನಿಲುವುಗಳೇನೆಂಬುದನ್ನು ಪಾರಂಪರಿಕ ಸ್ಮಾರಕಗಳ ಸವಾಲುಗಳ ಜೊತೆಗೆ ಹೊಸ ಮಾದರಿಗಳನ್ನು ತಿಳಿಸಲಾಗಿದೆ. ಸ್ಮಾರಕಗಳಿಗಿರುವ ಅಪಾಯವನ್ನು ಯಾವ ನೈಸರ್ಗಿಕ ವಿಪತ್ತುಗಳಿಂದ ರಕ್ಷಿಸುವ ಅಗತ್ಯತೆ ಇದೆ ಎಂಬುದರ ಕುರಿತು ಸಂರಕ್ಷಣಾಗಾರರಿಗೆ ಸ್ಪಷ್ಟವಾದ ಮಾಹಿತಿ ಇರಬೇಕಾದದ್ದು ಅವಶ್ಯಕ. ಸ್ಮಾರಕಗಳಿಗೆ ವಿಪತ್ತು ಬಂದೊದಗಿದರೆ ಅನಂತರ ಅದನ್ನು ಹೇಗೆ ರಕ್ಷಿಸಬೇಕು ಮುಂದಿನ ವೈಜ್ಞಾನಿಕ ಬೆಳವಣಿಗೆಯ ಅಂಶಗಳ ಕುರಿತು ಆಡಳಿತಾತ್ಮಕವಾಗಿ ತಿಳಿದುಕೊಂಡರೆ ಅಂತಹ ಸ್ಮಾರಕಗಳನ್ನು ರಕ್ಷಿಸುವುದು ತುಂಬಾ ಸುಲಭವಾಗುತ್ತದೆ.

ಪಾರಂಪರಿಕವಾಗಿ ಸಂರಕ್ಷಣಾ ಶಿಕ್ಷಣದಿಂದ ಅಂತರ್‌ಶಿಸ್ತೀಯವಾಗಿ ಕೇವಲ ಓದು ಬರಹಗಾರರಿಗಷ್ಟೇ ಅಲ್ಲದೆ ಸ್ಥಳೀಯ ನಾಗರೀಕರಿಗೂ ಸಂರಕ್ಷಣಾ ಬಗೆಗಿನ ಜ್ಞಾನವನ್ನು ತಿಳಿಸಬಹುದು. ಸ್ಮಾರಕಗಳ ಸಮೂಹದಲ್ಲಿ ಪಾರಂಪರಿಕ ನಡಿಗೆ, ಐತಿಹಾಸಿಕ ಮಹತ್ವ, ಸ್ಮಾರಕಗಳ ವಿಶಿಷ್ಟತೆ ತಿಳಿಸುವ ಪ್ರಯತ್ನದ ಜೊತೆಗೆ ನಾಗರೀಕರಿಗೆ ಸ್ಮಾರಕಗಳನ್ನು ಹೇಗೆ ನಿರ್ವಹಿಸಬೇಕೆಂಬ ಶಿಕ್ಷಣ ನೀಡಿದರೆ ಖಂಡಿತವಾಗಿಯೂ ಅವರು ಇಂತಹ ಕಾರ್ಯಕ್ರಮಗಳಿಂದ ಪ್ರೇರೇಪಿತರಾಗಬಲ್ಲರು. ಅವರಿಗೆ ಸ್ಮಾರಕಗಳ ಕುರಿತು ರಚನಾತ್ಮಕ ಸಂರಕ್ಷಣೆಯ ಪದವಿಗಳನ್ನು ಪೂರೈಸುವಂತೆ ಅನುಕೂಲ ಮಾಡುವುದರಿಂದ ಅವಶ್ಯಕವಾಗಿ ಬೇಕಾದ ಸ್ಥಳೀಯ ಮಾರ್ಗದರ್ಶಿಗಳನ್ನು ತುಂಬಿದಂತಾಗುತ್ತದೆ. ಅಲ್ಲದೇ ಅಂತಹ ಮಾರ್ಗದರ್ಶಿಗಳು ಸಂರಕ್ಷಣಾ ನೀತಿಯನ್ನು ಅರಿಯಬಲ್ಲವರಾಗುತ್ತಾರೆ. ಪಾರಂಪರಿಕ ರಚನೆಗಳ ಸಂರಕ್ಷಿತ ಶಿಕ್ಷಣವನ್ನು ಮಾರ್ಗದರ್ಶಿಗಳಿಗಾಗಿ ಹಾಗೂ ಆಸಕ್ತ ನಾಗರಿಕರಿಗಾಗಿ ರಾಷ್ಟ್ರೀಯ ಕೇಂದ್ರಗಳನ್ನು ಸಂಬಂಧಪಟ್ಟ ಇಲಾಖೆಗಳು ತೆರೆಯಬೇಕಾಗುತ್ತದೆ.

ಪಾರಂಪರಿಕ ರಚನೆಗಳ ಸಂರಕ್ಷಣೆಯಲ್ಲಿ ತಾಂತ್ರಿಕ ವಿಷಯಗಳು ಮತ್ತು ತಾಂತ್ರಿಕ ನೀತಿ ಅಭಿವೃದ್ಧಿಯ ಕುರಿತು ರಾಷ್ಟ್ರೀಯ ಮತ್ತು ರಾಜ್ಯ ಸರ್ಕಾರಗಳು ಬೌದ್ಧಿಕವಾಗಿ ಆಲೋಚಿಸುವುದು ಒಳಿತು. ಸ್ಮಾರಕಗಳ ಸಂರಕ್ಷಣೆಗೆ ಜಾಗೃತಿ ಮೂಡಿಸುವ ಮೂಲಕ

ಸ್ಥಳೀಯ ಸೌಲಭ್ಯಗಳನ್ನು ಒದಗಿಸಬೇಕು, ಮುಖ್ಯವಾಗಿ ಸ್ಮಾರಕಗಳಲ್ಲಿ ಫಲಕಗಳು, ಅದರಲ್ಲಿ ಸಂಕ್ಷಿಪ್ತ ವಿವರಣೆಯನ್ನು ಒದಗಿಸುವುದು ತುಂಬಾ ಅವಶ್ಯಕ. ಆದಾಗ್ಯೂ ನೆಲೆಯ ಗಮನಾರ್ಹ ಲಕ್ಷಣಗಳು ಮತ್ತು ಪ್ರಾಮುಖ್ಯತೆಯನ್ನು ಅರ್ಥಮಾಡಿಕೊಳ್ಳಲು ನೆಲೆಯ ನಿರೂಪಣಾಕಾರರ ಸೇವೆಗಳು ಅಗತ್ಯವಾಗಿವೆ. ಸಂಕೀರ್ಣಗಳಲ್ಲಿ ಸಾಕಷ್ಟು ಮಾರ್ಗದರ್ಶಿ ಸೌಲಭ್ಯಗಳನ್ನು ಹೊಂದಿರುವುದು ಇನ್ನೂ ಅವಶ್ಯ. ಕೇಂದ್ರ ಮತ್ತು ರಾಜ್ಯ ಪ್ರವಾಸೋದ್ಯಮ ಇಲಾಖೆಗಳು ವ್ಯಕ್ತಿಗಳಿಗೆ ಇತಿಹಾಸ ಮತ್ತು ಸ್ಮಾರಕಗಳ ಕುರಿತು ಜ್ಞಾನ ಅಥವಾ ಅರಿವನ್ನು ಪಡೆದು ಸಂಗತಿಗಳನ್ನು ವಿಶ್ಲೇಷಿಸುವ ಮೂಲಕ ಅವರಿಗೆ ಮಾರ್ಗದರ್ಶಿಯಾಗಲು ಅನುವು ನೀಡಬೇಕು. ಜೊತೆಗೆ ಭಾರತದ ಬೇರೆ ತಾಣಗಳಲ್ಲಿ ವಿವಿಧ ಭಾಷೆಗಳಲ್ಲಿ ಮಾರ್ಗದರ್ಶಿ ಸೌಲಭ್ಯಗಳಿರುವ ಹಾಗೂ ಕರ್ನಾಟಕದ ಹಂಪಿ ಪಟ್ಟದಕಲ್ಲು ತಾಣಗಳಲ್ಲಿ ಹಾಗೂ ಕರ್ನಾಟಕದಿಂದ ಯುನೆಸ್ಕೋಗೆ ನಾಮನಿರ್ದೇಶನಗೊಂಡ ಇನ್ನುಳಿದ ಸ್ಥಳಗಳಾದ ಬೇಲೂರು–ಹಳೇಬೀಡು, ಸೋಮನಾಥಪುರ, ಶ್ರವಣಬೆಳಗೊಳ, ಬಾದಾಮಿ, ಐಹೊಳೆ, ವಿಜಯಪುರಗಳಲ್ಲಿ ವಿವಿಧ ಭಾಷೆಗಳ ಮಾರ್ಗದರ್ಶಕರ ಅವಶ್ಯಕತೆ ಇದೆ. ಈ ಹಿನ್ನೆಲೆಯಲ್ಲಿ ಸಂಬಂಧಿಸಿದ ಸಂಸ್ಥೆಗಳು ಕ್ರಮವಹಿಸುವುದು ಸೂಕ್ತವೆಂದು ಭಾವಿಸಲಾಗಿದೆ.

ವಿಶ್ವಪಾರಂಪರಿಕ ನೆಲೆಗಳ ಸ್ಮಾರಕಗಳಲ್ಲಿ ಹಂಪಿಯ ಸ್ಮಾರಕಗಳ ಪಾತ್ರ ಮಹತ್ವದ್ದಾಗಿದೆ. ಹಂಪಿಯನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ ಅರಸರಲ್ಲಿ ವಿಜಯನಗರದ ಅರಸರಿಗೆ ಅಗ್ರಸ್ಥಾನ ಸಲ್ಲುತ್ತದೆ. ಇತರ ಕ್ಷೇತ್ರಗಳಂತೆ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದಲ್ಲಿ ಅವರು ಸುವರ್ಣಯುಗವನ್ನು ಸೃಷ್ಟಿಸಿದರು. ಇದರಿಂದಾಗಿ ಅಸಂಖ್ಯಾತ ಸ್ಮಾರಕಗಳು ಇವರ ಕಾಲಾವಧಿಯಲ್ಲಿ ಹಂಪಿ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನಿರ್ಮಾಣವಾಗಿದ್ದನ್ನು ಸ್ಮರಿಸಿಕೊಳ್ಳಬಹುದು. 'ಸ್ಮಾರಕಗಳ ತವರೂರು', 'ಬಯಲು ವಸ್ತುಸಂಗ್ರಹಾಲಯ' ಎಂದು ಖ್ಯಾತವಾಗಿರುವ ಹಂಪಿಯಲ್ಲಿ ಸುಮಾರು ಇಪ್ಪತ್ತೈದು ಕಿಲೋಮೀಟರ್ ವ್ಯಾಪ್ತಿಯಲ್ಲಿ ಸ್ಮಾರಕಗಳು ಹರಡಿಕೊಂಡಿವೆ. ಸಾವಿರದ ಆರು ನೂರಕ್ಕೂ ಹೆಚ್ಚು ಸ್ಮಾರಕಗಳು ವಿಶ್ವಪರಂಪರಾ ಪಟ್ಟಿಯಲ್ಲಿ, ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಹಾಗೂ ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ ಪಟ್ಟಿಯಲ್ಲಿ ದಾಖಲಾಗಿವೆ ಹಾಗೂ ಇನ್ನೂ ನೂರಾರು ಸ್ಮಾರಕಗಳು ಹೊರಗುಳಿದಿವೆ. ಇಲ್ಲಿ ಮುಖ್ಯವಾಗಿ ವಿಶ್ವಪರಂಪರೆ ಪಟ್ಟಿಯಲ್ಲಿ ಸೇರಲ್ಪಟ್ಟಿರುವಂತಹ ಸ್ಮಾರಕಗಳ ಸಮೂಹಗಳ ಕಡೆ ಗಮನವಿದ್ದರೂ ಸಂರಕ್ಷಣೆಯ ದೃಷ್ಟಿಯಿಂದ ಉಳಿದೆರಡು ಇಲಾಖೆಗಳ ಪಟ್ಟಿಯಲ್ಲಿರುವ ಮತ್ತು

ಪ್ರವಾಸೋದ್ಯಮ ಇಲಾಖೆಯ ಜವಾಬ್ದಾರಿಯನ್ನು ತಿಳಿದು ಹಂಪಿಯ ಸ್ಮಾರಕಗಳ ಸಂರಕ್ಷಣೆಯ ಬಗೆಗೆ ಇನ್ನು ಹೆಚ್ಚಿನ ಮುತವರ್ಜಿಯಿಂದ ಸಂರಕ್ಷಣಾ ಕಾರ್ಯಗಳನ್ನು ಕೈಗೊಳ್ಳುವ ಸಾಧ್ಯತೆಗಳ ಕುರಿತು ಅಭಿಪ್ರಾಯಿಸಲಾಗಿದೆ.

ಹಂಪಿ ಸ್ಮಾರಕಗಳು ಹಿಂದಿನಿಂದ ಹೇಗೆಲ್ಲಾ ಸಂರಕ್ಷಿಸಲ್ಪಟ್ಟವು ಎಂಬುದರ ಸಮಗ್ರ ಮಾಹಿತಿಯ ಜೊತೆಗೆ ಮುಖ್ಯ ದೇವಾಲಯಗಳ ಸಂರಕ್ಷಣೆಯನ್ನು ತಿಳಿಸಲಾಗಿದೆ. ಅವಶ್ಯವಾಗಿ ಹೇಳುವುದಾದರೆ ಹಂಪಿಯ ಸ್ಮಾರಕಗಳನ್ನು ರಕ್ಷಣೆ ಮಾಡಿದ ಕಾರ್ಯಗಳು, ಮೂರು ಕಾಲಘಟ್ಟದಿಂದ ಕಂಡುಬರುತ್ತವೆ. ಮೊದಲನೆಯದಾಗಿ ವಿಜಯನಗರದ ಅರಸರು ಕೈಗೊಂಡ ರಕ್ಷಣಾ ಕಾರ್ಯಗಳು, ಬ್ರಿಟಿಷರ ಆಳ್ವಿಕೆಯಲ್ಲಿ ಕೈಗೊಂಡ ರಕ್ಷಣಾ ಕಾರ್ಯಗಳು ಹಾಗೂ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಭಾರತ ಹಾಗೂ ಕರ್ನಾಟಕ ಸರ್ಕಾರಗಳು ಮತ್ತು ವಿಶ್ವಸಂಸ್ಥೆಯ ಅಂಗಸಂಸ್ಥೆಗಳಲ್ಲಿ ಒಂದಾದ ಯುನೆಸ್ಕೋ ಹಾಗೂ ಇತರ ಸಂಘ–ಸಂಸ್ಥೆಗಳು ಕೈಗೊಂಡ ಕಾರ್ಯಗಳಿಂದ ತಿಳಿಯಬಹುದಾಗಿದೆ. ಹಂಪಿಯಲ್ಲಿರುವ ಹಲವಾರು ಸ್ಮಾರಕಗಳನ್ನು ಸಂರಕ್ಷಿಸಿದ್ದಲ್ಲದೇ ದೇವಾಲಯಗಳ ಬಿಡಿಭಾಗಗಳಾಗಿ ಅವಶೇಷಗಳನ್ನು ಸಹ ಜೀರ್ಣೋದ್ಧಾರ ಮಾಡಿದ್ದಾರೆ. ಈ ಸ್ಮಾರಕಗಳ ವಿಶಿಷ್ಠತೆ ಕುರಿತು ಹೇಳುವುದಾದರೆ ವಿಜಯನಗರದ ಕಟ್ಟಡಗಳು ಅಥವಾ ದೇವಾಲಯ ಅಥವಾ ರಾಜಗೃಹಗಳಾಗಿರಲಿ ಸಾಮಾನ್ಯವಾಗಿ ರಕ್ಷಣಾ ದೃಷ್ಟಿಯಿಂದ ಎತ್ತರವಾಗಿವೆಯಲ್ಲದೆ ವಿವಿಧ ಪ್ರಕಾರಗಳಿಂದ ಕೂಡಿವೆ. ಇಲ್ಲಿನ ಸ್ಮಾರಕಗಳು ಸೂಕ್ಷ್ಮ ಹಾಗೂ ಸುಂದರ ಕೆತ್ತನೆಗೆ ಪೂರಕವಾಗಿಲ್ಲ. ಕಾರಣ ಇಲ್ಲಿ ದೊರೆಯುವ ಅಧಿಕ ಗ್ರಾನೈಟ್ ಶಿಲೆಯ ಗುಣಗಳಿಂದ ಕಠಿಣವಾಗಿವೆ. ಈ ಶಿಲೆ ಕಠಿಣವಾಗಿರುವುದರಿಂದ ಇನ್ನೊಂದು ತರಹದಲ್ಲಿ ವರದಾನವಾಗಿದೆ. ಎತ್ತರವಾದ ಕಂಬಗಳು, ಛತ್ತಿನ ಹರವಾದ ಹಾಸುಗಲ್ಲುಗಳು ಎತ್ತರವಾದ ಮಂಟಪಗಳು, ಗೋಪುರಗಳು, ಮಹಲ್‌ಗಳು, ಕಲ್ಲಿನಲ್ಲಿ ಕೊರೆದು ನೀರು ಹರಿಸುವ ಕಾಲುವೆಗಳು, ಪುಷ್ಕರಣಿಗಳು, ಸ್ನಾನಗೃಹಗಳು, ಕೋಟೆಯ ಗೋಡೆಗಳು ಹಾಗೂ ಕೋಟೆಯ ದ್ವಾರಗಳು ಮುಂತಾದವು ಸರಳರೇಖೆಯಲ್ಲಿ ಚಲಿಸುವ ಕಟ್ಟಡಗಳನ್ನು ಕಟ್ಟಲು ಬಹಳ ಅನುಕೂಲವಾಗಿದೆ.

ಹಂಪಿ ಪರಿಸರದ ಸ್ಮಾರಕಗಳನ್ನು ವೀಕ್ಷಿಸಲು ವಿಜಯನಗರ ಕಾಲದಿಂದಲೂ ಇಂದಿನವರೆಗೂ ಕೂಡ ದೇಶ–ವಿದೇಶಗಳಿಂದ ನೂರಾರು ಪ್ರವಾಸಿಗರು ಬರುತ್ತಾರೆ. ಅವರಲ್ಲಿ ಕೆಲವರು ನೋಡುಗರಾದರೆ ಇನ್ನೂ ಕೆಲವರು ಸಂಶೋಧಕರಾಗಿರುತ್ತಾರೆ. ಇಂತಹ ಸಂಶೋಧಕರು ಬರವಣಿಗೆಗಾರರು ಹಂಪಿಯನ್ನು ಹಲವು ಆಯಾಮಗಳಲ್ಲಿ ತಮ್ಮದೇ ಆದ

ತಾತ್ವಿಕತೆಯ ಹಿನ್ನೆಲೆಯಲ್ಲಿ ನಿರೂಪಿಸಿದ್ದಾರೆ. ಹಂಪಿಯ ರಕ್ಷಣೆ ಕುರಿತು ಯುನೆಸ್ಕೋದ ಎಚ್ಚರಿಕೆಯಿಂದಾಗಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಪ್ರಾಧಿಕಾರ ಆರಂಭಿಸಿ ಅನೇಕ ಸ್ಮಾರಕಗಳನ್ನು ಸಂರಕ್ಷಣೆ ಮಾಡುವ ನಿಟ್ಟಿನಲ್ಲಿ ಕ್ರಮಕೈಗೊಂಡಿವೆ. ಯುನೆಸ್ಕೋ ಸಂಸ್ಥೆಯು ಹಂಪಿ ಪ್ರದೇಶಕ್ಕೆ ಧಕ್ಕೆ ತರುವ ಕೆಲಸ ನಡೆಯಬಾರದು ಎಂಬ ದೃಷ್ಟಿಯಿಂದ ತಮ್ಮ ಸಲಹೆ ಮೇರೆಗೆ ಹಂಪಿ ಅಭಿವೃದ್ಧಿ ಪ್ರಾಧಿಕಾರ 'ಮಾಸ್ಟರ್ ಪ್ಲಾನ್' ರಚಿಸಿ ಸ್ಮಾರಕಗಳನ್ನು ವಲಯಗಳನ್ನಾಗಿ ಮಾಡಿ ಸಂರಕ್ಷಿಸಲಾಗುತ್ತಿದೆ.

ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಚಾಲುಕ್ಯ ಅರಸರ ರಾಣಿಯರುಗಳ ಪೋಷಣೆಯಿಂದಾಗಿ ಪಟ್ಟದಕಲ್ಲಿನ ನೆಲದಲ್ಲಿ ವೈವಿಧ್ಯಮಯವಾದ ಉತ್ಕೃಷ್ಟ ದೇವಾಲಯಗಳು ನಿರ್ಮಾಣಗೊಂಡವು. ಅರಸರ ಔದಾರ್ಯದಿಂದ ಶಿಲ್ಪಿಗಳ ಕಲಾನೈಪುಣ್ಯತೆ ಬೆಸೆದುಕೊಂಡು ಈ ವಾಸ್ತು ರಚನೆಗಳು ವಿಶ್ವಪರಂಪರೆಯ ಕಲಾಕೃತಿಗಳೆನಿಸಿದವು. ಯುನೆಸ್ಕೋದ ವಿಶ್ವಪರಂಪರಾ ಸಮಿತಿಯು ಪಟ್ಟದಕಲ್ಲಿನ ಈ ದೇವಾಲಯ ಸಮೂಹವನ್ನು ೧೯೮೭ರಲ್ಲಿ ಜಾಗತಿಕ ಸೊತ್ತು ಎಂದು ಘೋಷಿಸಿದೆ. ಅಲ್ಲಿಂದ ಪ್ರಾಚೀನ ದೇವಾಲಯಗಳನ್ನು ಯುನೆಸ್ಕೋ ಸಂಸ್ಥೆಯ ಅಡಿಯಲ್ಲಿ ಪುರಾತತ್ವ ಸರ್ವೇಕ್ಷಣಾ ಇಲಾಖೆಯು ಸಂರಕ್ಷಿಸುವಲ್ಲಿ ಯಶಸ್ವಿಯಾಗುತ್ತಿದೆ. ಪಟ್ಟದಕಲ್ಲಿನ ಸಮೀಪದಲ್ಲಿರುವ ಜೈನ ದೇವಾಲಯದ ಮುಖ್ಯ ಭಾಗಗಳು ಬಹಳ ದುಸ್ಥಿತಿಯಲ್ಲಿದ್ದ ಕಾರಣ ದೇವಾಲಯದ ಜೀರ್ಣೋದ್ಧಾರವನ್ನು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಧಾರವಾಡ ವಲಯವು ಡಾ.ಎಸ್.ಟಿ. ವೆಂಕಟೇಶಯ್ಯ ಅಧೀಕ್ಷಕ ಪುರಾತತ್ವವಿದರು ಇವರ ಮಾರ್ಗದರ್ಶನದಲ್ಲಿ "ಭಗವಾನ್ ಮಹಾವೀರ ತೀರ್ಥಂಕರ ೨೬೦೦ನೆಯ ಜನ ಕಲ್ಯಾಣ ಮಹೋತ್ಸವ" ಆಚರಣೆಯ ಅಂಗವಾಗಿ ಹಮ್ಮಿಕೊಂಡ ಜೈನ ದೇವಾಲಯಗಳ ಸಂರಕ್ಷಣಾ ಯೋಜನೆ ಅಡಿಯಲ್ಲಿ ದೇವಾಲಯದ ಭಾಗಗಳನ್ನು ಬಿಚ್ಚಿ, ಛಾಯಾಚಿತ್ರ, ನಕ್ಷೆಗಳ ಮೂಲಕ ದಾಖಲಿಸಿಕೊಂಡು ವಾಸ್ತು ಭಾಗಗಳನ್ನು ತುಂಬಾ ಜಾಗರೂಕತೆಯಿಂದ ಹಂತ ಹಂತವಾಗಿ ವೈಜ್ಞಾನಿಕವಾಗಿ ದಾಖಲಿಸುತ್ತಾ ತುಕ್ಕು ನಿರೋಧಕ ಉಕ್ಕಿನ ಸಲಾಕಿಗಳನ್ನು ಉಪಯೋಗಿಸಿ ಜೋಡಿಸಿ ಪುನಃ ಮೊದಲಿನಂತೆ ಜೋಡಿಸಲಾಯಿತು. ಕಳೆದು ಹೋದ ವಾಸ್ತು ಭಾಗಗಳನ್ನು ಹೊಸದಾಗಿ ಸೇರಿಸಿ ನಿರ್ಮಿಸಲಾಗಿದೆ ಅದೇ ರೀತಿಯಾಗಿ ಸಂಗಮೇಶ್ವರ ದೇವಾಲಯ, ವಿರೂಪಾಕ್ಷ ದೇವಾಲಯಕ್ಕೆ ಹೊಂದಿಕೊಂಡಂತೆ ಮನೆಗಳನ್ನು ನಿರ್ಮಿಸಿಕೊಂಡಿರುವುದನ್ನು ತೆರವುಗೊಳಿಸಿ ದೇವಾಲಯಗಳ ಜೀರ್ಣೋದ್ಧಾರ ಮಾಡಿ ಸಂರಕ್ಷಣೆ ಮಾಡಿದ್ದಾರೆ.

ಭಾರತ ಸರ್ಕಾರದ ೧೯೦೪ರ ಪ್ರಾಚೀನ ಸ್ಮಾರಕಗಳ ಸಂರಕ್ಷಣಾ ಕಾಯ್ದೆ ಹಾಗೂ ೧೯೫೮ರ ಪ್ರಾಚೀನ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಹಾಗೂ ಅವಶೇಷಗಳ ಕಾಯ್ದೆಗಳಿಗನುಗುಣವಾಗಿ ಸ್ಥಳೀಯವಾಗಿ ಸ್ಮಾರಕ ಸಮೂಹಗಳ ಸಂರಕ್ಷಣೆಯ ಕುರಿತು ಅವುಗಳ ಪ್ರಾಮುಖ್ಯತೆ ಕುರಿತು ಸ್ಥಳೀಯರಿಗೆ, ಸ್ಥಳೀಯೇತರರಿಗೆ ತಿಳಿಸುವ ಪ್ರಯತ್ನವನ್ನು ಯುನೆಸ್ಕೋವಿನ ಅಂಗ ಸಂಸ್ಥೆಯಾದ "ಐಕಮಸ್" ಪ್ರತಿವರ್ಷ ಏಪ್ರಿಲ್ ೧೮ ನ್ನು ವಿಶ್ವ ಪರಂಪರೆಯ ದಿನವೆಂದು ಘೋಷಿಸಿದ್ದು ಅದರಿಂದ ಆ ದಿನ ಜನರನ್ನು ಪ್ರೋತ್ಸಾಹಿಸಲು ಪಟ್ಟದಕಲ್ಲು ಸ್ಮಾರಕಗಳ ಬಗೆಗೆ ಅರಿವು ಮೂಡಿಸಲು ಅನೇಕ ಕಾರ್ಯಕ್ರಮಗಳನ್ನು ನಡೆಸುವುದರ ಮೂಲಕ ಜನಸಾಮಾನ್ಯರಲ್ಲಿ ಸ್ಮಾರಕಗಳ ಬಗೆಗೆ ಗೌರವ ಒಲವನ್ನು ಹೆಚ್ಚಿಸುವ ದೃಷ್ಟಿಯಿಂದ ಪ್ರಾತ್ಯಕ್ಷಿಕೆ, ಭಿತ್ತಿ ಚಿತ್ರಗಳನ್ನು ಪ್ರದರ್ಶಿಸುವ ಮೂಲಕ ಜನರು ಸ್ಮಾರಕಗಳ ರಕ್ಷಣೆಯಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳಲು ಪ್ರೇರಣೆ ನೀಡಲಾಗುತ್ತಿದೆ. ಇತಿಹಾಸ ಉಳಿಸಿ ಬೆಳೆಸಿ ಎಂಬುದರ ಕುರಿತಾಗಿ ಯುನೆಸ್ಕೋ ಸಂಸ್ಥೆಯ ಮೂಲಕ ಐತಿಹಾಸಿಕ ಸ್ಮಾರಕಗಳನ್ನು ವಿಶ್ವಮಟ್ಟದಲ್ಲಿ ಗುರುತಿಸುವಲ್ಲಿ ಯಶಸ್ವಿಯಾಗುತ್ತಿದೆ.

**ಅಧ್ಯಯನದ ಫಲಿತಗಳು**

- ಅಭಿವೃದ್ಧಿಯ ಮಾದರಿಗಳ ಕುರಿತು ವಿವೇಚಿಸುವ ಸಂದರ್ಭದಲ್ಲಿ ಸಂಬಂಧಿಸಿದ ರಾಷ್ಟ್ರ ಹಾಗೂ ರಾಜ್ಯ ಸರಕಾರದ ಸಂಸ್ಥೆಗಳು ಪಾರಂಪರಿಕ ರಚನೆಗಳ ಸಂರಕ್ಷಣೆಯಲ್ಲಿ ತಾಂತ್ರಿಕ ವಿಷಯಗಳು ಮತ್ತು ತಾಂತ್ರಿಕ ನೀತಿಗಳನ್ನು ಭೌತಿಕ ಹಾಗೂ ಬೌದ್ಧಿಕವಾಗಿ ಆಲೋಚಿಸುವುದು ಒಳಿತು. ಸ್ಮಾರಕಗಳ ಸಂರಕ್ಷಣೆಗೆ ಜಾಗೃತಿ ಮೂಡಿಸುವ ಮೂಲಕ ಸ್ಥಳೀಯ ಸೌಲಭ್ಯಗಳನ್ನು ಒದಗಿಸಬೇಕು, ಮುಖ್ಯವಾಗಿ ಸ್ಮಾರಕಗಳಲ್ಲಿ ಫಲಕಗಳು, ಅದರಲ್ಲಿ ಸಂಕ್ಷಿಪ್ತ ವಿವರಣೆಯನ್ನು ಒದಗಿಸಿರುವುದು ಆದಾಗ್ಯೂ ನೆಲೆಯ ಗಮನಾರ್ಹ ಲಕ್ಷಣಗಳು ಮತ್ತು ಪ್ರಾಮುಖ್ಯತೆಯನ್ನು ಅರ್ಥಮಾಡಿಕೊಳ್ಳಲು ನೆಲೆಯ ನಿರೂಪಣಾಕಾರರ ಸೇವೆಗಳು ಅಗತ್ಯವಾಗಿವೆ.

- ರಾಜ್ಯದ ವಿವಿಧೆಡೆ ಅನೇಕ ಸ್ಮಾರಕಗಳು, ಐತಿಹಾಸಿಕ ತಾಣಗಳು ಶೋಚನೀಯ ಸ್ಥಿತಿಯಲ್ಲಿವೆ. ದನಗಳ ಕೊಟ್ಟಿಗೆಯಾಗಿ, ಕಸ ಸುರಿಯುವ ಸ್ಥಳವಾಗಿ, ಅಕ್ರಮ ಚಟುವಟಿಕೆಯ ಕೇಂದ್ರವಾಗಿ ಇಂತಹ ಸ್ಥಳಗಳು ದುರ್ಬಳಕೆ ಆಗುತ್ತಿರುವುದು ಎಲ್ಲರಿಗೂ ಗೊತ್ತಿರುವಂತಹ ವಾಸ್ತವವಾದರೂ ಇವುಗಳ ರಕ್ಷಣೆಯ ಹೊಣೆ ಹೊತ್ತಿರುವವರಲ್ಲಿ ಜಾಣ ಕುರುಡುತನ ಆವರಿಸಿರುವುದು ದುರದೃಷ್ಟಕರ. ಈಗಲಾದರೂ ಅವರು ಎಚ್ಚೆತ್ತುಕೊಂಡು ಇಂತಹ ತಾಣಗಳ ದುರ್ಬಳಕೆ ತಡೆಯಬೇಕು. ರಕ್ಷಣೆಗೆ ಹೆಚ್ಚಿನ ಮುತುವರ್ಜಿವಹಿಸಬೇಕು ಎಂಬ ಅಂಶಗಳನ್ನು ಅಧ್ಯಯನದ ಹಿನ್ನೆಲೆಯಲ್ಲಿ ರೂಪಿಸಲಾಗಿದೆ.

- ವಿಶ್ವಪರಂಪರಾ ತಾಣವಾಗಿ ಗುರುತಿಸಿಕೊಂಡಿರುವ ಕರ್ನಾಟಕದ ಸಾಂಸ್ಕೃತಿಕ ತಾಣಗಳಾದ ಹಂಪಿ ಮತ್ತು ಪಟ್ಟದಕಲ್ಲು ತಾಣಗಳಿಗೆ ಅವುಗಳನ್ನು ವೀಕ್ಷಣೆ ಮಾಡಲು ಬರುವ ಪ್ರವಾಸಿಗರಿಗೆ ಮೊದಲು ಅವಶ್ಯಕವಾದ ಮೂಲಭೂತ ಸೌಲಭ್ಯಗಳನ್ನು ದೊರಕಿಸಿಕೊಡಬೇಕು. ಮತ್ತು ಅವುಗಳ ಬಗ್ಗೆ ಸಂಶೋಧನೆ ಮಾಡಲು ಬರುವ ದೇಶಿ-ವಿದೇಶಿಯ ಸಂಶೋಧನಾರ್ಥಿಗಳಿಗೆ ಇವುಗಳ ಕುರಿತು ಸ್ಥಳದಲ್ಲಿಯೇ ಪ್ರಾಥಮಿಕ ಮಾಹಿತಿಗಳಾದ ಈ ತಾಣಗಳಲ್ಲಿರುವ ಒಟ್ಟು ಸ್ಮಾರಕಗಳ ವರದಿ, ಅವುಗಳಿಗೆ ಸಂಬಂಧಿಸಿದಂತೆ ಮಾಹಿತಿ ಒದಗಿಸುವ ಒಂದು ಗ್ರಂಥಾಲಯವನ್ನು ಸ್ಥಾಪಿಸಬೇಕು. ಹಾಗೂ ಸಂಬಂಧಿಸಿದ ಸೌಲಭ್ಯವನ್ನು ಒದಗಿಸಲು ಏನೆಲ್ಲಾ ಕ್ರಮಗಳನ್ನು ತೆಗೆದುಕೊಳ್ಳಬಹುದಾಗಿದೆ ಎಂಬ ಮಾಹಿತಿಯನ್ನು ನೀಡುವ ಪ್ರಯತ್ನ ಮಾಡಲಾಗಿದೆ.

- ಕರ್ನಾಟಕದಲ್ಲಿ ಹಂಪಿ ಮತ್ತು ಪಟ್ಟದಕಲ್ಲು ತಾಣಗಳ ಜೊತೆಗೆ ಇತರೆ ಸಾಂಸ್ಕೃತಿಕ ತಾಣಗಳು ನೈಸರ್ಗಿಕ ತಾಣಗಳಿವೆ, ಇವುಗಳನ್ನು ಸಹ ವಿಶ್ವಪರಂಪರೆ ಪಟ್ಟಿಗೆ ಸೇರ್ಪಡೆ ಮಾಡಿದರೆ ಕರ್ನಾಟಕದ ಮತ್ತಷ್ಟು ಕಲೆ-ವಾಸ್ತುಶಿಲ್ಪದ ವೈಭವ ಪ್ರಾಚೀನತೆ ಹೆಚ್ಚಾಗುತ್ತದೆ ತಾಣಗಳ ಸಂಖ್ಯೆ ಹೆಚ್ಚಾಗುತ್ತದೆ. ಅಲ್ಲದೇ ಈ ಮೂಲಕ ಅಂಥ ಸ್ಥಳಗಳನ್ನು ಪ್ರವಾಸೋದ್ಯಮದಲ್ಲಿ ಒಳಗೊಳ್ಳುವಂತೆ ಮಾಡಬಹುದಾಗಿದೆ. ಅಂಥ ಸಂಗತಿಗಳಿಗೆ ಪೂರಕವಾಗಿ ಏನೆಲ್ಲಾ ಕ್ರಮಗಳನ್ನು ತೆಗೆದುಕೊಳ್ಳಬಹುದಾಗಿದೆ ಎಂಬುದನ್ನು ವಿಶ್ಲೇಷಿಸುವ ಪ್ರಯತ್ನದಲ್ಲಿ ಈ ಪ್ರಬಂಧವು ಸಫಲಗೊಂಡಿದೆ ಎಂದು ಹೇಳಬಹುದು.

- ವಿಶ್ವಪರಂಪರಾ ತಾಣಗಳನ್ನು ಗುರುತಿಸುವಂತಹ ಒಂದು ಪ್ರತ್ಯೇಕ ಬಣ್ಣದ ಮಾಹಿತಿ ಫಲಕವನ್ನು ಕರ್ನಾಟಕದಲ್ಲಿರುವ ವಿಶ್ವಪರಂಪರಾ ತಾಣಗಳಲ್ಲಿರುವ ಸ್ಮಾರಕಗಳಿಗೆ ಹಾಕಬೇಕು. ಇದರಿಂದ ಯಾವ ತಾಣ ವಿಶ್ವಪರಂಪರೆಗೆ ಸೇರ್ಪಡೆಯಾಗಿದೆ ಈ ಸ್ಮಾರಕದ ಸ್ಥಿತಿ ಅವುಗಳ ರಕ್ಷಣೆಗೆ ಕೈಗೊಳ್ಳಬಹುದಾದ ಮಾಹಿತಿಗಳನ್ನು ಬರುವ ಪ್ರವಾಸಿಗರಿಂದ ಪ್ರತಿಕ್ರಿಯೆ (Feed Back) ಪಡೆದು ಈ ಸ್ಮಾರಕದ ಅಭಿವೃದ್ಧಿ ಮಾಡಬಹುದು.

- ವಿಶ್ವಪರಂಪರಾ ತಾಣಗಳು ಪ್ರವಾಸೋದ್ಯಮದ ಒಂದು ಅಸ್ಮಿತವಾದ ಸಾಧ್ಯತೆಗಳನ್ನು ಒಳಗೊಂಡಿರುವ ಉದ್ಯಮವಾಗಿದೆ. ಹಂಪಿಗೆ ಭೇಟಿ ನೀಡುವುದು ೧೩ನೇ ಶತಮಾನದ ಪೂರ್ವಾರ್ಧದಿಂದ ಆರಂಭವಾಗಿ ೨೧ನೇ ಶತಮಾನದವರೆಗೂ ಜಾರಿಯಲ್ಲಿದೆ. ಇಂಥ ಅಂಕಿ ಅಂಶಗಳಿಂದ ಗುರುತಿಸಬಹುದಾದ ಮುಖ್ಯ ಸಂಗತಿಗಳೇನೆಂದರೆ ಹಂಪಿಯ ಇತಿಹಾಸ ತಿಳುವಳಿಕೆಯ ಮಹತ್ವ ಪ್ರಪಂಚದಾಂತ್ಯ ವಿಸ್ತರಣೆಗೊಂಡು ಹೊಸ ಆಯಾಮಗಳಿಗೆ ಎಡೆ ಮಾಡಿಕೊಡುತ್ತದೆ. ಮುಖ್ಯವಾಗಿ ಪ್ರವಾಸೋದ್ಯಮವು ಸರ್ಕಾರದ ಉದ್ಯಮವಾಗಿದ್ದು ಇದು

ಹಂಪಿಯ ಗತ ವೈಭವವನ್ನು ನೋಡಲು ಬರುವ ಜನರಿಗೆ ಸಹಾಯಕವಾಗಿ ಕೆಲಸ ಮಾಡುತ್ತಿದೆ. ಇದು ಭಾರತದ ಎಲ್ಲ ರಾಜ್ಯಗಳಿಗೂ ಅನ್ವಯಿಸುವಂತಹದ್ದು ಈ ಹಿನ್ನೆಲೆಯಲ್ಲಿ ಪ್ರವಾಸೋದ್ಯಮವು ಹಂಪಿಯ ಸ್ಮಾರಕಗಳನ್ನು ಮತ್ತು ಇತಿಹಾಸವನ್ನು ಕಾಯ್ದಿರಿಸಲು ಒಂದು ಮಾಧ್ಯಮವಾಗಿ ಕೆಲಸ ಮಾಡುತ್ತಿದೆ, ಇದರ ಜೊತೆಗೆ ಪುರಾತತ್ವ ಇಲಾಖೆಯೂ ಹಂಪಿಯನ್ನು ನೋಡುವ ಮತ್ತು ಅದನ್ನು ಕಟ್ಟುವ ಕೆಲಸ ಮಾಡುತ್ತಿದೆ. ಹಾಗಾಗಿ ಸಾರ್ವಜನಿಕರು ಹಾಗೂ ಸಂಬಂಧಿಸಿದ ಇಲಾಖೆಗಳು ಸಮನ್ವಯಗೊಳಿಸಿಕೊಂಡು ಹೇಗೆ ಉತ್ತಮವಾದ ಫಲಿತಾಂಶ ಪಡೆಯಬಹುದೆಂದು ನಿರೂಪಿಸುವ ಪ್ರಯತ್ನ ಮಾಡಲಾಗಿದೆ.

- ಹಂಪಿಯಲ್ಲಿರುವ ವಿಶ್ವಪಾರಂಪರಿಕ ತಾಣಗಳು ರಾಷ್ಟ್ರೀಯ ಸಂರಕ್ಷಣಾ ಕಾಯ್ದೆ ೧೯೫೮ರ ನಿಯಮದಂತೆ ರಕ್ಷಣೆಯಲ್ಲಿ ಇಲ್ಲ. ವಿಶ್ವಪರಂಪರೆ ಪಟ್ಟಿಯಲ್ಲಿರುವ ಹಂಪಿಯ ಸ್ಮಾರಕಗಳಿಗೆ ಕೇವಲ ಸ್ಮಾರಕದ ಮುಂಭಾಗದಲ್ಲಿ ಸಂರಕ್ಷಣಾ ಸ್ಮಾರಕ ಎಂದು ನಾಮಫಲಕಗಳಿವೆ. ಆದರೆ ವಾಸ್ತವವಾಗಿ ಆ ಸ್ಮಾರಕವು ಸಂರಕ್ಷಣೆಯಲ್ಲಿದೆಯೇ ಎಂದು ನೋಡಿದರೆ ಸ್ಮಾರಕದ ಸುತ್ತಲಿನ ದೇವಾಲಯದ ರಕ್ಷಣಾ ಗೋಡೆಯು ಪಾಳುಬಿದ್ದು ಅಸ್ತವ್ಯಸ್ಥವಾಗಿರುವುದನ್ನು ಗಮನಿಸಬಹುದು. ಉದಾ :- ಪಟ್ಟಾಭಿರಾಮ ದೇವಾಲಯ, ಚಂದ್ರಶೇಖರ ದೇವಾಲಯ, ಅನಂತಶಯನಗುಡಿ, ಪ್ರಾಚೀನ ಶಿವದೇವಾಲಯ ಮುಂತಾದವುಗಳು. ಹಾಗೂ ಪಟ್ಟದಕಲ್ಲಿನಲ್ಲಿರುವ ಜೈನ ನಾರಾಯಣ ದೇವಾಲಯ. ಇಂಥ ಸ್ಮಾರಕಗಳ ಕುರಿತು ಸೂಕ್ತ ಪ್ರಾಧಿಕಾರವು ತೆಗೆದುಕೊಳ್ಳಬಹುದಾದ ಅಂಶಗಳ ಕುರಿತು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

- ಕಾಲೇಜುಗಳಲ್ಲಿ ಎನ್.ಎಸ್.ಎಸ್. (ರಾಷ್ಟ್ರೀಯ ಸೇವಾ ಯೋಜನೆ) ಶಿಬಿರವನ್ನು ಏರ್ಪಡಿಸುವಂತಹ ಸಂದರ್ಭದಲ್ಲಿ ಆ ಹಳ್ಳಿಯ ಸಾಂಸ್ಕೃತಿಕ ಇತಿಹಾಸ ಕುರಿತು ಒಂದು ದಿನದ ವಿಚಾರ ಸಂಕಿರಣವನ್ನು ಏರ್ಪಡಿಸಿ ಆ ಹಳ್ಳಿಯಲ್ಲಿನ ಪ್ರಾಚೀನ ಸ್ಮಾರಕಗಳ ಹಿನ್ನೆಲೆ ಮತ್ತು ಇತಿಹಾಸವನ್ನು ಸ್ಥಳೀಯ ಜನರಿಗೆ ತಿಳಿಸಿ ಅವುಗಳ ಸಂರಕ್ಷಣೆಯ ಕುರಿತು ಹಳ್ಳಿಯ ಜನರಿಗೆ ತಿಳಿಸಿಕೊಟ್ಟು ಅವುಗಳ ಮಹತ್ವವನ್ನು ತಿಳಿಸಿಕೊಡಬೇಕು. ಸಾಂಸ್ಕೃತಿಕ ಶಿಕ್ಷಣ ಕಾರ್ಯಕ್ರಮವಾಗಿ ಶಾಲೆಯಲ್ಲಿನ ಮಕ್ಕಳಿಗೆ ಪಠ್ಯಪುಸ್ತಕದಲ್ಲಿ ಐತಿಹಾಸಿಕ ಸ್ಥಳಗಳ ವಿವರಣೆಯನ್ನು ಮಾತ್ರ ನೀಡಲಾಗಿದ್ದು ಅವುಗಳ ಜೊತೆಗೆ ಸ್ಮಾರಕಗಳ ಮಹತ್ವ ಮತ್ತು ಸಂರಕ್ಷಣೆಯ ಕುರಿತು ಮಾಹಿತಿ ನೀಡಬೇಕು ಎಂಬ ಆಶಯಗಳನ್ನು ಪ್ರಸ್ತುತ ಪ್ರಬಂಧದಲ್ಲಿ ಪ್ರಮುಖವಾಗಿ ಚರ್ಚಿಸಲಾಗಿದೆ.

- ಭಾರತದಲ್ಲಿ ಏಪ್ರಿಲ್-೧೮ನ್ನು ವಿಶ್ವಪರಂಪರೆಯ ದಿನವಾಗಿ, ನವೆಂಬರ್ ೧೯ ರಿಂದ ೨೫ರವರೆಗೆ ವಿಶ್ವಪರಂಪರೆಯ ಸಪ್ತಾಹ ದಿನವೆಂದು ಆಚರಿಸುತ್ತಾರೆ, ಇದು ಕೇವಲ

ಪ್ರವಾಸೋದ್ಯಮ ಇಲಾಖೆಗಳಲ್ಲಿ ಸೀಮಿತವಾಗಿ ಆಚರಿಸುವ ದಿನವಾಗಿದೆಯೇ ಹೊರತು ಪರಂಪರೆಯ ತಾಣಗಳ ಸಂರಕ್ಷಣೆಯ ಕುರಿತು ಸಾಮಾನ್ಯ ಜನರಿಗೆ ತಿಳಿಸುವಂತಹ ಯಾವುದೇ ಕಾರ್ಯಕ್ರಮವಾಗಿಲ್ಲ. ಆ ಕುರಿತು ವಿವರಗಳನ್ನು ಚರ್ಚಿಸಿ ವಿವರಿಸಲಾಗಿದೆ.

- ಶಾಲಾ-ಕಾಲೇಜುಗಳಲ್ಲಿ ರಾಷ್ಟ್ರೀಯ ಹಬ್ಬಗಳನ್ನು ಆಚರಿಸುವ ರೀತಿಯಲ್ಲಿ ರಾಷ್ಟ್ರೀಯ ಸ್ಮಾರಕ ದಿನವನ್ನು ಸ್ಥಳೀಯ ಮಟ್ಟದಲ್ಲಿ ಆಚರಿಸಿ ಸಾಮಾನ್ಯ ಜನರಿಗೆ ಅವುಗಳ ಮಹತ್ವವನ್ನು ತಿಳಿಸಿಕೊಟ್ಟು ಅವುಗಳ ಸಂರಕ್ಷಣೆ ಕೈಗೊಳ್ಳಬೇಕಾದ ಕಾರ್ಯಯೋಜನೆಗಳನ್ನು ಕುರಿತು ಆ ದಿನ ತಿಳಿಸಿಕೊಡಬೇಕು.

- ಪುರಾತನ ಐತಿಹಾಸಿಕ ತಾಣಗಳಲ್ಲಿ ನಿಧಿ ಇರಬಹುದು ಎಂದು ಭಾವಿಸಿ ಅಮೂಲ್ಯ ಶಿಲ್ಪಸಿರಿಯನ್ನು ನಾಶಮಾಡುವ ಪ್ರವೃತ್ತಿ ಹೆಚ್ಚುತ್ತಿದೆ. ಐತಿಹಾಸಿಕ ಮಹತ್ವದ ಸ್ಥಳಗಳು ಹಂಪಿಯಲ್ಲಿನ ವಿಷ್ಣುದೇವಾಲಯದ ಪ್ರಾಕಾರದ ಕಂಬಗಳನ್ನು ಹಾಗೂ ನವವೃಂದಾವನವನ್ನು ಹಾಳು ಮಾಡಿರುವುದು, ಪಾರಂಪರಿಕ ತಾಣಗಳ ಸಂಸ್ಕೃತಿ ಹಾಗೂ ಇತಿಹಾಸದ ಬಗ್ಗೆ ನಮ್ಮ ಜನರಿಗೆ ಗೌರವ ಮತ್ತು ಅರಿವಿನ ಕೊರತೆಯಿದೆ ಎಂಬುದು ಇಂತಹ ಘಟನೆಗಳಿಂದ ತಿಳಿಯುತ್ತದೆ, ಪಾರಂಪರಿಕ ತಾಣಗಳ ರಕ್ಷಣೆಗೆ ನೀಡಬೇಕಾದಷ್ಟು ಗಮನವನ್ನು ನೀಡುತ್ತಿಲ್ಲ ಎಂಬುದು ಕೂಡ ವಿಷಾದದ ವಿಚಾರ. ಅಂಥ ಮಹತ್ವದ ವಿಚಾರವನ್ನು ಜನಸಾಮಾನ್ಯರಿಗೂ ತಿಳಿಸಲು ಸರಕಾರವು ತೆಗೆದುಕೊಳ್ಳಬಹುದಾದ ಕ್ರಮಗಳ ಕುರಿತು ವಿವರಿಸಲಾಗಿದೆ.

- ಪಾರಂಪರಿಕವಾಗಿ ಸುರಕ್ಷಿತ ಸಂರಕ್ಷಣಾ ಶಿಕ್ಷಣದಿಂದ ಅಂತರ್‌ಶಿಸ್ತೀಯವಾಗಿ ಕೇವಲ ಓದು ಬರಹಗಾರರಿಗಷ್ಟೇ ಅಲ್ಲದೆ ಸ್ಥಳೀಯ ನಾಗರೀಕರಿಗೂ ಸಂರಕ್ಷಣಾ ಬಗೆಗಿನ ಜ್ಞಾನವನ್ನು ತಿಳಿಸಬಹುದು. ಸ್ಮಾರಕಗಳ ಸಮೂಹದಲ್ಲಿ ಪಾರಂಪರಿಕ ನಡಿಗೆ, ಐತಿಹಾಸಿಕ ಮಹತ್ವ, ಸ್ಮಾರಕಗಳ ವಿಶಿಷ್ಟತೆ ತಿಳಿಸುವ ಪ್ರಯತ್ನದ ಜೊತೆಗೆ ನಾಗರೀಕರಿಗೆ ಸ್ಮಾರಕಗಳನ್ನು ಹೇಗೆ ನಿರ್ವಹಿಸಬೇಕೆಂಬ ಶಿಕ್ಷಣ ನೀಡಿದರೆ ಖಂಡಿತವಾಗಿಯೂ ಅವರು ಇಂತಹ ಕಾರ್ಯಕ್ರಮಗಳಿಂದ ಪ್ರೇರೇಪಿತರಾಗಬಲ್ಲರು.

- ಪಾರಂಪರಿಕ ರಚನೆಗಳು ಉದ್ದೇಶಿತ ಗುರಿಯನ್ನು ಸಾಧಿಸಲು, ಪಾರಂಪರಿಕ ರಚನೆಗಳ ಸುರಕ್ಷತೆಗಾಗಿ ಏಕೀಕೃತ ಸಂಶೋಧನೆ, ಶಿಕ್ಷಣ ಮತ್ತು ಉಪಯೋಗಕಾರಿ ಚಟುವಟಿಕೆಗಳನ್ನು ಪ್ರಾರಂಭಿಸುವ ಮೂಲಕ ರಾಷ್ಟ್ರೀಯ ಜ್ಞಾನಶಾಖೆಯನ್ನು ಅಭಿವೃದ್ಧಿಪಡಿಸಬೇಕು.

- ಯುನೆಸ್ಕೋ ತನ್ನ ಪ್ರಕಟನೆಯಲ್ಲಿ ಸ್ಪಷ್ಟವಾಗಿ ಹೀಗೆ ಹೇಳಿದೆ 'ಯಾವುದೇ ಪಾರಂಪರಿಕ ತಾಣದ ಒಡೆತನ ಯುನೆಸ್ಕೋಗೆ ಸೇರಿಲ್ಲ ಬದಲು ಅದು ಜನರಿಂದ ಸಂರಕ್ಷಣೆ ಪಡೆಯಬೇಕು. ಇಂಥ ತಾಣವು ಸಂರಕ್ಷಣೆಗೆ ಯೋಗ್ಯ ಎನ್ನುವುದನ್ನಷ್ಟೇ ಸಂಸ್ಥೆ ತಿಳಿಸಿಕೊಡುತ್ತದೆ.' ಆಯಾ ದೇಶದ ಸರ್ಕಾರವೇ ಸಂರಕ್ಷಣೆಯ ಹೊಣೆ ಹೊರಬೇಕು. ಇದರಲ್ಲಿ ಏನಾದರೂ ಲಾಭವಿದೆಯೇ? ಒಂದರ್ಥದಲ್ಲಿ ಇದೆ ಏಕೆಂದರೆ ಒಂದು ತಾಣವನ್ನು ವಿಶ್ವಪಾರಂಪರಿಕ ತಾಣವೆಂದು ಗುರುತಿಸಿದರೆ ಸ್ಥಳೀಯ ವ್ಯಾಪಾರ-ವಹಿವಾಟು ಹೆಚ್ಚುತ್ತದೆ ಹಾಗೂ ಜೊತೆಗೆ ನಮ್ಮದು ಎಂಬ ಪ್ರೀತಿಯು ಕೂಡಾ ಬೆಳೆಯುತ್ತದೆ.

- ಕರ್ನಾಟಕದಲ್ಲಿರುವ ಮತ್ತೊಂದು ಸಾಂಸ್ಕೃತಿಕ ತಾಣವಾದ ತಲಕಾಡು ತಾಣಕ್ಕೆ ಐತಿಹಾಸಿಕ ಚರಿತ್ರೆ ಇದ್ದು  ಕಾವೇರಿಯ ವಿಶಿಷ್ಟ ಬಳುಕು, ಕಲ್ಲುಸವೆತದಿಂದ ತಾನೇ ಭರ್ತಿ ಮಾಡಿಕೊಂಡ ಮರಳರಾಶಿ, ಇತ್ತ ಎರಡು ಬೆಟ್ಟಗಳ ನಡುವೆ ಕೊಳ್ಳೆಗಾಲದಿಂದ ಬೀಸುವ ಗಾಳಿಯು ಮರಳನ್ನು ತೂರುವುದು, ಸೇರುವುದು ವಿಜ್ಞಾನಿಗಳ ಗಮನಕ್ಕೆ ಬಂದಿದೆಯೇ ಹೊರತು ಸರ್ಕಾರಕ್ಕಲ್ಲ ಜಗತ್ತಿನಲ್ಲಿ ಎಲ್ಲೂ ತಲಕಾಡಿನಂಥ ರಚನೆಯೇ ಇಲ್ಲ ಎಂಬುದು ಉತ್ಪ್ರೇಕ್ಷೆಯ ಮಾತಲ್ಲ.

- ಕರ್ನಾಟಕದಲ್ಲಿನ ಉಡುಪಿ ಜಿಲ್ಲೆಯ ಮಲ್ಪೆ ಬಳಿ ಸೇಂಟ್ ಮೇರಿ ದ್ವೀಪವಿದೆ ಆರೂವರೆ ಕೋಟಿ ವರ್ಷಗಳ ಹಿಂದೆ ಅಂದರೆ ಡೈನೋಸಾರ್‌ಗಳು ಜಗತ್ತನ್ನು ಆಳುತ್ತಿದ್ದ ಕಾಲದಲ್ಲಿ ಇಲ್ಲಿ ಜ್ವಾಲಾಮುಖಿ ಸ್ಫುರಿಸಿದ ಲಾವಾರಸವು ಶಿಲ್ಪಿಯು ಕಡೆದಂತೆ ಕಂಬಾಕೃತಿ ತಳೆದು ಅಂತರರಾಷ್ಟ್ರೀಯಮಟ್ಟದಲ್ಲಿ ಖ್ಯಾತಿಯಾಗಿದೆ. ಕ್ಯಾಲಿಫೋರ್ನಿಯಾದ ಬಳಿಯಿರುವ ಡೇವಿಲ್ಸ್ ಪೋಸ್ಟ್ ಪೈಲ್, ಉತ್ತರ ಐರ್ಲೆಂಡಿನ ಜೈಂಟ್ ಕಾಸ್ವೆ, ಸ್ಕಾಟ್‌ಲೆಂಡಿನ ಸ್ಟಾಫ್ ದ್ವೀಪದಲ್ಲಿನ ಫಿಂಗಲ್ಸ್ ಕೇವ್ಸ್, ಈ ಸ್ಥಳಗಳಲ್ಲಿ ಮಾತ್ರ ಇಂಥ ರಚನೆಗಳಿವೆ. ಅಲ್ಲಿನ ವಿಜ್ಞಾನಿಗಳಿಗೆ ನಮ್ಮ ಮಲ್ಪೆ ಬಳಿಯ ದ್ವೀಪ ಗೊತ್ತು, ಆದರೆ ವೈಜ್ಞಾನಿಕ ತಿಳಿವನ್ನು ಸರ್ಕಾರ ಪುರಸ್ಕರಿಸುವುದು ಯಾವಾಗ? ಅಮೇರಿಕಾದ 'ಸ್ಟಾಚ್ಯು ಆಫ್ ಲಿಬರ್ಟಿ' ವಿಶ್ವಪಾರಂಪರಿಕ ತಾಣವಾಗಿ ಪುರಸ್ಕೃತವಾಗಿದೆ, ನಮ್ಮ ಶ್ರವಣಬೆಳಗೊಳದ ಬಾಹುಬಲಿಗೆ ಏಕೆ ಇಲ್ಲ? ಬಾದಾಮಿ, ಐಹೊಳೆ, ಬೇಲೂರು-ಹಳೇಬೀಡುಗಳಿಗೆ ಏಕೆ ಸ್ಥಾನವಿಲ್ಲ.?

- ಐತಿಹಾಸಿಕ ಸ್ಮಾರಕಗಳನ್ನು ರಕ್ಷಣೆ ಮಾಡಲು ಪ್ರತಿ ಜಿಲ್ಲೆ ಮತ್ತು ತಾಲ್ಲೂಕು ಹಳ್ಳಿಯಲ್ಲಿ ಒಂದು ಐತಿಹಾಸಿಕ ಅಥವಾ ದೇವಾಲಯದ ಹೆಸರಿನಲ್ಲಿ ಸಂಘ-ಸಂಸ್ಥೆಗಳನ್ನು ನಿರ್ಮಿಸಿಕೊಂಡು ಅದರ ರಕ್ಷಣೆಯನ್ನು ಮಾಡಬೇಕು. ಪ್ರತಿ ತಿಂಗಳು ಗ್ರಾಮ ಸಭೆಯನ್ನು ನಡೆಸುವಾಗ ಆ ಹಳ್ಳಿಯ ಮೂಲಭೂತ ಸೌಕರ್ಯಗಳ ಕುರಿತು ಚರ್ಚಿಸುವ ರೀತಿಯಲ್ಲಿಯೇ ನೀರಿನ ಸಮಸ್ಯೆ,

ಶೌಚಾಲಯಗಳ ನಿರ್ಮಾಣ ಇವುಗಳ ಜೊತೆಗೆ ತಮ್ಮ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಲ್ಲಿನ ಪುರಾತನ ದೇವಾಲಯಗಳ ಜೀರ್ಣೋದ್ಧಾರ ಕೈಗೊಳ್ಳುವ ಮತ್ತು ಸಂರಕ್ಷಣೆ ಮಾಡುವುದರ ಕುರಿತು ವಿಷಯವನ್ನು ಕಡ್ಡಾಯವಾಗಿ ಚರ್ಚಿಸಿ ಅವುಗಳ ಕುರಿತು ತೆಗೆದುಕೊಂಡ ತೀರ್ಮಾನಗಳು ಮತ್ತು ಕಾರ್ಯಯೋಜನೆಯನ್ನು ಸರ್ಕಾರದ ಮೂಲಕ ಪರಿಶೀಲಿಸಿದಾಗ ಸ್ಮಾರಕಗಳ ಸಂರಕ್ಷಣೆಯನ್ನು ಒಂದು ಸುವ್ಯವಸ್ಥಿತ ರೀತಿಯಲ್ಲಿ ಸಂರಕ್ಷಿಸಬಹುದಾಗಿದೆ.

- ರಾಜ್ಯ ಸರ್ಕಾರವು ರಾಜ್ಯದ ಅಪರೂಪದ ತಾಣಗಳನ್ನು ಪಟ್ಟಿ ಮಾಡಲು ತಜ್ಞರನ್ನು ನೇಮಿಸಿ ವರದಿಯನ್ನು ಯುನೆಸ್ಕೋಗೆ ಸಲ್ಲಿಸಬಹುದು. ಸರ್ಕಾರದ ಒಲವಿದ್ದರೆ ಮಾತ್ರ ಇದು ಸಾಧ್ಯ, ಯುನೆಸ್ಕೋದಲ್ಲಿ ಇನ್ನೊಂದು ಅವಕಾಶವಿದೆ, ತಾತ್ಕಾಲಿಕ ಪಟ್ಟಿಗೆ ಬಡ್ತಿ ಸಿಕ್ಕಿದರೆ ಮುಂದೆ ಖಾಯಂ ವಿಶ್ವಪಾರಂಪರಿಕ ತಾಣಗಳಾಗಲು ಅವಕಾಶವಿದೆ. ಇಂಥೆಲ್ಲಾ ಆಶಯಗಳನ್ನು ಇಟ್ಟುಕೊಂಡು ಪ್ರಸ್ತುತ ಅಧ್ಯಯನ ಪ್ರಬಂಧವನ್ನು ರಚಿಸುವ ಪ್ರಯತ್ನ ಮಾಡಲಾಗಿದೆ.

# ಪರಾಮರ್ಶನ ಗ್ರಂಥಗಳು

**ಪ್ರಾಥಮಿಕ ಆಕರಗಳು**

ಅಂಬಳಿಕೆ ಹಿರಿಯಣ್ಣ (ಸಂ.), ೨೦೦೯, ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಎಚ್ಚೆಸ್ಕೆ(ಸಂ.), ೧೯೮೫, ಅವಲೋಕನ, ಕರ್ನಾಟಕ ಪರಂಪರೆಯ ಸಮೀಕ್ಷೆ, ವಿಶ್ವಕನ್ನಡ ಸಮ್ಮೇಳನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಮೈಸೂರು.

ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ–೧–೩, ಗ್ಯಾಸೆಟಿಯರ್ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

ಕರ್ನಾಟಕ ರಾಜ್ಯ ಗ್ಯಾಸೆಟಿಯರ್, (ದಶವಾರ್ಷಿಕ ಪುರವಣಿ–೧೯೮೩–೯೩), ೧೯೯೬, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

ಕರ್ನಾಟಕ ಕೈಪಿಡಿ, ೧೯೯೬, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

ತಂಬಂಡ ವಿಜಯ್ ಪೂಣಚ್ಚ(ಸಂ.), ೨೦೦೧, ಚರಿತ್ರೆ ವಿಶ್ವಕೋಶ–೪, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇವರಕೊಂಡಾ ರೆಡ್ಡಿ(ಸಂ.), ೧೯೯೮, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಬಳ್ಳಾರಿ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇವರಕೊಂಡಾ ರೆಡ್ಡಿ(ಸಂ.), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೨, ಕೊಪ್ಪಳ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇವರಕೊಂಡಾ ರೆಡ್ಡಿ(ಸಂ.), ೨೦೦೦, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೩, ಹಂಪಿ ಶಾಸನಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇವರಕೊಂಡಾ ರೆಡ್ಡಿ (ಸಂ.), ೨೦೦೬,, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೯, ಬಾಗಲಕೋಟೆ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪರಮಶಿವಮೂರ್ತಿ ಡಿ.ವಿ., (ಸಂ.), ೨೦೦೭, ಪ್ರೌಢದೇವರಾಯನ ಶಾಸನಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹಾ.ಮಾ.ನಾಯಕ (ಪ್ರ.ಸಂ.), ೨೦೦೭, ಕನ್ನಡ ವಿಷಯ ವಿಶ್ವಕೋಶ, ಸಂಪುಟ–೨, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

**ಆನುಷಂಗಿಕ ಆಕರಗಳು**

**ಕನ್ನಡ ಪುಸ್ತಕಗಳು**

ಅಣ್ಣಿಗೇರಿ ಎ.ಎಂ., ೧೯೬೦, ಪಟ್ಟದಕಲ್ಲು ಗುಡಿಗಳು, ಕನ್ನಡ ಸಂಶೋಧನಾ ಸಂಸ್ಥೆ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಅಣ್ಣಿಗೇರಿ ಎ. ಎಂ., ೧೯೭೪, ಐಹೊಳೆ ಸಂಸ್ಕೃತಿ ಮತ್ತು ಕಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಅಣ್ಣಿಗೇರಿ ಎ. ಎಂ., ೧೯೮೫, ವಿಜಾಪುರದ ಶಿಲ್ಪಕಲಾ ವೈಭವ, ಭವಾನಿ ಪ್ರಕಾಶನ, ಧಾರವಾಡ.

ಅ ಸುಂದರ, ೧೯೭೨, ಪ್ರಾಚ್ಯವಸ್ತು ಸಂಶೋಧನೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಅ ಸುಂದರ, ೧೯೭೫, ಪಟ್ಟದಕಲ್ಲು, ಐಬಿಎಚ್ ಪ್ರಕಾಶನ, ಬೆಂಗಳೂರು.

ಆನಂದ ಕೆ. ಪೂಜಾರ, ೨೦೦೦, ಐತಿಹಾಸಿಕ ಬಾದಾಮಿ, ಶಾಂಭವಿ ಪ್ರಕಾಶನ, ಬಾದಾಮಿ.

ಉದಯರವಿ, ೨೦೧೦, ಹಾಸನ ಜಿಲ್ಲಾ ವೈಶಿಷ್ಟ್ಯ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಹಾಸನ.

ಕೃಷ್ಣರಾವ್ ಸಿ. ಆರ್., ೨೦೦೦, ವಿಶ್ವವಿಖ್ಯಾತ ನಗರಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಗೋಪಾಲ ಆರ್., (ಸಂ.), ೨೦೧೦, ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಗೋಪಾಲ ಆರ್., (ಸಂ.), ೨೦೧೦, ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೭೭, ಹಾಸನ ಜಿಲ್ಲಾ ದರ್ಶನ, ಐಬಿಎಚ್ ಪ್ರಕಾಶನ, ಬೆಂಗಳೂರು.

ಗಂಗಾಂಬಿಕೆ ಎಸ್., ೨೦೧೨, ಬೇಲೂರು, ಚೈತ್ರ ಪ್ರಕಾಶನ, ಬೆಂಗಳೂರು.

ಚಂದ್ರಪೂಜಾರಿ ಎಂ., (ಸಂ.), ೨೦೧೦, ಅಭಿವೃದ್ಧಿ ಅಧ್ಯಯನ ಸಂಪುಟ–೮, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಪ್ಪ ಸಿ., ೨೦೧೩, ಭಾರತದ ಐತಿಹಾಸಿಕ ನಗರಗಳು, ಅಕ್ಷರ ಮಂಟಪ, ಬೆಂಗಳೂರು.

